ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಭೂಪೇಶ್ ಗುಪ್ತ



ಲೋಕ ಸಭಾ ಸಚಿವಾಲಯ, ನವದೆಹಲಿ

ಕನ್ನಡ ಅನುವಾದ : ಕರ್ನಾಟಕ ವಿಧಾನ ಸಭೆ ಸಚಿವಾಲಯ

ವಿಧಾನಸೌಧ, ಬೆಂಗಳೂರು - 560 001

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು - ಬರಹಮಾಲಿಕೆ

# ಭೂಪೇಶ್ ಗುಪ್ತ

ಲೋಕಸಭಾ ಸಚಿವಾಲಯ, ನವ ದೆಹಲಿ

ಕನ್ನಡ ಅನುವಾದ:

ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು - 560 001.

**BHUPESH GUPTHA** : Pratibhavantha Smasadiya Patugala Baduku Baraha Malike (Eminent Parliamentarian Series) Published by Lok Sabha Secretariat, Translated by Karnataka Legislative Assembly Secretariat, Vidhana Soudha, Bangalore-01.

Pages - 169 + 9

Rupees - 20-00



First Edition, June, 1999

Number of Copies : 1,500

Second Edition, January, 2003

Number of Copies : 1,500

Printed and Designed by :

Government Printing Press, Bangalore-1.

ಭೂಪೇಶ ಗುಪ್ತ : ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ ಪ್ರಕಟಣೆ : ಲೋಕಸಭಾ ಸಚಿವಾಲಯ, ಕನ್ನಡ ಅನುವಾದ : ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು.

ಪುಟಗಳು - 169 + 9

ಬೆಲೆ - ರೂ 20-00



ಮೊದಲನೆ ಮುದ್ರಣ: ಜೂನ್, 1999

ಪ್ರತಿಗಳು : 1,500

ಎರಡನೆ ಮುದ್ರಣ: ಜನವರಿ, 2003

ಪ್ರತಿಗಳು : 1,500

ಮುಖ ಪುಟ ವಿನ್ಯಾಸ ಮತ್ತು ಮುದ್ರಣ :

ಸರ್ಕಾರಿ ಮುದ್ರಣಾಲಯ, ಬೆಂಗಳೂರು - 560 001.

# ಪೀಠಿಕೆ

ನಮ್ಮ ದೇಶ ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಮಡಿದ ಹಾಗೂ ನವ ಭಾರತ ನಿರ್ಮಾಣಕ್ಕಾಗಿ ಶ್ರಮಿಸಿದ ಪ್ರತಿಭಾನ್ವಿತ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಸಂಸದೀಯ ಪಟುಗಳನ್ನು ನೆನೆಸಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿರುತ್ತದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಗಣ್ಯರ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಮತ್ತು ಆಂಗ್ಲ ಭಾಷೆಗಳಲ್ಲಿ ಹೊರ ತಂದಿರುತ್ತಾರೆ. ಆದರೆ ನಮ್ಮ ಕರ್ನಾಟಕ ರಾಜ್ಯದ ಜನಪ್ರತಿನಿಧಿಗಳಿಗೆ ಹಾಗೂ ಜನತೆಗೆ ಈ ಪ್ರತಿಭಾವಂತರುಗಳ ಬದುಕು-ಬರಹ ಮತ್ತು ಸಾಧನೆಗಳನ್ನು ಪರಿಚಯಿಸುವ ದೃಷ್ಟಿಯಿಂದ ಈ ಕಿರುಹೊತ್ತಿಗೆಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ಪ್ರಕಟಿಸುವ ಒಂದು ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕೆಂದು ವಿಧಾನ ಪರಿಷತ್ತಿನ ಸನ್ಮಾನ್ಯ ಸಭಾಪತಿಯವರಾದ ಶ್ರೀ ಡಿ.ಬಿ.ಕಲ್ಮಣಕರ ಹಾಗೂ ವಿಧಾನ ಸಭೆಯ ಸನ್ಮಾನ್ಯ ಅಧ್ಯಕ್ಷರಾದ ಶ್ರೀ ರಮೇಶಕುಮಾರ ಅವರುಗಳು ಅಪೇಕ್ಷಿಸಿದಂತೆ ಈ ಕಾರ್ಯವನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ.ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯ ಪ್ರವೃತ್ತವಾಗಿ ಭಾಷಾಂತರ ಕಾರ್ಯವನ್ನು ಗುಲ್ಬರ್ಗಾದ ಆಂಗ್ಲ ಪ್ರಾಧ್ಯಾಪಕರಾದ ಶ್ರೀ ಆರ್.ಕೆ.ಹುಡುಗಿ ಅವರು ಭಾಷಾಂತರಿಸಿದ ಶ್ರೀ ಭೂಪೇಶ್ ಗುಪ್ತ ಅವರ ಕೃತಿಯನ್ನು ತಮ್ಮ ಮುಂದಿಡುತ್ತಿದ್ದೇನೆ.

ಇದು ಲೋಕಸಭಾ ಸಚಿವಾಲಯದವರು "Eminent Parliamentarians Monograph Series" ಎಂಬ ಆಂಗ್ಲ ಭಾಷೆಯ ಕನ್ನಡಾನುವಾದವಾಗಿದ್ದು, ಸದರಿ ಗ್ರಂಥದ ಪ್ರಕಾಶಕರಾದ ಲೋಕಸಭಾ ಸಚಿವಾಲಯಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅನುವಾದವನ್ನು ನಿರ್ವಹಿಸಿಕೊಟ್ಟ ಭಾಷಾಂತರಕಾರರಿಗೂ, ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಅನುಕೂಲ ಹಾಗೂ ಅನುಭವ ನೀಡುತ್ತದೆಂದು ಭಾವಿಸುತ್ತೇನೆ.

ಬೆಂಗಳೂರು
ಜೂನ್, 1999.

ಯಾಕೂಬ್ ಷರೀಫ್
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ ಸಚಿವಾಲಯ.

# ಎರಡನೇ ಮುದ್ರಣಕ್ಕೆ ಪೀಠಿಕೆ

1999 ರಲ್ಲಿ ಭೂಪೇಶ್ ಗುಪ್ತಾ ಅವರ ಅನುವಾದಿತ ಪುಸ್ತಕದ 1500 ಪ್ರತಿಗಳನ್ನು ಅಚ್ಚುಹಾಕಿಸಲಾಯಿತು. ಸದರಿ ಪುಸ್ತಕಕ್ಕೆ ಮಾನ್ಯ ಸದಸ್ಯರು ಮತ್ತು ಸಾರ್ವಜನಿಕರಿಂದ ಬೇಡಿಕೆ ಬಂದಿರುತ್ತದೆ. ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಪುಸ್ತಕಗಳನ್ನು ರಾಜ್ಯದ ಎಲ್ಲಾ ಹಂತದ ಗ್ರಂಥಾಲಯಗಳಿಗೆ ಸರಬರಾಜು ಮಾಡುವ ಬಗ್ಗೆ ಗ್ರಂಥಾಲಯ ಉಪ ಸಮಿತಿಯು ಕೈಗೊಂಡ ನಿರ್ಧಾರದ ಹಿನ್ನೆಲೆಯಲ್ಲಿ ಮರು ಮುದ್ರಣ ಮಾಡಲಾಗುತ್ತಿದೆ.

ಟಿ. ರಾಜಣ್ಣ
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ.

ಬೆಂಗಳೂರು
ಜನವರಿ, 2003.

# ಮುನ್ನುಡಿ

ಭಾರತದ ಸಂಸದೀಯ ಸಮೂಹವೂ ಇತ್ತೀಚಿಗೆ ಕೆಲವು ಪ್ರಖ್ಯಾತ ಸಂಸದೀಯ ಪಟುಗಳ ಜಯಂತೋತ್ಸವಗಳನ್ನು ಆಚರಿಸಿತು. ಈ ವಿಖ್ಯಾತ ಸಂಸದೀಯರು ನಮ್ಮ ರಾಷ್ಟ್ರೀಯ ಹಾಗೂ ಸಂಸದೀಯ ಬದುಕಿಗೆ ಕೊಡಮಾಡಿದ ಅಮೂಲ್ಯವೂ ಆದ ಕಾಣಿಕೆಗಳನ್ನು ನೆನಪಿಸಿಕೊಂಡು ಅವುಗಳನ್ನು ಪುನರ್‌ಪರಿಗಣಿಸುವುದೇ ಈ ಜಯಂತೋತ್ಸವಗಳ ಉದ್ದೇಶವಾಗಿತ್ತು. ಈ ದಿಸೆಯಲ್ಲಿ ಮಾಡಿದ ಪ್ರಯತ್ನದ ಫಲವಾಗಿಯೇ "ಪ್ರಖ್ಯಾತ ಸಂಸದೀಯ ಪಟುಗಳು" ಎಂಬ ಒಂದು ಹೊಸ ಗ್ರಂಥಮಾಲೆಯನ್ನು ಆರಂಭಿಸಲಾಯಿತು. 1990 ರ ಮಾರ್ಚ್‌ನಲ್ಲಿ ಆರಂಭವಾದ ಈ ಗ್ರಂಥಮಾಲೆಯ ಅಡಿಯಲ್ಲಿ ಈಗಾಗಲೇ ಡಾ.ರಾಮಮನೋಹರ ಲೋಹಿಯೂ, ಡಾ॥ ಲಂಕಾ ಸುಂದರ್‌ಂ ಹಾಗೂ ಡಾ॥ ಶಾಮ್ ಪ್ರಸಾದ ಮುಖರ್ಜಿಯವರನ್ನು ಕುರಿತು ಮೂರು ಗ್ರಂಥಗಳು ಬೆಳಕು ಕಂಡಿವೆ.

ಪ್ರಸ್ತುತ ಈ ಗ್ರಂಥವು ವಿಖ್ಯಾತ ಸಂಸದೀಯ ಪಟುಗಳಾಗಿದ್ದ ಹಾಗೂ ಭಾರತೀಯ ಕಮ್ಯುನಿಸ್ಟ್ ಪಕ್ಷದ ನುರಿತ ನೇತಾರರೂ ಆಗಿದ್ದ ಶ್ರೀ ಭೂಪೇಶ ಗುಪ್ತ ಅವರ ಬದುಕು ಹಾಗೂ ಸಂಸದೀಯ ಚಟುವಟಿಕೆಗಳ ಕುರಿತ ಒಂದಿಷ್ಟು ಒಳನೋಟಗಳನ್ನು ಬೀರಲು ಪ್ರಯತ್ನಿಸುತ್ತದೆ. ಈ ಕೃತಿಯನ್ನು ಏಕಕಾಲಕ್ಕೆ ಹಿಂದಿ, ಬೆಂಗಾಲಿ ಹಾಗೂ ಇಂಗ್ಲೀಷಿನಲ್ಲಿ ಪ್ರಕಟಿಸಲಾಗುತ್ತಿದೆ.

ಈ ಗ್ರಂಥ ಮೂರು ಭಾಗಗಳಿಂದ ಕೂಡಿದೆ. ಮೊದಲನೆ ಭಾಗದಲ್ಲಿ ಶ್ರೀ ಭೂಪೇಶ ಗುಪ್ತ ಅವರ ಬಾಲ್ಯದ ಬದುಕು, ಶಿಕ್ಷಣ ಹಾಗೂ ಅವರ ವಿಚಾರಧಾರೆಯ ಮೇಲೆ ಒಂದು ಇಣುಕು ನೋಟವನ್ನು ಒದಗಿಸುತ್ತದೆ. ಜೊತೆಗೆ ಸ್ವಾತಂತ್ರ್ಯ ಹೋರಾಟಗಾರರಾಗಿ ಅವರ ಪಾತ್ರ, ಭಾರತೀಯ ಕಮ್ಯುನಿಸ್ಟ್ ಪಕ್ಷದ ಧುರೀಣರಾಗಿ, ಸಮಾಜದ ದುರ್ಬಲ ವರ್ಗದವರ ಮುಂದಾಳಾಗಿ, ಮಹಿಳೆಯರ ಹಕ್ಕುಗಳ ಕಟ್ಟಾ ಬೆಂಬಲಿಗರಾಗಿ, ಜಾತ್ಯಾತೀತತೆ ಹಾಗೂ ರಾಷ್ಟ್ರೀಯ ಐಕ್ಯತೆಯ ಸಮರ್ಥರಾಗಿ, ಖ್ಯಾತ ಲೇಖಕರು, ಪತ್ರಕರ್ತರು ಆಗಿ, ಇದೆಲ್ಲಕ್ಕೂ ಮಿಗಿಲಾಗಿ, ಒಬ್ಬ ಪ್ರಖ್ಯಾತ ಸಂಸದೀಯ ಪಟುಗಳಾಗಿ, ಮಾಡಿದ ಹೋರಾಟ ನೀಡಿದ ಕಾಣಿಕೆಗಳ ಸಂಕ್ಷಿಪ್ತ ಪರಿಚಯ ಈ ಮೊದಲ ಭಾಗದ ವಸ್ತುವಾಗಿದೆ. ಈ ಗ್ರಂಥದ ಎರಡನೇ ಭಾಗವು ಶ್ರೀ ಭೂಪೇಶ ಗುಪ್ತ ಅವರು ಮೂರು ದಶಕಗಳಿಗೂ ಮಿಕ್ಕಿ ರಾಜ್ಯ

ಸಭೆಯ ಸದಸ್ಯರಾಗಿ ಪ್ರಸ್ತುತ ಪಡಿಸಿದ ಕೆಲವು ಆಯ್ದ ಭಾಷಣಗಳ ಭಾಗಗಳನ್ನು ಒಳಗೊಂಡಿದೆ. ಮೂರನೇ ಭಾಗದಲ್ಲಿ ಅವರ ವ್ಯಕ್ತಿತ್ವದ ವಿಶಿಷ್ಟ ಆಯಮದ ಪರಿಚಯ ಮಾಡಿಕೊಡುವ ಅಪರಿಚಿತ ಸಂಗತಿಗಳನ್ನು ಸಂಗ್ರಹಿಸಿಕೊಡಲಾಗಿದೆ; ಸದನದಲ್ಲಿ ಅವರು ಚರ್ಚೆ, ವಾದ-ವಿವಾದದಲ್ಲಿ ತೊಡಗಿದಾಗ ಹಾರಿಸಿದ ಚಟಾಕಿ, ಮಾರ್ನುಡಿದ ಜಾಣ್ನುಡಿಗಳು ಸಂಗ್ರಹಿತಗೊಂಡಿವೆ.

ಅವರ ಜಯಂತ್ಯೋತ್ಸವದ ಈ ಸಂದರ್ಭದಲ್ಲಿ ಭೂಪೇಶ ದಾ ಎಂದೇ ಚಿರಪರಿಚಿತರಾಗಿದ್ದ ಅವರ ನೆನಪಿಗೆ ನಮ್ಮ ಗೌರವ ಪೂರ್ಣ ಸಲ್ಲಿಸುತ್ತೇವೆ. ಹಿರಿಯರ ಸದನವೆಂದು ಕರೆಯಲಾಗುವ ರಾಜ್ಯ ಸಭೆಯಲ್ಲಿ ಅತ್ಯಂತ ಉನ್ನತ ವ್ಯಕ್ತಿತ್ವ ಪಡೆದವರಲ್ಲಿ ಒಬ್ಬರಾಗಿದ್ದ ಶ್ರೀ ಭೂಪೇಶ ಗುಪ್ತ ಅವರು ಕುರಿತಿರುವ ಈ ಗ್ರಂಥವನ್ನು ಜನತೆ ಆಸಕ್ತಿಯಿಂದ ಬರಮಾಡಿಕೊಂಡು ಓದಿ ಉಪಯೋಗ ಪಡೆದುಕೊಳ್ಳುವರೆಂದು ಆಶಿಸಲಾಗಿದೆ.

ನವ ದೆಹಲಿ
ಡಿಸೆಂಬರ್ - 1990

ರಬಿ ರೇ
ಅಧ್ಯಕ್ಷರು, ಲೋಕಸಭೆ
ಹಾಗೂ
ಅಧ್ಯಕ್ಷರು, ಭಾರತೀಯ ಸಂಸದೀಯ ಸಮೂಹ.

ಪರಿವಿಡಿ

# ಭೂಪೇಶ್ ಗುಪ್ತ

## ಭಾಗ - 1

## ಭೂಪೇಶ್ ಗುಪ್ತ - ಒಂದು ಕಿರು ಪರಿಚಯ

ಭಾರತೀಯ ಕಮ್ಯುನಿಸ್ಟ್ ಆಂದೋಲನದ ಉಜ್ವಲ ನೇತಾರರೂ ಸಮರ್ಥ ಸಂಸದೀಯ ಪಟುಗಳೂ ನಿರರ್ಗಳ ವಾಗ್ಮೀಗಳು ಆಗಿದ್ದ ಕಾ॥ ಭೂಪೇಶ್ ಗುಪ್ತ ಅವರು ಜನಿಸಿದ್ದು 20ನೇ ಅಕ್ಟೋಬರ್, 1914ರಲ್ಲಿ. ಅವರ ಜನ್ಮಸ್ಥಳ ಪೂರ್ವ ಬಂಗಾಲಿನ (ಈಗ ಬಾಂಗ್ಲಾದೇಶ) ಮೈಮೇನ್ ಸಿಂಗ್ ಜಿಲ್ಲೆಯ ಇಟ್ನಾ. ಅವರ ತಂದೆ ಶ್ರೀ ಮಹೇಶ್ಚಂದ್ರ ಗುಪ್ತ ಅವರು ಒಬ್ಬ ಶ್ರೀಮಂತ ಜಮಿನ್ದಾರರಾಗಿದ್ದರು. ಅಂಥ ಧನಿಕ ಕುಟುಂಬದಲ್ಲಿ ಹುಟ್ಟಿದ ಶ್ರೀ ಭೂಪೇಶ ಅವರು ಸಹಜವಾಗಿಯೇ ಆಯೇಶ ಆರಾಮದ ಬದುಕು ನಡೆಸುತ್ತಾ ಭೋಗ ವಿಲಾಸದಲ್ಲಿ ಮೈಮರೆಯಬಹುದಾಗಿತ್ತು. ಆದರೆ ಸುಖಲೋಲುಪ್ತತೆಯ ಬದುಕಿಗೆ ಅವರೆಂದೂ ಎಳಸಲಿಲ್ಲ. ದೇಶ ಸೇವೆಗೆ ತಮ್ಮನ್ನು ತೊಡಗಿಸಿಕೊಳ್ಳಬೇಕೆಂದು ಒತ್ತರಿಸಿ ಬಂದ ಒಳ ಬಯಕೆಯೇ ಅವರು ಸಮರ್ಪಣಾಭಾವದ ಸರಳ ಬದುಕು ನಡೆಸುವಂತೆ ಒತ್ತಾಯಿಸಿತು. ತಾಯ್ನಾಡಿನ ಮಹತ್ತರ ಕಾರಣಕ್ಕಾಗಿ ಅವರ ಬದುಕನ್ನು ಅರ್ಪಿಸುವಂತೆ ಮಾಡಿತು. ಹದಿನಾರರ ಹದಿ ಹರೆಯದ ವಯಸ್ಸಿನಲ್ಲಿಯೇ ಅವರು ರಾಷ್ಟ್ರೀಯ ಸೇವಾ ಕ್ಷೇತ್ರಕ್ಕೆ ಧುಮುಕ್ಕಿದರು. ಅನಂತ ಕಷ್ಟ ಕಾರ್ಪಣ್ಯದ ದಾರಿ ಅದಾಗಿತ್ತು ಎಂಬುದನ್ನರಿತೂ ಅವರು ಧೀಮಂತಿಕೆಯ ಹೆಜ್ಜೆ ಇಡುತ್ತ ಮುನ್ನಡೆದರು. ಶ್ರೀಮಂತ ಬದುಕಿನ ಸುಖ - ಭೋಗದಿಂದ ದೂರಾದುದಕ್ಕೆ ಅವರೆಂದೂ ವ್ಯಥೈಪಡಲಿಲ್ಲ. ಧನವಂತಿಕೆಯ ಆದ್ಯತೆ ಸುಖ - ಲೋಲುಪ್ತತೆ ಇತ್ಯಾದಿಯನ್ನು ಉದ್ದೇಶ ಪೂರ್ವಕವಾಗಿಯೇ ತ್ಯಜಿಸಿ ತಮ್ಮ ಸಾಮಾಜಿಕ ಹಿನ್ನೆಲೆಯಿಂದ ಪ್ರಜ್ಞಾಪೂರ್ವಕವಾಗಿಯೇ ಪರಭಾರೆ ಆಗಿದ್ದರು. ತತ್ಕಾರಣವಾಗಿ ಈ ಕುರಿತು ಅವರೆಂದೂ ಹಳ ಹಳಸಿಲಿಲ್ಲ. ತಾರುಣ್ಯದಲ್ಲಿಯೇ ಸಾರ್ವಜನಿಕ ಜೀವನದೊಂದಿಗೆ ಸಂಲಗ್ನಗೊಂಡಿದ್ದ ಅವರು ಬದುಕಿನಾದ್ಯಂತ ಬ್ರಹ್ಮಚಾರಿಯಾಗಿ ಉಳಿದಿದ್ದು ಆಶ್ಚರ್ಯದ ಮಾತೇನಲ್ಲ. ಕಮ್ಯುನಿಷ್ ಆಂದೋಲನ ಹಾಗೂ ರಾಷ್ಟ್ರ ಸೇವೆಗೆ ಮುಡುಪಾಗಿರಿಸಿದ್ದ ತದೇಕಚಿತ್ತದ ಶ್ರದ್ಧೆ ಭೂಪೇಶ ಗುಪ್ತ ಅವರ ಸದುದ್ದೇಶದ ಆಯ್ಕೆಯ ಫಲವಾಗಿತ್ತು.

### ಶಿಕ್ಷಣ

ವಿದ್ಯಾರ್ಥಿ ಜೀವನದುದ್ದಕ್ಕೂ ತುಂಬಾ ಪ್ರತಿಭಾವಂತರೆನಿಸಿಕೊಂಡಿದ್ದ ಶ್ರೀ ಭೂಪೇಶ್ ಗುಪ್ತ ಅವರ ಆರಂಭದ ಕಾಲೇಜು ಶಿಕ್ಷಣ ನಡೆದದ್ದು ಕಲ್ಕತ್ತೆಯ ಸ್ಕಾಟಿಷ್ ಚರ್ಚ್ ಕಾಲೇಜಿನಲ್ಲಿ ಹೆಚ್ಚಿನ ವ್ಯಾಸಂಗ ನಡೆಸಿದರು. ಎಳೆ ವಯಸ್ಸಿನಲ್ಲಿಯೇ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ ಸೆಳವಿಗೆ ಬಿದ್ದ ಭೂಪೇಶ ಅನೇಕ ಸಲ ಬಂಧಿಸಲ್ಪಟ್ಟು ಸೆರೆವಾಸವನ್ನೂ

ಅನುಭವಿಸಿದರು. ಆದರೆ ಇದಾವುದೂ ಅವರ ಜ್ಞಾನದಾಹವನ್ನು ದಮನಿಸಲಿಲ್ಲ. ಬೇರ್ಹಾಂಪೂರ ಬಂಧೀಖಾನೆಯಿಂದಲೇ ಇಂಟರ್‌ಮಿಡಿಯೆಟ್ ಮತ್ತು ಬಿ.ಎ. ಪರೀಕ್ಷೆಗಳಿಗೆ ಕುಳಿತು ಕಲ್ಕತ್ತಾ ವಿಶ್ವವಿದ್ಯಾಲಯದ ಪದವಿಯನ್ನು ಡಿಸ್ಟಿಂಗ್‌ಷನ್‌ನೊಂದಿಗೆ ಪಡೆದರು. ಅನಂತರ ಅವರ ತಂದೆ ತಮ್ಮ ಮಗನನ್ನು ಹೆಚ್ಚಿನ ಅಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಪರವಾನಿಗೆ ಕೋರಿ ಸರ್ಕಾರಕ್ಕೆ ಮನವಿ ಸಲ್ಲಿಸಿದರು. ಸರ್ಕಾರ ಒಪ್ಪಿಗೆ ಇತ್ತುದರಿಂದಾಗಿ ಶ್ರೀ ಭೂಪೇಶ ಗುಪ್ತ ಇಂಗ್ಲೆಂಡಿಗೆ ತೆರಳಿ ಕಾನೂನು ವ್ಯಾಸಂಗ ಮಾಡಿ ಲಂಡನ್ನಿನ ಮಿಡಲ್ ಟೆಂಪಲ್‌ನಿಂದ ಬ್ಯಾರಿಸ್ಟರ್ ಪದವಿ ಪಡೆದರು.

## ಸ್ವಾತಂತ್ರ್ಯ ಹೋರಾಟಗಾರ :

ಹುಟ್ಟು ಹೋರಾಟಗಾರರಾಗಿದ್ದ ಭೂಪೇಶ್ ಗುಪ್ತ ತಮ್ಮ ವಿದ್ಯಾರ್ಥಿ ದೆಸೆಯಿಂದಲೇ ಬ್ರಿಟೀಷ್ ಸಾಮ್ರಾಜ್ಯಶಾಹಿಯ ವಿರುದ್ಧ ಸಂಘರ್ಷಕ್ಕೆ ಇಳಿದಿದ್ದರು. ಸ್ವಾತಂತ್ರ್ಯ ನಂತರವೂ ಕೂಡಾ ಅವರು ನವ್ಯವಸಾಹತುಶಾಹಿಯ ಹಾಗೂ ಇನ್ನಾವುದೇ ರೀತಿಯ ದಬ್ಬಾಳಿಕೆಯ ವಿರುದ್ಧ ತಮ್ಮ ಧೀರ ಹೋರಾಟ ಮುಂದುವರೆಸಿದರು. ಅವರ ಸಂಘರ್ಷದ ಮೊನಚು ಮತ್ತು ಜಿಗಟುತನ ಅನನ್ಯವಾದವುಗಳಾಗಿದ್ದವು.

ತಾಯ್ನಾಡಿನ ಮಹತ್ಕಾರಣಕ್ಕೆ ಸಂಪೂರ್ಣವಾಗಿ ಸಮರ್ಪಿಸಿಕೊಂಡಿದ್ದ ಶ್ರೀ ಭೂಪೇಶ್ ಗುಪ್ತ ತಾರುಣ್ಯದಲ್ಲಿಯೇ ರಾಷ್ಟ್ರೀಯ ಕ್ರಾಂತಿಕಾರಿಗಳ ಮಾಂತ್ರಿಕ ಸುಳಿಗೆ ಸೆಳೆಯಲ್ಪಟ್ಟಿದ್ದರು. "ಅನುಶೀಲನ" ಎಂದು ಕರೆಯಲ್ಪಡುತ್ತಿದ್ದ ಒಂದು ಕ್ರಾಂತಿಕಾರಿ ಗುಂಪಿಗೆ ಅವರು ಸೇರಿಕೊಂಡರು. ವಿಖ್ಯಾತ ಕ್ರಾಂತಿಕಾರಿ ನಾಯಕರಾಗಿದ್ದ ಸುರೇಂದ್ರ ಮೋಹನ್ ಘೋಷ್ ಈ ಸಂಘಟನೆಯ ನೇತಾರರಾಗಿದ್ದರು. ನಾಗರಿಕ ಅಸಹಕಾರ ಚಳುವಳಿಯಲ್ಲಿ ಕ್ರಿಯಾಶೀಲರಾಗಿ ಭಾಗವಹಿಸಿ 1930, 1931, ಹಾಗೂ 1933ರ ಅವಧಿಯಲ್ಲಿ ಅನೇಕ ಸಲ ಬಂಧನಕ್ಕೊಳಗಾಗಿ 1937ರ ವರೆಗೆ ಕಾರಾಗೃಹ ಶಿಕ್ಷೆಯನ್ನು ಅನುಭವಿಸಿದರು. ಆದರೆ ಇದಾವುದೂ ಭೂಪೇಶ್ ಗುಪ್ತ ಅವರ ಅದಮ್ಯ ಚೇತನವನ್ನು ಬಗ್ಗುಬಡಿಯಲಿಲ್ಲ; ರಾಷ್ಟ್ರ ಸೇವೆಯ ಅವರ ಅಚಲ ನಿರ್ಧಾರವನ್ನು ಅಲುಗಾಡಿಸಲಿಲ್ಲ. ಈ ಸಂದರ್ಭದಲ್ಲಿಯೇ ಅವರ ತಂದೆ ಅವರನ್ನು ಕ್ರಾಂತಿಕಾರಿ ಆಂದೋಲನದಿಂದ ದೂರವಿಡುವ ಉದ್ದೇಶದಿಂದ ಇಂಗ್ಲೆಂಡಿಗೆ ಕಳಿಸುವ ಏರ್ಪಾಡು ಮಾಡಿದರು. ಆದರೆ ಇಂಗ್ಲೆಂಡಿನಲ್ಲಿಯೂ ಸಹ ಭೂಪೇಶ ಗುಪ್ತ ಅವರು ಭಾರತೀಯ ವಿದ್ಯಾರ್ಥಿಗಳ ಹೋರಾಟದಲ್ಲಿ ಪಾಲ್ಗೊಳ್ಳಲು ಆರಂಭಿಸಿದರು. ವಿದೇಶಿ ಆಳ್ವಿಕೆಯಿಂದ ತಮ್ಮ ತಾಯ್ನಾಡನ್ನು ವಿಮೋಚನೆಗೊಳಿಸಬೇಕೆಂಬುದೇ ಆ ವಿದ್ಯಾರ್ಥಿ ಸಂಘರ್ಷದ ಆಶಯವಾಗಿತ್ತು. ಈ ರೀತಿಯಾಗಿ, ತಮ್ಮ ಬಾಲ್ಯದ ಆರಂಭದಿಂದಲೇ ಭೂಪೇಶ ಗುಪ್ತ ಅವರು ರಾಷ್ಟ್ರೀಯ ವಿಮೋಚನೆಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡು ಸತತ ಪರಿಶ್ರಮ, ಅವಿಚ್ಛಿನ್ನ ಪ್ರಯತ್ನ ಹಾಗೂ ಅನನ್ಯ ತ್ಯಾಗದ ಬದುಕು ನಡೆಸಿದರು.

## ಸಮರ್ಥ ಸಾಮ್ಯವಾದಿ :

ಆಗರ್ಭ ಶ್ರೀಮಂತ ಜಮೀನ್ದಾರ್ ಕುಟುಂಬದ ಸುಪುತ್ರನಾಗಿ ಜನಿಸಿದ್ದರೂ ಶ್ರೀ ಭೂಪೇಶ್ ಗುಪ್ತ ಐಹಿಕ ಸುಖ ಭೋಗಗಳಿಗೆ ಎಂದೂ ಮನಸೋಲಲಿಲ್ಲ. ಮೇಲುವರ್ಗದ ಆಜನ್ಮ ಸಂಗಾತಿಗಳಾದ ಭೋಗ ಭಾಗ್ಯದ ಲಾಲಸೆ ಅವರ ಹತ್ತಿರವೂ ಸುಳಿಯಲಿಲ್ಲ. ಮೋಜು ಮೇಜವಾನಿಯ ಬದುಕನ್ನು ಸದಾ ದೂರವಿರಿಸಿದರು. ಶ್ರೀ ಭೂಪೇಶ್ ಗುಪ್ತ ಅವರದು ಧನ ಕನಕದ ಬಗ್ಗೆ ಒಂದು ರೀತಿಯ ನಿರ್ಯಮ ಹಾಗೂ ನಿರ್ಲಿಪ್ತತೆಯ ಬದುಕು. 1930ರಷ್ಟು ಹಿಂದೆಯೇ ಸುರೇಂದ್ರ ಮೋಹನ್ ಘೋಷ್ ಅವರ ಕ್ರಾಂತಿಕಾರಿ ಗುಂಪಿನ ಸದಸ್ಯರಾಗಿದ್ದುದ್ದಕ್ಕಾಗಿ ಬಂಧನಕ್ಕೊಳಗಾಗಿ ಸೆರೆವಾಸ ಆರಂಭಿಸಿದಂದಿನಿಂದಲೇ ಕಮ್ಯುನಿಸ್ಟ್ ವಿಚಾರಧಾರೆ ಅವರ ಮನಸ್ಸನ್ನು ಸೂರೆಗೊಂಡಿತ್ತು. ಸಾಮ್ಯವಾದಿ ತತ್ವ ಪ್ರಣಾಳಿಕೆಯಿಂದ ಸಂಮ್ಮೋಹಿತರಾಗಿದ್ದ ಶ್ರೀ ಗುಪ್ತ ಅವರು ತಮ್ಮ ಬಾಳಿನುದ್ದಕ್ಕೂ ವಿಚಲಿತರಾಗಲಿಲ್ಲ. ಒಪ್ಪಿಕೊಂಡದ್ದನ್ನು ಅಪ್ಪಿಕೊಳ್ಳುವ ಗಟ್ಟಿಗ ಅವರಾಗಿದ್ದರು. ಜೈಲಿನಲ್ಲಿದ್ದಾಗ ಮಾರ್ಕ್ಸ್‌ವಾದಿ ವಿಚಾರಧಾರೆಯ ಮಾನವೀಯ ಗುಣಗಳು ಹಾಗೂ ಪ್ರಖರ ವಿಚಾರಗಳು ಅವರ ಮೇಲೆ ಅಚ್ಚಳಿಯದ ಮುದ್ರೆ ಒತ್ತಿದ್ದವು.

ಇಂಗ್ಲೆಂಡಿನಲ್ಲಿ ತಮ್ಮ ವ್ಯಾಸಂಗದ ಭೂಪೇಶ ದಾ- ಅವರ ಗೆಳೆಯ ಮತ್ತು ಸಹವರ್ತಿಗಳಿಂದ ಹೀಗೆಂದೇ ಪ್ರೀತಿಯಿಂದ ಕರೆಯಲ್ಪಡುತ್ತಿದ್ದರು. 1941ರಲ್ಲಿ ಭಾರತಕ್ಕೆ ಹಿಂದಿರುಗಿದರು. ಅಂದಿನಿಂದ ತಮ್ಮ ಅಂತಿಮ ಉಸಿರಿನವರೆಗೂ ಅವರೂ ಭಾರತೀಯ ಕಮ್ಯುನಿಸ್ಟ್ ಪಕ್ಷದ ಪೂರ್ಣಾವಧಿ ಕಾರ್ಯಕರ್ತರಾಗಿ, ನಾಯಕರಾಗಿ ಬದುಕು ಸವೆಸಿದರು. ಆರಂಭದಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷದ ಭೂಗತ ಪ್ರಧಾನ ಕಚೇರಿಯಲ್ಲಿ ಕೆಲಸ ಮಾಡಿದರು. 1941ರಲ್ಲಿ ಸ್ಥಾಪನೆಗೊಂಡ ಫ್ರೆಂಡ್ಸ್ ಆಫ್ ಸೋವಿಯತ್ ಯೂನಿಯನ್ (ಎಫ್.ಎಸ್.ಯು)ನ ಸಂಸ್ಥಾಪಕ ಸದಸ್ಯರಲ್ಲಿ ಅವರೂ ಒಬ್ಬರಾಗಿದ್ದರು. 1947ರಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷದ ಪಶ್ಚಿಮ ಬಂಗಾಲಿನ ಪ್ರಾಂತೀಯ ಸಮಿತಿಗೆ ಆಯ್ಕೆಯಾದರು. ಆಮೇಲೆ 1951ರಲ್ಲಿ ಪಕ್ಷದ ಬಂಗಾಲಿ ದೈನಿಕವಾಗಿದ್ದ "ಸ್ವಾಧಿನತ್" ಪತ್ರಿಕೆಯ ಸಂಪಾದಕ ಮಂಡಳಿಯ ಅಧ್ಯಕ್ಷರಾಗಿ ನೇಮಕವಾದರು. 1951ರಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷವನ್ನು ಸರಕಾರ ಕಾನೂನು ಬಾಹಿರವೆಂದು ಘೋಷಿಸಿದ್ದರ ಪರಿಣಾಮವಾಗಿ ಭೂಪೇಶ -ದಾ ಬಂಧನಕ್ಕೊಳಗಾಗಿ ಏಪ್ರಿಲ್ 1952ರ ವರೆಗೆ ಕಾರಾಗೃಹವಾಸಿಗಳಾಗಿ ಕಾಲ ನೂಕಿದರು.

1953ರ ಡಿಸೆಂಬರ್‌ನಲ್ಲಿ ಮಧುರೈನಲ್ಲಿ ನಡೆದ ಭಾರತೀಯ ಕಮ್ಯುನಿಸ್ಟ್ ಪಕ್ಷದ ತೃತೀಯ ಮಹಾ ಅಧಿವೇಶನದಲ್ಲಿ ಕಾ।। ಭೂಪೇಶ್ ಗುಪ್ತ ಕೇಂದ್ರ ಸಮಿತಿಗೆ ಚುನಾಯಿತರಾದರು. ಆಮೇಲೆ 1956ರಲ್ಲಿ ಪಾಲ್ ಘಾಟ್ ಮಹಾ ಅಧಿವೇಶನದಲ್ಲಿ ಮತ್ತೊಮ್ಮೆ ಕೇಂದ್ರ ಸಮಿತಿಗೆ ಚುನಾಯಿತರಾದರು. ಆನಂತರ ಕಮ್ಯುನಿಸ್ಟ್ ಪಕ್ಷದ ಪಾಲಿಟ್ ಬ್ಯೂರೋದ ಪದಾಧಿಕಾರಕ್ಕೇರಿದರು. ಅಂದಿನಿಂದಲೂ ಕಮ್ಯುನಿಸ್ಟ್ ಪಕ್ಷದ ಅನೇಕ ಪ್ರಮುಖ

ಸ್ಥಾನಮಾನಗಳನ್ನು ಅವರು ಅಲಂಕರಿಸಿದರು. 1981ರಲ್ಲಿ ಅವರು ಸಾವನಪ್ಪಿದ್ದಾಗ ಭಾರತೀಯ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಕಾರ್ಯನಿವಾಹಕ ಸಮಿತಿಯ ಸದಸ್ಯರಾಗಿದ್ದರು. ಅಷ್ಟೇ ಅಲ್ಲ, ಪಕ್ಷದ ರಾಷ್ಟ್ರೀಯ ಪರಿಷತ್ತಿನ ಕಾರ್ಯದರ್ಶಿಗಳೂ ಆಗಿದ್ದರು.

ಭಾರತ ಚೀನ ಗಡಿ ಯುದ್ಧದ ನಂತರ 1964ರಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷ ವಿಭಜನೆಗೊಂಡಾಗ ಶ್ರೀ ಗುಪ್ತ ಈ ವಿಭಜನೆಯನ್ನು ತಡೆಯಲು ತಮ್ಮಿಂದ ಸಾಧ್ಯವಿದ್ದ ಪ್ರಯತ್ನಗಳನ್ನು ಮಾಡಿದರು. ಏಕೆಂದರೆ ಅಖಂಡ ಪಕ್ಷದಲ್ಲಿಯ ಈ ವಿಭಜನೆ ಬಡ ಭಾರತದಲ್ಲಿ ಕಮ್ಯುನಿಸ್ಟ್ ಆಂದೋಲನದ ಮೇಲೆ ದುಷ್ಪರಿಣಾಮ ಬೀರಿ, ಕ್ರಮೇಣ ಅದನ್ನು ದುರ್ಬಲಗೊಳಿಸುವುದೆಂಬ ಭಾವನೆ ಅವರದ್ದಾಗಿತ್ತು. ಪಕ್ಷದೊಳಗೆ ಎಡ ಮತ್ತು ಬಲ ಪಂಕ್ತಿಯ ನಡುವಿನ ವೈಚಾರಿಕ ತಾಕಲಾಟ ಪಕ್ಷವನ್ನು ಅಶಕ್ತಗೊಳಿಸಬಹುದೆಂಬ ಭಯ ಅವರದ್ದಾಗಿತ್ತು. ಪಕ್ಷವು ಸಿ.ಪಿ.ಐ ಮತ್ತು ಸಿ.ಪಿ.ಐ (ಎಮ್) ಎಂದು ಎರಡು ಹೋಳಾದ ಮೇಲೂ ಎರಡು ಪಕ್ಷಗಳ ನಡುವೆ ಪುನರ್ ಹೊಂದಾಣಿಕೆಯನ್ನು ತರಲು ಭೂಪೇಶ ಗುಪ್ತ ಶತಪ್ರಯತ್ನಮಾಡಿದರು. ಸಿ.ಪಿ.ಐ. ಮತ್ತು ಸಿ.ಪಿ.ಐ (ಎಮ್) ಜೊತೆಗೆ ಒಂದು ಸಾಮಾನ್ಯ ಕಾರ್ಯಕ್ರಮವನ್ನು ರೂಪಿಸಿ ಮುನ್ನಡೆಯಬೇಕೆಂಬುದು, ಆ ಮೇಲೆ ಕ್ರಮೇಣ ಮಾತುಕತೆಗಳ ಮೂಲಕ ಪುನರ್ ಏಕೀಕರಣ ಸಾಧಿಸಬೇಕೆಂಬುದು ಅವರ ಬಯಕೆಯಾಗಿತ್ತು. ಆದರೂ ಏಕೀಕರಣದ ಈ ಕಗ್ಗಂಟನ್ನು ಅವರಿಂದ ಎಂದೂ ಬಿಚ್ಚಲಾಗಲಿಲ್ಲ.

"ಈ ಸದನದಲ್ಲಿ ನಾನು ಸ್ಪಷ್ಟಪಡಿಸುವುದೇನೆಂದರೆ, ರಾಷ್ಟ್ರದ ರಕ್ಷಣೆಯನ್ನು ವಿರೋಧಿಸುವ ಅಥವಾ ಈಗ ನಡೆಸಲಾದ ವಿದೇಶಿ ಆಕ್ರಮಣದ ಬಗ್ಗೆ ಸಹಾನುಭೂತಿ ತೋರುವ ಯಾವುದೇ ಕಮ್ಯುನಿಸ್ಟ್ ಅಥವಾ ಕಾರ್ಮಿಕ ನಾಯಕನನ್ನು ನಾನು ಈ ವರೆಗೆ ಕಂಡಿಲ್ಲ. ಇಂತವರು ಯಾರಾದರೂ ಇದ್ದರೆ ಅಥವಾ ರಾಷ್ಟ್ರೀಯ ರಕ್ಷಣೆಯ ಗೊತ್ತುವಳಿಯನ್ನಷ್ಟೇ ಅಲ್ಲ ಇಂದಿನ ರಾಷ್ಟ್ರದ ದೇಶ ಪ್ರೇಮದ ನಿಲುವನ್ನು ವಿರೋಧಿಸುವವರು ಯಾರಾದರೂ ಇದ್ದರೆ - ಇಂದಿನ ದೇಶ ಪ್ರೇಮಿ ನಿಲುವು ಹಾಗೂ ನಮ್ಮ ವಿಚಾರಧಾರೆ ಇವುಗಳಲ್ಲಿ ಯಾವುದೇ ಭಿನ್ನ ಭಾವವಿಲ್ಲ - ಅವನು ಒಬ್ಬ ಆದರ್ಶ ಕಮ್ಯುನಿಸ್ಟ್‌ನಾಗಿರಲು ಸಾಧ್ಯವಿಲ್ಲ. ಅಷ್ಟೇ ಅಲ್ಲ, ಅವನು ಈ ಕಮ್ಯುನಿಸ್ಟ್ ಪಕ್ಷ ಮತ್ತು ಆಂದೋಲನದ ಗಡಿ ಯಾಚೆಗೆ ಹೊರಹಾಕಲ್ಪಡುತ್ತಾನೆ.

ಶ್ರೀ ಭೂಪೇಶ್ ಗುಪ್ತರವರು ವಿದೇಶಗಳಲ್ಲೂ ವಿಖ್ಯಾತರಾಗಿದ್ದರು. ವಿಶೇಷವಾಗಿ ಅಂತರಾಷ್ಟ್ರೀಯ ಕಮ್ಯುನಿಸ್ಟ್ ಆಂದೋಲನಕ್ಕೆ ಸೇರಿದಂದಿನಿಂದಲೂ ಕಾ|| ಭೂಪೇಶ ಗುಪ್ತ ಅವರು ಒಬ್ಬ ಕಟ್ಟಾ ಅಂತರಾಷ್ಟ್ರೀಯ ವಾದಿಗಳಾಗಿದ್ದರು. ಒಬ್ಬ ಭಾರತೀಯ ಕಮ್ಯುನಿಸ್ಟ್ ನೇತಾರರಾಗಿ, ಪ್ರಮುಖ ಮುಂದಾಳುಗಳಾಗಿ ಅನೇಕ ರಾಷ್ಟ್ರೀಯ ಸಭೆ ಸಮಾವೇಶಗಳಲ್ಲಿ ಸದಾ ಮಿಂಚುತ್ತಿದ್ದರು. ಯಾವುದೇ ಸಂದರ್ಭದಲ್ಲಿಯೂ ಎದ್ದು ಕಾಣುವ ವ್ಯಕ್ತಿತ್ವ

ಅವರದಾಗಿತ್ತು. ವರ್ಣ ಬೇಧ, ಜನಾಂಗೀಯ ವಾದದ ವಿರುದ್ಧ ನಿರ್ಧಾರಕ ಸಮರ ಸಾರಿದ ಧೀರ ದುರಂಧರ ಅವರಾಗಿದ್ದರು. 1979ರಲ್ಲಿ ಜಮೈಕಾದ ಕಿಂಗಸ್ಟನ್ ನಗರದಲ್ಲಿ ಜರುಗಿದ ಕಾಮನ್‌ವೆಲ್ತ್‌ನ ಸಂಸದೀಯ ಸಂಘದ ಮಹಾ ಅಧಿವೇಶನದಲ್ಲಿ ಭೂಪೇಶ-ದಾ ಮಾಡಿದ ಪ್ರಜ್ವಲ ಭಾಷಣ ಅವಿಸ್ಮರಣೀಯ. ವರ್ಣಭೇದ ಮತ್ತು ಜನಾಂಗೀಯವಾದವನ್ನು ಸಮರ್ಥಿಸಲು ಪ್ರಯತ್ನಿಸುತ್ತಿದ್ದವರ ವಿರುದ್ಧ ಭೂಪೇಶ ಗುಪ್ತ ಅವರು ಬಿಟ್ಟ ವಾಗ್ಬಾಣ, ಆಡಿದ ಕಿಡಿ ನುಡಿ, ಅವರನ್ನು ಒಬ್ಬ ವಿಶಿಷ್ಟ ಹೋರಾಟಗಾರನನ್ನಾಗಿ ಹೊರಹೊಮ್ಮಿಸಿದವು. ಅವರನ್ನು "ಕಿಂಗಸ್ಟನ್ ಕಾನ್ಫರೆನ್ಸಿನ ಹೀರೋ" ನನ್ನಾಗಿ ಮಾಡಿದವು. ಅವರು ಭೂಪಾಲದಲ್ಲಿ ನಡೆದ ಕಮ್ಯುನಿಸ್ಟ್ ಅಂದೋಲನದ ಸಿದ್ಧತಾ ಸಭೆಗೂ ಹಾಜರಾಗಿದ್ದರು. 1957, 1960 ಹಾಗೂ 1969ರಲ್ಲಿ ಜರುಗಿದ ಜಾಗತಿಕ ಕಮ್ಯುನಿಸ್ಟ್ ಪಕ್ಷದ ನಿಯೋಗದ ಸದಸ್ಯರಾಗಿ ಭಾಗವಹಿಸಿದ್ದರು. ಅಷ್ಟೇ ಅಲ್ಲ, 1959ರಲ್ಲಿ ದಿ.ಕಾ॥ ಅಜಯ ಘೋಷ್ ಅವರ ನೇತೃತ್ವದಲ್ಲಿ ಚೀನಾಕ್ಕೆ ಭೇಟಿಕೊಟ್ಟು ಮಾವುತ್ಸೇ ತುಂಗರನ್ನು ಸಂದರ್ಶಿಸಿದ ಭಾರತೀಯ ಕಮ್ಯುನಿಸ್ಟ್ ಪಕ್ಷದ ನಿಯೋಗದಲ್ಲಿ ಭೂಪೇಶ ಗುಪ್ತ ಅವರು, ಭಾಗವಹಿಸಿದ್ದರು.

ಭೂಪೇಶ್ ಗುಪ್ತ ಅಂತರಾಷ್ಟ್ರೀಯ ಶಾಂತಿ ಸಮಿತಿಯ ಸದಸ್ಯರೂ ಆಗಿದ್ದರು. ಜಾಗತಿಕ ಶಾಂತಿಗಾಗಿ ಮತ್ತು ಸಾಮ್ರಾಜ್ಯಶಾಹಿಯ ವಿರುದ್ಧ ಅವರು ಮಾಡಿದ ಹೋರಾಟ ಆದರ್ಶಪ್ರಾಯವಾದುದ್ದು. ಈ ಅಂತರಾಷ್ಟ್ರೀಯ ಶಾಂತಿ ಸಮಿತಿಯೊಂದಿಗೆ ಅವರಿಗಿದ್ದ ಸಂಬಂಧ ತೀರಾ ಘನಿಷ್ಟವಾಗಿತ್ತು. ನಿಜವೆಂದರೆ, ಈ ಸಮಿತಿಯ ಸಭೆಯೇ ಅವರು ಭಾಗವಹಿಸಿದ ಕೊನೆಯ ಸಭೆಯಾಯಿತು. 1981ರ ಜೂನ್ 22ರಂದು ಭಾರತದಿಂದ ಪ್ರಯಾಣಿಸಿದ ಅವರು ಅಂತರಾಷ್ಟ್ರೀಯ ಶಾಂತಿ ಸಮಿತಿ ಸಂಘಟಿಸಿದ ಅಧಿವೇಶನದಲ್ಲಿ ಭಾಗವಹಿಸಿ ನಂತರ, ಡಮಾಸ್ಕಸ್‌ನಲ್ಲಿ ನಡೆಯಲಿದ್ದ ಸಿರಿಯಾ ಮತ್ತು ಪ್ಯಾಲಿಸ್ಟೈನ್ ಲಿಬಿರೇಷನ್ ಆರ್ಗನೈಜೇಶನ್ (ಪಿ.ಎಲ್.ಓ) ಇವುಗಳೊಂದಿಗೆ, ಸೌಹಾರ್ದತೆಯನ್ನು ಸೂಚಿಸಲು ಕರೆಯಲಾಗಿದ್ದ ಅಂತರಾಷ್ಟ್ರೀಯ ಸೌಹಾರ್ದತಾ ಸಮಾವೇಶದಲ್ಲಿ ಪಾಲ್ಗೊಳ್ಳುವವರಿದ್ದರು.

ಕಮ್ಯುನಿಸ್ಟ್ ವಿಚಾರ ಧಾರೆಯಲ್ಲಿ ಅವರಿಗಿದ್ದ ಅವ್ಯಾಹತ ಶ್ರದ್ಧೆಯಿಂದಾಗಿ, ಅಪಾರ ತುಡಿತದಿಂದಾಗಿ, ಅವರೊಬ್ಬ ಭಾರತೀಯ ಕಮ್ಯುನಿಸ್ಟ್ ಪಕ್ಷದ ಪ್ರಮುಖ ನೇತಾರರಾಗಿ ಖ್ಯಾತಿಗಳಿಸಿದ್ದರು. ಸದಾ ಲವಲವಿಕೆ ಹಾಗೂ ಜಾಗೃತಿಗೆ ಸಂಕೇತವಾಗಿದ್ದ ಅವರು ಅದಮ್ಯ ಉತ್ಸಾಹದ ರಾಜಕಾರಣಿಯಾಗಿದ್ದರು. ದಮನಕ್ಕೊಳಗಾದ, ತುಳಿಯಲ್ಪಟ್ಟ ನತದೃಷ್ಟ ಹತ ಭಾಗ್ಯರೊಂದಿಗೆ ತಮ್ಮನ್ನು ತಾದ್ಯಾತ್ಮಗೊಳಿಸಿದ ಕಾ॥ ಭೂಪೇಶ ಗುಪ್ತ ನಡೆ-ನುಡಿ ಒಂದಾಗಿಸಿಕೊಂಡ ಒಬ್ಬ ಅನುಪಮ ಸಂಸದೀಯ ಪಟುವಾಗಿದ್ದರು.

ಅವರ ರಾಜಕೀಯ ಬದುಕಿನುದ್ದಕ್ಕೂ ಅವರು ಕಮ್ಯುನಿಸ್ಟ್ ಪಕ್ಷದ ಸಮರ್ಪಿತ ಸೈನಿಕರಾಗಿ, ರಾಷ್ಟ್ರೀಯವಾದಿಗಳಾಗಿ, ಅಂತರಾಷ್ಟ್ರೀಯವಾದಿಗಳಾಗಿ, ಕೈಗೊಂಡ ಚಟುವಟಿಕೆಗಳಲ್ಲಿ ಏಕಸೂತ್ರತೆ ಎದ್ದು ಕಾಣುತ್ತಿತ್ತು. ಅವೆಲ್ಲವುಗಳನ್ನು ಸಮರಸಭಾವದಿಂದ ಹೆಣೆಯುವ ಕಲೆಗಾರಿಕೆ ಅವರಿಗೆ ಕೈಗೂಡಿತ್ತು. ಕಮ್ಯುನಿಜಂ ರಾಷ್ಟ್ರಭಕ್ತಿಯ ಅತ್ಯುತ್ತಮ ರೂಪ ಎಂಬುದನ್ನು ಭೂಪೇಶ ದಾ ವಾಸ್ತವವಾಗಿ ಸಿದ್ಧ ಮಾಡಿ ತೋರಿಸಿದ್ದಾರೆ. ರಾಜ್ಯ ಸಭೆಯಲ್ಲಿ ಅವರು ರಾಷ್ಟ್ರೀಯ ರಕ್ಷಣಾ ಮಸೂದೆಯ ಮೇಲಿನ ಚರ್ಚೆಯಲ್ಲಿ ಭಾಗವಹಿಸಿ ಮಾತನಾಡಿದ್ದಾಗ ಅವರ ರಾಷ್ಟ್ರ ಭಕ್ತಿಯ ಉತ್ಸಾಹ ಎದ್ದುಕಾಣುತ್ತಿತ್ತು. 1962ರಲ್ಲಿ ಚೀನಾ ಭಾರತದ ಮೇಲೆ ಆಕ್ರಮಣ ಮಾಡಿದಾಗ ಭೂಪೇಶ ಗುಪ್ತ ಆಡಿದ ಮಾತು ಅವರ ರಾಷ್ಟ್ರ ಭಕ್ತಿಗೆ ದ್ಯೋತಕವಾಗಿದೆ.

ಪಕ್ಷದಲ್ಲಿಯ ತಮ್ಮ ಸಹೋದ್ಯೋಗಿಗಳಿಗೆ ಅವರು ಯಾವಾಗಲು ಶಕ್ತಿಯ ಸೆಲೆಯಾಗಿದ್ದರು, ಕ್ರಾಂತಿಕಾರಿ ಶಿಸ್ತಿಗೆ ನಿದರ್ಶನವಾಗಿದ್ದರು. ಭೂಪೇಶ-ದಾ ತಮ್ಮ ಬದುಕಿನ ಎಲ್ಲಾ ಸಮಯವನ್ನು, ಶಕ್ತಿ ಸಾಮರ್ಥ್ಯವನ್ನು, ಮಾರ್ಕ್ಸವಾದದ ಲೆನಿನ್‌ವಾದದ ಸತ್ಯವನ್ನು ಒಡಮೂಡಿಸಿಕೊಳ್ಳುವುದರಲ್ಲಿ, ಹೃದ್ಗತಮಾಡಿಕೊಳ್ಳುವುದರಲ್ಲಿಯೇ ಕಳೆದರು. ಆ ಕಾರಣಕ್ಕಾಗಿಯೇ ಅವರು ಕಮ್ಯುನಿಸ್ಟ್‌ರಾಗಿ ಬದುಕಿ ಕಮ್ಯುನಿಸ್ಟ್‌ರಾಗಿ ಸಾಯುವ ದೃಢ ನಿರ್ಧಾರ ಮಾಡಿದ್ದರು. ಸಮಾಜವಾದಿ ವ್ಯವಸ್ಥೆಯಲ್ಲಿ ಮಾತ್ರ ನಮ್ಮ ಸ್ವಾತಂತ್ರ್ಯಕ್ಕೆ ನೈಜ ಅರ್ಥ ಬರುವುದು ಸಾಧ್ಯ ಎಂಬ ಅಚಲ ನಂಬಿಕೆ ಅವರದ್ದಾಗಿತ್ತು. ಈ ಶ್ರದ್ಧಾಪೂರ್ಣವಾದ ನಂಬಿಕೆಯೇ ಸರಳ ಆದರೂ ಸಶಕ್ತನಾದ ಈ ಮನುಷ್ಯನ ಅವಿರತ ಸೇವೆಯ ಉಸಿರಾಗಿತ್ತು. ಸ್ವಾತಂತ್ರ್ಯ ಹಾಗೂ ಸಮಾಜವಾದದ ಬಗ್ಗೆ ಇದ್ದ ಅವರ ಆತಂಕ ಕಾಳಜಿಯೇ ಅವರ ಬದುಕಿನ ಶಕ್ತಿ ಸಾಮರ್ಥ್ಯದ ಸೆಲೆಯಾಗಿತ್ತು. ಅವರು ದೇಶ ಪ್ರೇಮ ಹಾಗೂ ಕಾರ್ಮಿಕ ವರ್ಗದ ಅಂತರಾಷ್ಟ್ರೀಯತೆ ಇವುಗಳ ಮಾರ್ಕ್ಸವಾದಿ ಸಂಯೋಜನೆಯ ಸಂಕೇತವಾಗಿದ್ದರು.

## ದುರ್ಬಲ ವರ್ಗದವರ ಧುರಂಧರ :

ಕಾ॥ ಭೂಪೇಶ ಗುಪ್ತ ತಮ್ಮ ಬದುಕಿನುದ್ದಕ್ಕೂ ನಮ್ಮ ಸಮಾಜದ ದುರ್ಬಲ ವರ್ಗದವರ ಹಿತ ಚಿಂತಕರಾಗಿದ್ದರು. ಅವರ ಹಕ್ಕಿಗಾಗಿ ಹೋರಾಡಿದ ಧೀರರಾಗಿದ್ದರು. ಹರಿಜನರು, ಆದಿವಾಸಿಗಳು, ಕೃಷಿ ಕಾರ್ಮಿಕರು, ಮತ್ತು ಇತರೆ ದಲಿತ ವರ್ಗದವರ ಹಿತ ಸಾಧನೆಯೇ ಅವರ ಬಾಳಿನ ಗುರಿಯಾಗಿತ್ತು. ಅಂತೆಯೇ ಸಂಸತ್ತಿನ ಒಳಗೂ ಹೊರಗೂ ಸಿಕ್ಕ ಅವಕಾಶಗಳೆಲ್ಲವನ್ನು ಬಳಸಿ ಅವರು ಗ್ರಾಮಾಂತರ ಬಡವರ ಬೆಂಗಾವಲಾಗಿ ನಿಂತರು. ತಮ್ಮಿಂದ ಸಾಧ್ಯವಿದ್ದ ಎಲ್ಲ ಸಹಾಯಮಾಡಿ ಈ ದಮನಿತ ವರ್ಗಗಳ ಆಂದೋಲನಕ್ಕೆ ಇಂಬುಗೊಟ್ಟರು.

ಹರಿಜನರು, ಆದಿವಾಸಿಗಳು, ಕೃಷಿ ಕಾರ್ಮಿಕರು ಹಾಗೂ ಗ್ರಾಮೀಣ ಬಡವರ ಸಮಸ್ಯೆಗಳ ಬಗ್ಗೆ ಭೂಪೇಶ-ದಾ ಅವರಿಗೆ ಆಳವಾದ ಜ್ಞಾನವಿತ್ತು. ಈ ಶೋಷಿತ ಜನ ಸಮುದಾಯದಲ್ಲಿ ವರ್ಗ ಪ್ರಜ್ಞೆ ಬೆಳೆದು ಬರಬೇಕೆಂಬುದು ಅವರ ಬಯಕೆಯಾಗಿತ್ತು. ಈ ಜನತೆ ತಮ್ಮದೇ ಆದ ಪ್ರಬಲ ಸಂಘಟನೆಗಳನ್ನು ಕಟ್ಟಿಕೊಂಡು, ತಮ್ಮ ಮೇಲೆ ಆಗುವ ಅನ್ಯಾಯದ ವಿರುದ್ಧ ಸಮರ್ಥವಾಗಿ ಹೋರಾಡಬಲ್ಲ ಒಂದು ಅಜೇಯ ಶಕ್ತಿಯಾಗಿ ಹೊರಹೊಮ್ಮಬೇಕೆಂಬುದು ಅವರ ಈ ಹೆಬ್ಬಯಕೆಗೆ ಸಾಕ್ಷಿ ಆಗಿದೆ.

ಅಂತೆಯೇ 1968ರಲ್ಲಿ ಪಂಜಾಬಿನ ಮೋಘಾ ಎಂಬಲ್ಲಿ ಭಾರತೀಯ ಕೃಷಿ ಕಾರ್ಮಿಕರ ಸಂಘಟನೆಯಾದ "ಭಾರತೀಯ ಖೇತ್ ಮಜ್ದೂರ್ ಯೂನಿಯನ್" (ಬಿ.ಕೆ.ಎಮ್.ಯು) ಅಸ್ತಿತ್ವಕ್ಕೆ ಬಂದಾಗ ಅವರಿಗೆ ಸಹಜವಾಗಿಯೇ ಸಂತೋಷವಾಗಿತ್ತು. ಅನಂತರ 1972ರ ಮೇ ನಲ್ಲಿ ಬಿ.ಕೆ.ಎಮ್.ಯು.ನ ದ್ವಿತೀಯ ಮಹಾ ಅಧಿವೇಶನದ ಉದ್ಘಾಟನಾ ಭಾಷಣ ಮಾಡುತ್ತಾ ಅವರು ಕೃಷಿ ಕಾರ್ಮಿಕರಲ್ಲಿ ಒಂದು ವರ್ಗ ಸಂಘಟನೆಯ ಸ್ಥಾಪನೆಯ ಅವಶ್ಯಕತೆಯನ್ನು ಕುರಿತು ಒತ್ತಿ ಹೇಳಿದ್ದರು. ತಮಿಳುನಾಡಿನ ಮನ್ನಾವ ಗುಡಿಯಲ್ಲಿ ಜರುಗಿದ ಈ ಅಧಿವೇಶನದ ಅವರ ಉದ್ಘಾಟನಾ ಭಾಷಣ ಕೃಷಿ ಕಾರ್ಮಿಕರ ಬಗ್ಗೆ ಅವರ ನಿಷ್ಠೆ, ನಿಲುವುಗಳನ್ನು ಸಾರುತ್ತದೆ.

ಕನಿಷ್ಠ ಕೂಲಿಯನ್ನು ಕಟ್ಟು ನಿಟ್ಟಾಗಿ ಜಾರಿಗೊಳಿಸುವುದು, ವರ್ಷದಾದ್ಯಂತ ಕೆಲಸವನ್ನು ಖಾತ್ರಿಗೊಳಿಸುವುದು ಮತ್ತು ದುರ್ಬಲ ವರ್ಗಗಳ ಸ್ಥಿತಿ-ಗತಿಗಳನ್ನು ಸುಧಾರಿಸಿ ಅವರನ್ನು ರಕ್ಷಿಸಲು ಕಾಯಿದೆಗಳನ್ನು ನಿರ್ಮಿಸುವುದು - ಮುಂತಾದವುಗಳ ಕುರಿತು ಬಲವಾದ ಬೇಡಿಕೆಯೊಂದನ್ನು ಮುಂದಿಟ್ಟರು. ಕೃಷಿ ಕಾರ್ಮಿಕರ ಬದುಕಿನ ಬವಣೆಯನ್ನು ನೀಗಿಸಿ, ಅವರ ಜೀವನವನ್ನು ಸುಧಾರಿಸದ ಹೊರತು ಗ್ರಾಮಾಂತರ ಅಭಿವೃದ್ಧಿಯ ಬಗ್ಗೆ ಆಡುವ ಮಾತುಗಳೆಲ್ಲ ಘೋರ ಪಾಪಗಳಾಗುತ್ತವೆ; ಅತ್ಯಂತ ಕೆಟ್ಟ ಮಾದರಿಯ ಅವಿವೇಕಿತನದ ಅಲಾಪವಾಗುತ್ತದೆ ಎಂಬುದು ಅವರ ತೀರ್ಮಾನವಾಗಿತ್ತು.

ಭಾರತೀಯ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಕಾರ್ಯ ಸಮಿತಿ ನೇಮಿಸಿದ ರಾಷ್ಟ್ರೀಯ ಐಕ್ಯತೆಯ ಪ್ರಭಾರಿಗಳಾಗಿ ಭೂಪೇಶ್ ಗುಪ್ತ ಅವರು ಆಡಿದ ಮಾತುಗಳು ಗಮನಾರ್ಹವಾಗಿವೆ. ಅನೇಕ ಸತ್ಯಾಂಶಗಳೆಡೆಗೆ ಬೆರಳು ತೋರಿದ ಅವರು ರಾಷ್ಟ್ರೀಯ ಐಕ್ಯತೆಗೆ ಸಂಬಂಧಿಸಿದಂತೆ ಒಂದು ಮುಖ್ಯ ಸಂಗತಿಯನ್ನು ಎತ್ತಿ ಹೇಳಿದ್ದಾರೆ. ತಮ್ಮ ಸಮಿತಿಯ ವರದಿಯಲ್ಲಿ ಅವರು ವಿಶೇಷವಾಗಿ ಕಾಣಿಸಿದ್ದೇನೆಂದರೆ, ಹರಿಜನರ ಮೇಲಾಗುತ್ತಿರುವ ದೌರ್ಜನ್ಯಗಳು, ಅವರು ಬಗ್ಗೆ ಇರುವ ತಾರತಮ್ಯದ ಭಾವ, ರಾಷ್ಟ್ರೀಯ ಐಕ್ಯತೆಯ ಪ್ರಕ್ರಿಯೆಗೆ ಅಡ್ಡಿಯುಂಟು ಮಾಡುತ್ತಿರುವ ಮಹತ್ವದ ಸಂಗತಿಗಳಾಗಿವೆ ಎಂಬುದು ಇವುಗಳ ಬಗ್ಗೆ ಗಂಭೀರವಾಗಿ

ಆಲೋಚಿಸಬೇಕಾಗಿದೆ. ಗ್ರಾಮಾಂತರ ಬಡವರ ಕಲ್ಯಾಣಕ್ಕಾಗಿ ಅವರು ನಡೆಸಿದ ಧೀರ ಹೋರಾಟ ಹಾಗೂ ಅವರ ಆಂದೋಲನಕ್ಕೆ ಬೆಂಗಾವಲಾಗಿ ನಿಂತು ಮಾಡಿದ ಸತತ ಪ್ರಯತ್ನ - ಇತ್ಯಾದಿಗಳು ನಮ್ಮ ರಾಷ್ಟ್ರದ ಎದೆಯಾಳದಲ್ಲಿ ಅಚ್ಚಳಿಯದೆ ಮುದ್ರೆ ಒತ್ತಿವೆ. ಅಂತೆಯೇ ಅವರ ಹೋರಾಟದ ನೆನಪು ಎಂದೂ ಮಾಸದು.

## ಮಹಿಳೆಯರ ಹಕ್ಕುಗಳ ಮಹಾ ಪೋಷಕ :

ಮಹಿಳಾ ವಿಮೋಚನೆ ಭೂಪೇಶ್ ಗುಪ್ತ ಅವರಿಗೆ ಪ್ರಿಯವಾದ ಸಂಗತಿಗಳಲ್ಲಿ ಒಂದು. ಆದ್ದರಿಂದಲೇ ಅವರು ಮಹಿಳಾ ವಿಮೋಚನಾ ಹೋರಾಟಗಳ ಕಟ್ಟಾ ಬೆಂಬಲಿಗರಾಗಿದ್ದರು. ಬದುಕಿನ ಎಲ್ಲಾ ಕ್ಷೇತ್ರಗಳಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಎತ್ತರಿಸಲು ಸತತ ಸಮರ ಸಾರಿದವರು ಭೂಪೇಶ ಗುಪ್ತ. 1953-54ರಷ್ಟು ಹಿಂದೆಯೇ, ಸಂಸತ್ತಿನ ಸದಸ್ಯರಾಗಿ, ಮಹಿಳೆಯರ ಪರವಾಗಿ ಅವರು ತಳೆದ ನಿಲುವು ಪ್ರಮುಖವಾದದ್ದು. ಹಿಂದೂ ವಿವಾಹ ಕಾಯ್ದೆ, ಪಿತ್ರಾರ್ಜಿತ ಆಸ್ತಿಯ ಹಕ್ಕುಗಳ ಕಾಯ್ದೆ ಮುಂತಾದವುಗಳಲ್ಲಿ ಸುಧಾರಣೆ ಬಯಸಿ ಮಂಡಿಸಲಾದ ಪ್ರಸ್ತಾವಗಳಿಗೆ ಸಂಪ್ರದಾಯವಾದಿಗಳು ಒಡ್ಡಿದ ವಿರೋಧಕ್ಕೆ ಅವರು ಕಿಡಿಕಾರಿದರು. ಸಂಪ್ರದಾಯವಾದಿಗಳ ವಿರುದ್ಧ ಅವರು ಯಶಸ್ವಿ ವಾದ ಮಂಡಿಸಿ ಆ ಕಾಯ್ದೆಗಳು ಸುಧಾರಿತ ರೂಪದಲ್ಲಿ ಪಾಸಾಗುವಂತೆ ಭೂಪೇಶರು ನಿರ್ವಹಿಸಿದ ಪಾತ್ರ ತುಂಬಾ ಮಹತ್ವದ್ದು; ಸುಧಾರಣೆಯ ಪರವಾಗಿ ಜನಾಭಿಪ್ರಾಯ ರೂಢಿಸುವಲ್ಲಿ ಕಾ|| ಭೂಪೇಶರ ಕಾಣಿಕೆ ಸಾಟಿ ಇಲ್ಲದ್ದು.

1975ರಲ್ಲಿ ಅಂತರಾಷ್ಟ್ರೀಯ ಮಹಿಳಾ ವರ್ಷಾಚರಣೆ ಆರಂಭವಾದಾಗ ಅವರು ಪಾರ್ಲಿಮೆಂಟಿನಲ್ಲಿ ತುಂಬಾ ಭಾವಾವೇಶದ ಭಾಷಣ ಮಾಡಿ ಆ ವರ್ಷದಾದ್ಯಂತ ಮಹಿಳೆಯರ ಸ್ಥಿತಿಗತಿಗಳನ್ನು ಸುಧಾರಿಸಿ ಸ್ಥಾನಮಾನವನ್ನು ಎತ್ತರಿಸುವಂಥ ಮಹೋತ್ತರ ಕ್ರಮಗಳನ್ನು ಸರ್ಕಾರ ಕೈಗೊಳ್ಳಬೇಕೆಂದು ಒತ್ತಾಯಿಸಿದರು. ಆ ವರ್ಷದ ಆಚರಣೆ ಕೇವಲ ಸಭೆ ಸಮಾರಂಭ, ವಿಚಾರ ಸಂಕಿರಣಗಳಿಗೆ ಸೀಮಿತಗೊಳ್ಳದೆ ಅಸಂಖ್ಯಾತ ಮಹಿಳೆಯರ ದುಃಸ್ಥಿತಿಯನ್ನು ದೂರ ಮಾಡುವತ್ತ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು, ಎಂಬುದು ಅವರ ದೃಢವಾದ ಅಭಿಪ್ರಾಯವಾಗಿತ್ತು. ತಮ್ಮ ಭಾಷಣದಲ್ಲಿ ಅವರು;

"…. ಮಹಿಳಾ ವಿಮೋಚನೆ ಎಂದರೆ ಒಂದು ಜನ ವಿಭಾಗದ ವಿಮೋಚನೆಯ ಸೀಮಿತ ಸಮಸ್ಯೆಯಲ್ಲ, ಸತ್ವತಃ ಅದು ಇಡೀ ಮಹಿಳಾ ಕುಲವನ್ನು ಬಂಧನ, ಅವಮಾನ ಅನ್ಯಾಯಗಳಿಂದ, ವಿಮುಕ್ತಗೊಳಿಸುವ ಸಮಸ್ಯೆಯಾಗಿದೆ. ಅವರ ಕಷ್ಟ ನಷ್ಟಗಳಿಂದ ವಿಮೋಚನೆಗೊಳಿಸಿ, ಅಂತಿಮವಾಗಿ, ನಮ್ಮ ಸಾಮಾಜಿಕ ಬದುಕಿನ ಬುನಾದಿಯನ್ನೆ ಧ್ವಂಸ ಮಾಡುವ ತಾಪತ್ರಯಗಳಿಂದ ಅವರನ್ನು ಬಿಡುಗಡೆ ಮಾಡಬಹುದಾಗಿದೆ….."

ಅವರು ತಮ್ಮ ಭಾಷಣದುದ್ದಕ್ಕೂ ದುಡಿಯುವ ಮಹಿಳೆಯರ ದಾರುಣ ಸ್ಥಿತಿಗಳ ಬಗ್ಗೆ ಗೃಹಿಣಿಯರ, ಕೃಷಿ ಕಾರ್ಮಿಕ ಮಹಿಳೆಯರ ಮತ್ತು ಇತರ ವಿಭಾಗದ ಸ್ತ್ರೀಯರ ಸಂಕಟಗಳ ಕುರಿತು ಅಂಕಿ ಸಂಖ್ಯೆಗಳ ಆಧಾರ ಸಹಿತ ಸವಿಸ್ತಾರವಾಗಿ ವಿಶ್ಲೇಷಿಸಿದರು. ಸಮಸ್ಯೆಗಳನ್ನು ಕುರಿತು ಅವರು ಅಂದು ಸಾದರಪಡಿಸಿದ ಆಳವಾದ ಜ್ಞಾನವನ್ನು ಕಂಡು ಎಷ್ಟೋ ಸ್ತ್ರೀವಾದಿಗಳು ಅಸೂಯೆ ಪಡಬಹುದಾಗಿತ್ತು.

ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದ ಮಹಿಳೆಯ ಮೇಲಿನ ದೌರ್ಜನ್ಯ, ಹಲ್ಲೆ, ಮಾನಭಂಗ, ಮಹಿಳೆಯರ ಜೀವಂತ ದಹನ, ಮುಂತಾದ ಪ್ರಶ್ನೆಗಳನ್ನು ಅವರು ಆಗಾಗ ರಾಜ್ಯ ಸಭೆಯಲ್ಲಿ ಎತ್ತಿ ತೀಕ್ಷ್ಣವಾಗಿ ಜಾಲಾಡುತ್ತಿದ್ದರು.

## ಜಾತ್ಯಾತೀತತೆ ಹಾಗು ರಾಷ್ಟ್ರೀಯ ಐಕ್ಯತೆಯ ಬೆಂಬಲಿಗರಾಗಿ :

ರಾಷ್ಟ್ರೀಯ ಐಕ್ಯತೆಯಂತಹ ಸಂಗತಿ ಭೂಪೇಶ ಗುಪ್ತ ಅವರ ಜೀವಾಳವಾಗಿತ್ತು. ಅದು ಪಾರ್ಲಿಮೆಂಟ್ ಆಗಿರಲಿ, ರಾಷ್ಟ್ರೀಯ ಐಕ್ಯತಾ ಪರಿಷತ್‌ನ ಸಭೆಗಳಾಗಿರಲಿ, ಯಾವುದೇ ಸಮಾವೇಶವಾಗಿರಲಿ, ಸಮಾರಂಭವಾಗಿರಲಿ, ತಮಗೆ ದೊರೆಯಬಹುದಾಗಿದ್ದ ಯಾವುದೇ ವೇದಿಕೆಯಲ್ಲಿ ಅವರು ನಮ್ಮ ದೇಶದ ಜಾತ್ಯಾತೀತ ಪ್ರಜಾಪ್ರಭುತ್ವವಾದಿ ವ್ಯವಸ್ಥೆಯ ರಕ್ಷಣೆಗೆ ತಮ್ಮ ಸಶಕ್ತ ಧ್ವನಿಯನ್ನು ಎತ್ತುತ್ತಿದ್ದರು. ರಾಷ್ಟ್ರೀಯ ಐಕ್ಯತೆಯ ಭದ್ರ ಬುನಾದಿಯನ್ನು ಹಾಕಿ ಅದನ್ನು ಸಬಲಗೊಳಿಸುವುದು ಅವರ ಪ್ರಧಾನ ಕಾಳಜಿಯಾಗಿತ್ತು. ತಮ್ಮೆಲ್ಲ ಭಾಷಣಗಳಲ್ಲಿ ಅವರು ಕೋಮುವಾದಿ ಶಕ್ತಿಗಳನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ನಾವು ಒಂದು ಪ್ರಗತಿಪರ ನಾಗರಿಕ ಸಮಾಜವಾಗಿ ಉಳಿಯಬೇಕಾದರೆ, ಬೆಳೆಯಬೇಕಾದರೆ, ಕೋಮುವಾದಿಗಳ ವಿರುದ್ಧ ಸದಾ ಸಮರ ಸಾರಬೇಕೆಂದು ಅವರು ಒತ್ತಾಯಿಸುತ್ತಿದ್ದರು. ಭೂಪೇಶ-ದಾ ಅವರು ರಾಷ್ಟ್ರೀಯ ಐಕ್ಯತಾ ಪರಿಷತ್‌ನಲ್ಲಿ ಸುಮಾರು 15 ವರ್ಷಗಳವರೆಗೆ ಕಮ್ಯುನಿಸ್ಟ್ ಪಕ್ಷದ ಪ್ರತಿನಿಧಿಯಾಗಿದ್ದರು. ಜೊತೆಗೆ ಅದರ ವಕ್ತಾರರೂ ಆಗಿದ್ದರು. ಕೋಮುವಾದಿ ಶಕ್ತಿಗಳ ಸಂಚನ್ನು ಬಯಲು ಮಾಡಲು, ಅವುಗಳ ಹುನ್ನಾರ ಹಿಕಮತ್ತುಗಳನ್ನು ವಿಫಲಗೊಳಿಸಲು, ಅವಶ್ಯವಿರುವ ಎಲ್ಲಾ ಸಾಧನ ಮಾರ್ಗಗಳನ್ನು ಅವರು ತುಂಬಾ ಜಾಗ ರೂಕತೆಯಿಂದ ರೂಪಿಸುತ್ತಿದ್ದರು. ಕೋಮುವಾದಿ ಶಕ್ತಿಗಳ ಹಾಗೂ ಇತರ ಗಲಭೆಕೋರರನ್ನು ಖಂಡಾತುಂಡವಾಗಿ ಟೀಕಿಸುತ್ತಿದ್ದ ಅವರು ದೇಶದ ಜಾತ್ಯಾತೀತ ನಿಲುವಿನ ರಕ್ಷಣೆಗೆ ಅಹರ್ನಿಶಿ ದುಡಿಯುತ್ತಿದ್ದರು.

1968ರ ಜೂನ್‌ನಲ್ಲಿ ಶ್ರೀ ನಗರದಲ್ಲಿ ನಡೆದ ರಾಷ್ಟ್ರೀಯ ಐಕ್ಯತಾ ಪರಿಷತ್‌ನ ಸಭೆಯಲ್ಲಿ ಕೋಮುವಾದಿ ಶಕ್ತಿಗಳನ್ನು ವಿರೋಧಿಸಿ, ಜಾತ್ಯಾತೀತತೆ ಮತ್ತು ಅಲ್ಪ ಸಂಖ್ಯಾತರನ್ನು

ರಕ್ಷಿಸುವ ಕುರಿತು ಅವರು ಅನೇಕ ಸಲಹೆ ಸೂಚನೆಗಳನ್ನು ನೀಡಿದ್ದರು. ಅವುಗಳಲ್ಲಿ ಅತ್ಯಂತ ಮುಖ್ಯವಾದ ಸಲಹೆ ಎಂದರೆ ಯಾವುದೇ ಗಲಭೆ ಗ್ರಸ್ತ ಪ್ರದೇಶದಲ್ಲಿ ಅಲ್ಪ ಸಂಖ್ಯಾತ ಸಮುದಾಯದ ಜನತೆ, ಯಾವುದೇ ಅಧಿಕಾರದಲ್ಲಿ ವಿಶ್ವಾಸವನ್ನು ಕಳೆದು ಕೊಂಡದ್ದು ಕಂಡುಬಂದರೆ, ಅಂತಹ ಅಧಿಕಾರಿಯನ್ನು ಕೊನೆಯ ಪಕ್ಷ ತಕ್ಷಣವೇ ವರ್ಗಮಾಡತಕ್ಕದ್ದು. ಯಾವುದೇ "ಒಂದು ಪ್ರದೇಶದಲ್ಲಿ ಕೋಮು ಸೌಹಾರ್ದತೆ ಕದಡಿ ಶಾಂತಿಗೆ ಭಂಗ ಬಂದೊಡನೆಯೇ ಅಲ್ಲಿ ಕೋಮುಸೌಹಾರ್ದತೆ ಹಾಗೂ ಸಾಮಾಜಿಕ ಸಾಮರಸ್ಯವನ್ನು ಕಾಪಾಡುವ ಜವಾಬ್ದಾರಿ ಹೊತ್ತು ಎಲ್ಲಾ ಅಧಿಕಾರಿಗಳ ನಡವಳಿಕೆಯನ್ನು ಸೂಕ್ಷ್ಮವಾದ ಪರೀಕ್ಷಣೆಗೆ ಒಳಮಾಡಬೇಕು".

## ಉದ್ದಾಮ ಲೇಖಕ ಹಾಗೂ ಪತ್ರಕರ್ತ :

ಪ್ರಖ್ಯಾತ ಪತ್ರಕರ್ತರಾಗಿದ್ದ ಕಾ।।ಭೂಪೇಶ್ ಗುಪ್ತ ಅವರು "ನ್ಯೂ ಏಜ್" ಪತ್ರಿಕೆಯ ಸಂಪಾದಕರಾಗಿದ್ದರು. ಭಾರತೀಯ ಕಮ್ಯುನಿಸ್ಟ್ ಪಕ್ಷದ ಸಾಪ್ತಾಹಿಕವಾಗಿದ್ದ ಈ ಪತ್ರಿಕೆಗೆ 1954ರಿಂದ 57ರವರೆಗೆ ಸಂಪಾದಕರಾಗಿ ಸೇವೆ ಸಲ್ಲಿಸಿದ್ದ ಅವರು ಮತ್ತು 1966ರ ಜನವರಿಯಲ್ಲಿ ಅದರ ಸಂಪಾದಕತ್ವವನ್ನು ವಹಿಸಿಕೊಂಡು ತಮ್ಮ ಬದುಕಿನ ಕೊನೆಯ ಉಸಿರಿನವರೆಗೂ ಆ ಜವಾಬ್ದಾರಿಯನ್ನು ಬಹು ಸಮರ್ಪಕವಾಗಿ ನಿರ್ವಹಿಸುತ್ತಿದ್ದರು. ಈ ಪತ್ರಿಕೆಯ ಸಂಪಾದಕರಾಗಿ ಅವರು ಅನೇಕ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಹತ್ವದ ವಿಚಾರಪೂರ್ಣವಾದ ಲೇಖನಗಳನ್ನು ಬರೆಯುವುದರ ಜೊತೆಗೆ ಸಾಕಷ್ಟು ಬರಹಗಳನ್ನು ಪ್ರಕಟಿಸಿದರು.

ಅವರ ಸಂಪಾದಕತ್ವದಲ್ಲಿ ಹೊರಬರುತ್ತಿದ್ದ "ನ್ಯೂ ಏಜ್" ಪತ್ರಿಕೆಗೆ ಯಾವಾಗಲೂ ಅವರ ವೈಯಕ್ತಿಕ ಗ್ರಾಮೀಣ ಮಾರ್ಗದರ್ಶನ ದೊರೆಯುತ್ತಿತ್ತು. ಅಂತೆಯೇ ಗ್ರಾಮಾಂತರ ಪ್ರದೇಶದ ಬಡವರ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ, ಅವರ ವಿಮೋಚನಾ ಹೋರಾಟಗಳ ವಿಸ್ತೃತ ಪರಿಚಯ ಮಾಡಿಕೊಡುವ, ಸಾಕಷ್ಟು ಲೇಖನಗಳು ಪ್ರಕಟಗೊಂಡವು. ದೇಶದ ವಿಭಿನ್ನ ಭಾಗಗಳಲ್ಲಿ ಹರಿಜನರ ಮೇಲಾಗುತ್ತಿದ್ದ ಹಲ್ಲೇ ದಬ್ಬಾಳಿಕೆಗಳ ಕಡೆಗೆ ವಿಶೇಷವಾಗಿ ಗಮನ ಸೆಳೆಯುವ ಲೇಖನಗಳಿಗೆ ಅಲ್ಲಿ ಅವಕಾಶ ದೊರೆಯುತ್ತಿತ್ತು. ಹರಿಜನರು ಮತ್ತು ಇತರ ದುರ್ಬಲ ವರ್ಗಗಳ ಮೇಲೆ ನಡೆಯುತ್ತಿದ್ದ ಹಿಂಸೆ, ಕ್ರೌರ್ಯ ಮುಂತಾದವುಗಳ ಕುರಿತು ಭೂಪೇಶ-ದಾ ಅನೇಕ ಲೇಖನಗಳನ್ನು, ಸಂಪಾದಕೀಯಗಳನ್ನು ಬರೆದು ಪ್ರಚಾರಪಡಿಸಿದ್ದಾರೆ. ಮೇಲಾಗಿ ಮಹಿಳೆಯರಿಗೆ ಸಮಾನ ಸ್ಥಾನಮಾನ ದೊರಕಿಸುವ ಉದ್ದೇಶದಿಂದ ಭೂಪೇಶ-ದಾ ಕೈಗೆತ್ತಿಕೊಂಡ ಪೆನ್ನು ಜನರ ನೋವಿಗೆ ಮಿಡಿಯುವ ಪ್ರಾಣಮಿತ್ರನಾಗಿ ಪರಿಣಮಿಸುತ್ತಿತ್ತು.

ಪ್ರಾಣಾಂತಿಕವಾದ ಒಂದು ರೋಗ ಒಳಗಿನಿಂದಲೇ ಅವರನ್ನು ಕೊರೆದು ತಿನ್ನುತಿತ್ತು. ಆದರೂ ತಮ್ಮ ಬದುಕಿನ ಕೊನೆಯ ಉಸಿರಿನವರೆಗೂ ಅವರು ಬರೆಯುತ್ತಲೇ ಹೋದರು. ಚೀನದ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಸಮಿತಿಯ ಪರಿಣಾಮಗಳನ್ನು ಕುರಿತು ಮಾಸ್ಕೋ ಆಸ್ಪತ್ರೆಯೊಂದರಲ್ಲಿ ಅವರು ಬರೆದ ಕೊನೆಯ ಲೇಖನ ಅವರ ಅವಿರತ ಲೇಖನಿಗೆ ವಿರಾಮ ಹೇಳಿತು.

ಕಾ॥ ಭೂಪೇಶ ಗುಪ್ತ ಒಬ್ಬ ಸಮರ್ಥ ಹಾಗೂ ಬಹುಪ್ರದ ಲೇಖಕರಾಗಿದ್ದರು. ರಾಜಕೀಯ, ಆರ್ಥಿಕ ಹಾಗೂ ದೈನಂದಿನ ಮಹತ್ವದ ವಿಷಯಗಳಿಗೆ ಕುರಿತು ಅವರು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಅಪಾರ ಸಂಖ್ಯೆಯ ಲೇಖನಗಳು, ಪಾಂಪ್ಲೆಟುಗಳು ಅವರ ಪೆನ್ನಿನಿಂದ ಒಡಮೂಡಿವೆ. ಫ್ರೀಡಮ್ ಅಂಡ್ ದಿ ಸೆಕೆಂಡ್ ಫ್ರಂಟ್; ಟೆರಲ್ ಓವರ್ ಬೆಂಗಾಲ್; ಸೆಕೆಂಡ್ ಫೈವ್ ಇಯರ್ ಪ್ಲ್ಯಾನ್ - ಏ ಕ್ರಿಟಿಕ್; ದ ಬಿಗ್ ಲೂಟ್ ಅಂಡ್ ಅನಾಲಿಸಿಸ್ ಆಫ್ ಫಾರೆನ್ ಎಕ್ಸ್‌ಪ್ಲಾಯಿಟೇಷನ್ ಇನ್ ಇಂಡಿಯಾ; ವೈ ದಿಸ್ ಫುಡ್ ಕ್ರೈಸಿಸ್; ಕ್ವಿಟ್ ಕಾಮನ್‌ವೆಲ್ತ್; ಇಂಡಿಯಾ ಅಂಡ್ ಅಮೇರಿಕನ್ ಅಗ್ರೆಶನ್ ಇನ್ ವಿಯೆಟ್ನಾಂ ಮತ್ತು ರೈಟ್ ರಿಯಾಕ್ಷನ್ಸ್ ಬಿಡ್ ಫಾರ್ ಪವರ್ ಎಂಬ ಎಂಟು ಇಂಗ್ಲೀಷ್ ಗ್ರಂಥಗಳು ಅವರ ಮಹತ್ವದ ಕೊಡುಗೆಗಳಾಗಿವೆ. ಇದಲ್ಲದೆ ಭೂಪೇಶ-ದಾ ಅವರು ತಮ್ಮ ಮಾತೃ ಭಾಷೆಯಾದ ಬಂಗಾಲಿಯಲ್ಲಿಯೂ ಕೆಲವು ಗ್ರಂಥಗಳನ್ನು ಬರೆದಿದ್ದಾರೆ. ಉದಾ:- ನೆಹರು ಸರ್ಕಾರೇರ್ ಸ್ವರೂಪ, ಪಾಕ್ ಮಾರ್ಕಿನ್ ಸಾಮ್ರಾಜ್ಯವಾದ ಮತ್ತು ಕಾಲಾ ಕಾನೂನೇಯರ್ ರಾಜ್ಯತ್ವ, ಈ ಎಲ್ಲಾ ಗ್ರಂಥಗಳು ಭೂಪೇಶ ಗುಪ್ತ ಅವರ ಪ್ರಗಲ್ಭ ಪಾಂಡಿತ್ಯ, ತೀಕ್ಷ್ಣ ವಿಶ್ಲೇಷಣತೆ ಮತ್ತು ಭೌದ್ಧಿಕ ಔನ್ನತ್ಯಕ್ಕೆ ಜೀವಂತ ಸಾಕ್ಷಿಗಳಾಗಿವೆ.

## ವಿಖ್ಯಾತ ಸಂಸದೀಯ ಪಟು :

1952ರ ಮೇ 13ರಂದು ಮೊಟ್ಟ ಮೊದಲ ಬಾರಿಗೆ ರಾಜ್ಯಸಭೆಗೆ ಚುನಾಯಿತರಾದ ಶ್ರೀ ಭೂಪೇಶ ಗುಪ್ತ ತಮ್ಮ ಬದುಕಿನುದ್ದಕ್ಕೂ ಆ ಸ್ಥಾನವನ್ನು ಕಳೆದುಕೊಳ್ಳಲಿಲ್ಲ. 1981ರ ಆಗಸ್ಟ್ 6ರಂದು ತೀರಿಕೊಂಡಾಗಲೂ ಅವರು ರಾಜ್ಯ ಸಭೆಯ ಸದಸ್ಯರಾಗಿದ್ದರು. ಅವರು ರಾಜ್ಯ ಸಭೆಯ ಅತ್ಯಂತ ದೀರ್ಘಾವಧಿಯ ಸದಸ್ಯರಾಗಿದ್ದುದಷ್ಟೇ ಅಲ್ಲ, ತಮ್ಮ ಶಕ್ತಿ ಸಾಮರ್ಥ್ಯ ಹಾಗೂ ಎಚ್ಚರಿಕೆಯ ನಿಲುವಿನಿಂದಾಗಿ ಎಲ್ಲರ ಗೌರವಾಧಾರಗಳಿಗೆ ಪಾತ್ರವಾಗಿದ್ದರು. ಅತುಳ ಸತ್ವದ, ಅದಮ್ಯ ಚೇತನದ ಒಬ್ಬ ಅವಿಶ್ರಾಂತ ಸಂಸದೀಯ ಪಟುವಾಗಿದ್ದರು. ಹೀಗಾಗಿ ಅವರನ್ನು ಎದುರು ಹಾಕಿಕೊಳ್ಳಲು ಎಲ್ಲರಿಗೂ ಒಂದು ರೀತಿಯ ಭಯ.

1977ರ ಜೂನ್ 22 ರಂದು ರಾಜ್ಯಸಭೆಯು ತನ್ನ 25ನೇ ವಾರ್ಷಿಕೋತ್ಸವ ಹಾಗೂ 100ನೇ ಅಧಿವೇಶನ ಆಚರಣೆಯ ಸಂದರ್ಭದಲ್ಲಿ ಶ್ರೀ ಭೂಪೇಶ ಗುಪ್ತ ಅವರನ್ನು ವಿಶೇಷವಾಗಿ ಸನ್ಮಾನಿಸಿತು. ಸದನದ ಸನ್ಮಾನವನ್ನು ಕೃತಜ್ಞತೆಯಿಂದ ಸ್ವೀಕರಿಸಿ ಅವರು ಹೇಳಿದ ಮಾತು: "ಜನತೆಯ ಬಗ್ಗೆ ನನಗಿರುವ ವಿಶ್ವಾಸ ಮತ್ತು ಅವರಿಂದ ನನಗೆ ದೊರೆತ ಸದಾಶಯದ ಪ್ರೋತ್ಸಾಹದಿಂದಾಗಿ ನಾನು ನನ್ನ ಸಾಮರ್ಥ್ಯಕ್ಕೆ ತಕ್ಕಂತೆ ದೇಶದ ಸೇವೆಗೆ ತೊಡಗಿಸಿಕೊಳ್ಳಲು ಸಾಧ್ಯವಾಗಿದೆ. ಈ ರಾಜ್ಯಸಭೆಯು ಸದಾ ಜೀವಂತಿಕೆಯಿಂದ ತುಡಿಯುವ ಒಂದು ಗತಿಶೀಲ ಸಂಸ್ಥೆಯಾಗಿ ಜನತೆಯ ಆಶೋತ್ತರಗಳನ್ನು ಬಿಂಬಿಸುತ್ತ, ಮುಂದುವರೆಯಬೇಕು." ಎಂದು ತಮ್ಮ ಅಭಿಲಾಷೆಯನ್ನು ವ್ಯಕ್ತಗೊಳಿಸಿದರು.

ರಾಜ್ಯಸಭೆಯಲ್ಲಿ ಅವರು ತಮ್ಮ ಸ್ಥಾನವನ್ನು ಅಲಂಕರಿಸಿದ ದೀರ್ಘಾವಧಿಯ ಉದ್ದಕ್ಕೂ ತುಂಬಾ ಜಾಗೃತರಾಗಿದ್ದರು. ಅವಶ್ಯವೆನಿಸಿದ ಪ್ರತಿಯೊಂದು ಸಂದರ್ಭದಲ್ಲಿಯೂ ಅವರು ಮಧ್ಯ ಪ್ರವೇಶಿಸಿ ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಿದ್ದರು. ಅವರ ಗಮನಕ್ಕೆ ಬಾರದೆ ಒಂದು ಘಟನೆಯೂ ಅಲ್ಲಿ ಜರುಗುತ್ತಿರಲಿಲ್ಲ. ಯಾವುದೇ ಮಹತ್ವದ ಸಂಗತಿಯ ಪುರಸ್ಕಾರವಾಗಲಿ, ತಿರಸ್ಕಾರವಾಗಲಿ, ಎಲ್ಲವೂ ಅವರ ಗರುಡ ದೃಷ್ಟಿಗೆ ಗುರಿಯಾಗುತ್ತಿದ್ದವು. ಯಾವುದೇ ಸಂಗತಿಯ ಸಮರ್ಥನೆಯಾಗಲಿ, ಅದನ್ನು ಬೆಂಬಲಿಸಿ ಅವರು ಮಾಡುತ್ತಿದ್ದ ವಾದವಾಗಲ್ಲಿ ಎಲ್ಲದರಲ್ಲಿಯೂ ಅವರ ವಿಚಕ್ಷಣತೆ ಎದ್ದು ಕಾಣುತ್ತಿತ್ತು. ಜಿಗುಟುತನ ಅವರ ಮುಖ್ಯ ಗುಣವಾಗಿದ್ದರೆ ಹರಿತತೆ ಅವರ ಸ್ವಭಾವವಾಗಿತ್ತು. ಉದಾ:- ಅಮೆರಿಕೆಯ ಸರ್ಕಾರ ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರ ಸರಬರಾಜು ಮಾಡುವ ನಿರ್ಧಾರವನ್ನು ಪುನಃ ತೆಗೆದುಕೊಂಡಿದ್ದರ ಕುರಿತು ರಾಜ್ಯ ಸಭೆಯಲ್ಲಿ ನಡೆದ ಚರ್ಚೆಯಲ್ಲಿ ಭಾಗವಹಿಸುತ್ತ ಶ್ರೀ ಭೂಪೇಶ ಗುಪ್ತ ಅವರು ಆಡಿದ ಮಾತುಗಳು ತುಂಬಾ ಮಾರ್ಮಿಕವೂ ಸೂಕ್ತವೂ ಆಗಿವೆ.

"ಅಮೇರಿಕೆಯ ಸಂಯುಕ್ತ ಸಂಸ್ಥಾನವು ನಮ್ಮ ಭಾಗದಲ್ಲಿ ಮಿಲಿಟರಿ ಶಕ್ತಿಯ ಒಂದು ಹೊಸ ಸಮತೋಲನವನ್ನು ನಿರ್ಮಿಸಬಯಸುತ್ತಿದೆ ಎಂಬುದು ಈಗ ಸುಸ್ಪಷ್ಟವಾಗಿದೆ. ಆದ್ದರಿಂದಲೇ ಪಾಕಿಸ್ತಾನವನ್ನು ಅದು ತನ್ನ ಮಿಲಿಟರಿ ನೆಲೆಯನ್ನಾಗಿ ಬಳಸಲು ಬಯಸುತ್ತಿದೆ. ಕಾರಣ ಕೇವಲ ಪಾಕಿಸ್ತಾನ ಮಾತ್ರ ಶಸ್ತ್ರಾಸ್ತ್ರ ಪೈಪೋಟಿಯನ್ನು ನಡೆಸುವಲ್ಲಿ ಆಸಕ್ತವಾಗಿದೆ, ಮತ್ತು ಅಮೇರಿಕೆಗೆ ಇದರಲ್ಲಿ ಯಾವ ಆಸಕ್ತಿಯೂ ಇಲ್ಲ ಎಂದು ತಿಳಿಯುವದಾಗಲಿ ಅಥವಾ ಈ ಸಂದರ್ಭದಲ್ಲಿ ಅಮೇರಿಕೆಯ ಕೇವಲ ಶಸ್ತ್ರಾಸ್ತ್ರಗಳ ಮಾರಾಟಗಾರ ಮಾತ್ರ ಎಂದು ನಂಬುವುದಾಗಲಿ ಸರಿಯಲ್ಲ, ವಸ್ತು ಸ್ಥಿತಿ ಇದಕ್ಕಿಂತ ವ್ಯತಿರಿಕ್ತವಾಗಿದೆ ........ ಭಾರತವನ್ನು ಹೆದರಿಸಿ ಬೆದರಿಸಿ ಅದರ ಬಲ ಮುರಿದು ಬಗ್ಗು ಬಡಿಯದ ಹೊರತು ದಕ್ಷಿಣ ಏಷಿಯಾದ ಈ ಭಾಗದಲ್ಲಿ ತನ್ನ ಮೇಲುಗೈಯನ್ನು ಸಾಧಿಸುವುದು ಸರ್ವತಃ ಸಾಧ್ಯವಿಲ್ಲವೆಂಬ ಸತ್ಯ ಅಮೇರಿಕನ್ ಸಾಮ್ರಾಜ್ಯಶಾಹಿಗಳಿಗೆ ಚೆನ್ನಾಗಿ ಗೊತ್ತಿದೆ. ಆ ಕಾರಣಕ್ಕಾಗಿ

ಅವರು ಭಾರತವನ್ನು ತಮ್ಮ ವಿಶೇಷ ಗುರಿಯನ್ನಾಗಿ ಮಾಡಿಕೊಂಡು ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡುವ ಸನ್ನಾಹ ನಡೆಸುತ್ತಿದ್ದಾರೆ."**

ರಾಜ್ಯಸಭೆಯಲ್ಲಿ ಶ್ರೀ ಭೂಪೇಶ ಗುಪ್ತ ಅವರ ಭಾಷಣಗಳು ಅವರು ಉನ್ನತವಾಕ್ ಕಲಾ ಕೌಶಲ್ಯಕ್ಕೆ ಸಾಕ್ಷಿಯಾಗಿವೆ. ಅವರು ಆಗಾಗ ತುಂಬಾ ಹರಿತವಾದ ಮೂದಲಿಕೆಯ ಮಾತನ್ನು ಆಡುತ್ತಿದ್ದರೂ ಒರಟು, ಅವಾಚ್ಯವಾಗುತ್ತಿರಲಿಲ್ಲ. ತಮ್ಮ ವಾದಗಳನ್ನು ಉಜ್ವಲವಾಗಿ ಮಂಡಿಸುತ್ತಿದ್ದರು. ಆದರೆ ವಿನಯ ಆ ವಾದದ ಮುಕುಟಮಣಿಯಾಗಿರುತ್ತಿತ್ತು. ಜನತೆಯ ಮಹತ್ಕಾರಣಕ್ಕೆ ಸಂಬಂಧಿಸಿದ ಪ್ರಶ್ನೆಗಳ ಕುರಿತು ಜಿಜ್ಞಾಸೆ ನಡೆಸಿದಾಗ ಅವರ ಪ್ರತಿಭಾ ಸತ್ವಗರಿಗೆದುರುತಿತ್ತು. ಹೀಗಾಗಿ ಅವರು ದಲಿತ, ಮರ್ದಿತ ಜನಾಂಗದ ಮಹಾ ರಕ್ಷಕರಾಗಿದ್ದರು; ಅಕ್ಷರಶಃ ದುಡಿಯುವ ಜನ ಕೋಟಿಯ ಧುರೀಣರಾಗಿದ್ದರು. ಟ್ರಜರಿ ಬೆಂಚಿನ ಒಂದೇ ಒಂದು ತಪ್ಪನ್ನು ಕೂಡಾ ಅವರೆಂದು ಅನುಮೋದಿಸಲಿಲ್ಲ. ಮೇಲಾಗಿ ಸಂಸದೀಯ ನಡವಳಿಕೆ ಹಾಗೂ ನಿಯಮಾವಳಿಗಳ ಮೇಲೆ ಅವರು ಸಾಧಿಸಿದ ಸಂಪೂರ್ಣ ಪ್ರಭುತ್ವ ಅದ್ಭುತವಾಗಿತ್ತು. ಪಾರ್ಲಿಮೆಂಟಿನ ಎರಡೂ ಸದನಗಳ ಘನತೆ ಗೌರವಗಳೇ ಅವರಿಗೆ ಅತ್ಯಂತ ಮಹತ್ವದ ಸಂಗತಿಗಳಾಗಿದ್ದವು.

ವಾಸ್ತವವಾಗಿ, ಭೂಪೇಶ ಗುಪ್ತ ಅವರು ತಮ್ಮ ಜೀವಮಾನವಿಡೀ ಜನತೆಯ ಪ್ರಜಾಪ್ರಭುತ್ವವಾದಿ ಹಕ್ಕು ಹಾಗೂ ಸ್ವಾತಂತ್ರ್ಯದ ನೆಲೆಯನ್ನು ವಿಸ್ತೃತಗೊಳಿಸುವುದಕ್ಕಾಗಿಯೇ ಸೆಣಸಿದರು. ಜನತೆಯ ಹಕ್ಕು, ಸ್ವಾತಂತ್ರ್ಯಗಳಿಗೆ ಉಂಟಾಗುತ್ತಿದ್ದ ಯಾವುದೇ ಚ್ಯುತಿಯನ್ನು ಅವರು ನಿರ್ಭೀತಿಯಿಂದ ಎದುರಿಸಿ ಹೋರಾಡುತ್ತಿದ್ದರು. ಜನಪರ ಹೋರಾಟ, ಪ್ರಜಾತಂತ್ರದ ಮೌಲ್ಯಗಳ ಕುರಿತ ಕಾಳಜಿ ಅವರ ಎಲ್ಲಾ ಭಾಷಣಗಳಲ್ಲಿ ಎದ್ದು ಕಾಣುತ್ತಿದ್ದ ಕೇಂದ್ರ ಸಂಗತಿಗಳಾಗಿದ್ದವು. ಜೊತೆಗೆ ಸಮಾಜವಾದಿ ದೇಶಗಳೊಂದಿಗೆ ಗೆಳೆತನ, ಸಾಮಾಜಿಕ ಪ್ರಗತಿ, ಸಾಮ್ರಾಜ್ಯಶಾಹಿ ವಿರೋಧಿ ನಿಲುವು ಅವರ ಮಾತಿಗೆ ಮೊನಚನ್ನು, ಗಾಂಭೀರ್ಯವನ್ನೂ ತಂದು ಕೊಡುತ್ತಿದ್ದವು.

ಶ್ರೀ ಭೂಪೇಶ ಗುಪ್ತ ಅವರು ಸಂಸದೀಯ ವ್ಯವಹಾರದ ವಿವಿಧ ತಂತ್ರ ರೂಪಗಳನ್ನು ಕರಗತಮಾಡಿ ಕೊಂಡಿದ್ದರು. ತಮ್ಮ ವಾದ ಮಂಡನೆಗೆ ಸಾಧ್ಯವಿದ್ದ ಎಲ್ಲ ದಾರಿಗಳನ್ನು ಬಳಸುತ್ತಿದ್ದರು. ವಿಶೇಷ ಸೂಚನೆ, ಗಮನ ಸೆಳೆಯುವ ಸೂಚನೆ, ಲಘು ಸೂಚನೆ, ಪ್ರಶ್ನೆಗಳು, ಅರ್ಧ ತಾಸಿನ ಚರ್ಚೆಗಳು, ಪ್ರಶ್ನೋತ್ತರಗಳು, ಇತ್ಯಾದಿ ಇವಲ್ಲದೆ ಮುಖ್ಯ ವಿಷಯಗಳಾದ ವಿದೇಶಿ ನೀತಿ, ಅಧ್ಯಕ್ಷರ ಭಾಷಣ, ಹಣಕಾಸಿನ ಮಸೂದೆ, ಮಂತ್ರಾಲಯಗಳ ಕಾರ್ಯ ವೈಖರಿ ಕುರಿತು ಚರ್ಚೆ ಮಾಡುತ್ತಿದ್ದರು. ಸಾಧಾರವಾದ ವಾದಗಳು, ಖಚಿತ

** Rajya Sabha Debates 10 March, 1975, CC. 132 & 136

ಸಂಗತಿಗಳು, ಚುಚ್ಚಿ ಇರಿಯುವ ಮೂದಲಿಕೆಯ ಮಾತುಗಳು, ನವುರಾದ ತಿಳಿಹಾಸ್ಯ ಅವರ ಭಾಷಣಗಳಿಗೆ ವಿಶೇಷ ಕಳೆಗಟ್ಟುತ್ತಿದ್ದವು. ಯಾವುದೇ ಪಕ್ಷದಲ್ಲಿ ಸದಾ ತನ್ನವಾದಗಳೊಂದಿಗೆ, ಅವುಗಳಿಗೆ ಬೆಂಬಲವಾಗಿ ಸಾಕ್ಷ್ಯಾಧಾರದ ದಾಖಲೆಯೊಂದಿಗೆ, ಸಿದ್ದನಿರುವ ವ್ಯಕ್ತಿ - ಇದ್ದರೆಂದರೆ ಅವರು ಭೂಪೇಶ ಗುಪ್ತ ಮಾತ್ರ.

ಈ ಮಾತಿಗೊಂದು ನಿದರ್ಶನ : 1954ರ ಏಪ್ರಿಲ್ 22ರಂದು ಅಂದಿನ ಪ್ರಧಾನ ಮಂತ್ರಿಗಳಾಗಿದ್ದ ಶ್ರೀ ಜವಾಹರಲಾಲ ನೆಹರು ರಾಜ್ಯಸಭೆಯಲ್ಲಿ "ಕಳೆದ ಆರು ವರ್ಷಗಳಿಂದ ಭಾರತ ಸರ್ಕಾರ ಅನುಸರಿಸಿಕೊಂಡು ಬಂದ ಧೋರಣೆಯೆಂದರೆ, ಯಾವುದೇ ವಿದೇಶಿ ಸೈನ್ಯ ಭಾರತದ ಮೂಲಕ ಹಾದು ಹೋಗುವುದಕ್ಕಾಗಲಿ, ಭಾರತದ ಮೇಲಿಂದ ಹಾರಿಹೋಗುವುದಕ್ಕಾಗಲಿ, ಅವಕಾಶ ನೀಡಿಲ್ಲ ಎಂದು ಹೇಳಿಕೆ ನೀಡಿದೊಡನೆಯೇ ಶ್ರೀ ಭೂಪೇಶ ಗುಪ್ತ ಅವರು 24 ಏಪ್ರಿಲ್ 1954ರಂದು ಫ್ರಾನ್ಸಿನ ಸೈನಿಕರನ್ನು ಇಂಡೋಚೀನಾಕ್ಕೆ ಹೋತ್ತೊಯ್ಯುತ್ತಿದ್ದ ಅಮೇರಿಕೆಯ "ಗ್ಲೋಬ್ ಮಾಸ್ಟರ್" ಡಂ ಡಂ ವಿಮಾನ ನಿಲ್ದಾಣದಲ್ಲಿ ಇಳಿದು ಇಂಧನ ತುಂಬಿಸಿಕೊಂಡು ಹಾರಿ ಹೋದ ಸುದ್ದಿಯ ಪತ್ರಿಕಾ ವರದಿಯನ್ನು ಸದನದ ಗಮನಕ್ಕೆ ತಂದರು. ಸದನದ ಮುಂದಿರಿಸಿದ ಅವರ ಇನ್ನೊಂದು ವರದಿಯ ಪ್ರಕಾರ 27ರ ಏಪ್ರಿಲ್ 1954ರಂದು ಫ್ರಾನ್ಸ್‌ನ ವಾಯುದಳದ "ಸ್ಕೈ ಮಾಸ್ಟರ್" ಡಂ ಡಂ ನಿಲ್ದಾಣದಲ್ಲಿ ಇಳಿದು ಇಂಡೋ ಚೀನಾಕ್ಕೆ ಹಾರಿಹೋಗಿತ್ತು. ಈ ವರದಿಗಳನ್ನು ಸದನದ ಗಮನಕ್ಕೆ ತರುವದಷ್ಟೆ ಅಲ್ಲ, ಈ ವರದಿಗಳನ್ನು ಸತ್ಯತೆಯನ್ನು ಭಾರತ ಸರ್ಕಾರ ಅಲ್ಲಗಳೆದಿಲ್ಲ ಎಂಬುದನ್ನು ಅವರು ದಾಖಲೆಗೊಳಿಸಿದರು.*

ಕೆಲವೇ ದಿನಗಳ ನಂತರ ಅವರು ಇನ್ನೊಂದು ಪತ್ರಿಕಾ ವರದಿಯನ್ನು ಮಂಡಿಸಿ ಮಾತನಾಡಿದರು. ಅದರ ಪ್ರಕಾರ 12ನೇ 1954ರಂದು ಫ್ರಾನ್ಸ್ ದೇಶದ ಸ್ಕಾಯ್ ಮಾಸ್ಟರ್ ಕಲ್ಕತ್ತಾದಲ್ಲಿ ಭೂಮಿಗಿಳಿದಿತ್ತು. ಅದರಲ್ಲಿಯ "36 ಜನ ಫ್ರಾನ್ಸಿನ ಸೈನಿಕರು 'ಗ್ರಾ ್ಯಂಡ್ ಹೋಟಲ್'ನ ರೂಮ್ ನಂ. 315, 320, 466 ಮತ್ತು 490ರಲ್ಲಿ ಕೆಲವು ಗಂಟೆಗಳವರೆಗೆ ವಾಸ್ತವ್ಯ ಹೂಡಿ ಬೆಳಗಿನ ಜಾವ ಸುಮಾರು 3-30 ಗಂಟೆಗೆ ಹೋಗಿ ಬಿಟ್ಟಿದ್ದರು."**

ಶ್ರೀ ಭೂಪೇಶ ಗುಪ್ತ ವಿರಳ ಹಾಗೂ ಅನುಪಮ ಗುಣಗಳ ಸಂಸದೀಯ ಪಟುವಾಗಿ, ಶತ್ರು ಮಿತ್ರ ಎಲ್ಲರಿಂದಲೂ ಸಮಾನ ಶ್ಲಾಘನೆ ಗಳಿಸಿದ್ದರು. ಅವರನ್ನು ರಾಜ್ಯ ಸಭೆಯ 'ಬಿರುಗಾಳಿ ಭೂಪ' ಎಂದು ಕರೆದದ್ದು ಸೂಕ್ತವಾಗಿಯೇ ಇತ್ತು. ನಮ್ಮ ದೇಶದ ಸಂಸದೀಯ ಪ್ರಜಾಪ್ರಭುತ್ವದ ಚರಿತ್ರೆಯಲ್ಲಿ ಶ್ರೀ ಭೂಪೇಶ ಗುಪ್ತ ಅವರನ್ನು ಒಬ್ಬ ಸಮರ್ಥ ಸಂಸದೀಯ

---

* Rajya Sabha Debates 22 April. 1954. C. 3725.

** Rajya Sabha Debates 18th May. 1954. C. 6742.

ಪಟುವನ್ನಾಗಿ, ಅಷ್ಟೇ ಏಕೆ, ಹೆಚ್ಚು ಕಡಿಮೆ ಒಂದು ಸಂಸ್ಥೆಯನ್ನಾಗಿ ರೂಪಿಸಿದ ಶಕ್ತಿ, ಸಂಗತಿಗಳೆಂದರೆ ಕಮ್ಯುನಿಸ್ಟ್ ಆಂದೋಲನಕ್ಕೆ ಅವರು ಮಾಡಿಕೊಂಡ ಆತ್ಮಸಮರ್ಪಣೆ, ದುಡಿಯುವ ವರ್ಗದ ಹಿತಾಸಕ್ತಿಗಳ ರಕ್ಷಣೆ, ಸಂರಕ್ಷಣೆಗಾಗಿ ಮಾಡುವ ತ್ಯಾಗ, ದಲಿತ, ಮರ್ದಿತ ಜನತೆಯ ವಿಮೋಚನೆಗಾಗಿ ನಡೆಸಿದ ಅವಿರತ ಹೋರಾಟ, ಇತ್ಯಾದಿ. ಈ ನಿಸ್ಪೃಹ ಹಾಗೂ ತದೇಕ ಚಿತ್ತದ ಸಮರ್ಪಣಾನಿಲುವು ಅವರ ಒಟ್ಟಾರೆ ರಾಜಕೀಯ ಬದುಕಿನ ಸಾರಸರ್ವಸ್ವವಾಗಿತ್ತು, ಅವರ ವ್ಯಕ್ತಿತ್ವಕ್ಕೆ ತನ್ನದೆಯಾದ ಸಮುಚಿತ ಸಚ್ಚಾರಿತ್ರವನ್ನು ತಂದು ಕೊಟ್ಟಿದ್ದವು.

ಇಂತಹ ಬಹುಮುಖ ವ್ಯಕ್ತಿತ್ವದ ಪ್ರತಿಭಾ ಸಂಪನ್ನ 1981ರ ಆಗಸ್ಟ್ 6 ರಂದು ಮಾಸ್ಕೋದಲ್ಲಿ ತಮ್ಮ ಅಂತಿಮ ಉಸಿರೆಳೆದರು. ಹೃದಯಘಾತ ಅದಕ್ಕೆ ಕಾರಣವಾಗಿತ್ತು. ಅವರ ಅಕಾಲ ಮರಣದ ವಾರ್ತೆ ಎಲ್ಲೆಡೆಯೂ ಹರಡಿ ಹಬ್ಬುತ್ತಿದ್ದಂತೆ ಎಲ್ಲಾ ರಾಜಕೀಯ ವರ್ತುಲಗಳಲ್ಲಿ ಅಪಾರ ದುಃಖ, ಆಘಾತ ಕಂಡು ಬಂದವು. ಶ್ರೀ ಭೂಪೇಶ ಗುಪ್ತ ಅವರಂಥ ವ್ಯಕ್ತಿಯನ್ನು ಕಳೆದುಕೊಂಡದ್ದು, ಅಕ್ಷರಶಃ ತುಂಬಲಾರದ ನಷ್ಟವಾಗಿತ್ತು. ನೂರಾರು ರಾಷ್ಟ್ರೀಯ, ಅಂತರಾಷ್ಟ್ರೀಯ ನೇತಾರರಿಂದ ಭೂಪೇಶ ಗುಪ್ತ ಅವರ ಸಾವಿಗೆ ಸಂತಾಪ ಸಂದೇಶದ ಮಹಾಪೂರವೇ ಹರಿದು ಬಂತು.

ಶ್ರೀ ಗುಪ್ತ ಅವರ ಸಾವಿನ ಬಗ್ಗೆ ತಮ್ಮ ದುಃಖ ಭರಿತ ಆಘಾತವನ್ನು ಅಭಿವ್ಯಕ್ತಿಸಿದ ಅಂದಿನ ರಾಷ್ಟ್ರಾಧ್ಯಕ್ಷ ಶ್ರೀ ನೀಲಂ ಸಂಜೀವರೆಡ್ಡಿ ಅವರು ತಮ್ಮ ಸಂತಾಪ ಸೂಚಕ ಸಂದೇಶದಲ್ಲಿ "ಶ್ರೀ ಭೂಪೇಶ ಗುಪ್ತ ಒಬ್ಬ ಸಮರ್ಥ ವಾಗ್ಮಿಗಳಾಗಿದ್ದರು ದೇಶ ಅವರ ಸೇವೆಯನ್ನು ಚಿರಕಾಲ ಸ್ಮರಿಸುವುದು' ಎಂದು ಹೇಳಿದರೆ, ಅಂದಿನ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರು 'ಕಾ|| ಭೂಪೇಶ ಗುಪ್ತ ಅವರ ಸಾವಿನಲ್ಲಿ ನಮ್ಮ ದೇಶವು ಒಬ್ಬ ಮಹಾನ್ ತ್ಯಾಗಿ ಮತ್ತು ವಾಗ್ಮಿಯನ್ನು ಕಳೆದುಕೊಂಡಿದೆ' ಎಂದು ನಿಡುಸುಯಿದಿದ್ದರು. ಮುಂದುವರೆದ ಅವರು 'ಶ್ರೀ ಭೂಪೇಶ ಗುಪ್ತ ಅವರೊಂದಿಗೆ ರಾಜಕೀಯ ಭಿನ್ನಾಭಿಪ್ರಾಯ ಹೊಂದಿದ್ದವರೂ ಅವರ ಬಗ್ಗೆ ಉನ್ನತ ಗೌರವ ಇಟ್ಟುಕೊಂಡಿದ್ದರು; ಭೂಪೇಶ ಗುಪ್ತ ಅವರ ಗೈರು ಹಾಜರಿಯಲ್ಲಿ ಸಂಸತ್ತು ತನ್ನ ಮೊದಲಿನ ಮೆರಗನ್ನು ಕಳೆದುಕೊಂಡಿದೆ ಎಂದು ತಮ್ಮ ಶೋಕ ವ್ಯಕ್ತಮಾಡಿದ್ದರು.

ಅಂದಿನ ರಾಜ್ಯ ಸಭೆಯ ಅಧ್ಯಕ್ಷರಾಗಿದ್ದ ಶ್ರೀ ಎಂ.ಹಿದಾಯತುಲ್ಲಾ ಅವರು ಹೀಗೆ ಹೇಳಿದರು "... ಸ್ಪಷ್ಟತೆಯಿಂದೊಡಗೂಡಿದ ಸದಾದ್ವಿವೇಕ, ರಾಜಕೀಯ ವಿಚಕ್ಷಣತೆಯಿಂದೊಡಗೂಡಿದ ಮುಂದಾಲೋಚನೆ, ಜೊತೆಗೆ ಸಮದರ್ಶನದ ತೀರ್ಮಾನ-ಈ ಎಲ್ಲವನ್ನು ಒಳಗೊಂಡಿದ್ದ ಅವರ ವ್ಯಕ್ತಿತ್ವದ ಗುಣಗಳು, ಮೇಲಾಗಿ ಅವರ ಪ್ರಾಮಾಣಿಕತೆ,

ಸದಾಶಯ ಎಲ್ಲವೂ ಸಂಶಯಾತೀತವಾಗಿದ್ದವು. ವ್ಯಕ್ತಿತ್ವದ ಪಾರದರ್ಶಕತೆ ಪ್ರಾಂಜಲ ಮನಸ್ಸು ಅವರ ಎದ್ದು ಕಾಣುವ ಗುಣಗಳಾಗಿದ್ದವು. ಅವರು ಎಂದೂ ಯಾವುದನ್ನು ವೈಯಕ್ತಿಕ ಲಾಭಕ್ಕಾಗಿ, ಹಿರಿಮೆ-ಗರಿಮೆಯನ್ನು ಸಾಧಿಸುವುದಕ್ಕಾಗಿ ಮಾಡಲಿಲ್ಲ... ಅವರ ಮೊದಲ ಪ್ರೀತಿ ಕಾರ್ಮಿಕ ವರ್ಗಕ್ಕೇ; ಆದರೆ ಬಡಜನತೆಯನ್ನು ದುರ್ಭರ ಸ್ಥಿತಿಯಲ್ಲಿದ್ದ ಹಿಂದುಳಿದ ವರ್ಗಗಳನ್ನು ಅವರು ಅಷ್ಟೇ ಪ್ರೀತಿಸುತ್ತಿದ್ದರು. ಅವರೊಬ್ಬ ಚತುರ, ಚಾಣಕ್ಷ ಸಂಸದೀಯ ಪಟುವಾಗಿದ್ದರು...."

ಅಂದಿನ ಲೋಕಸಭಾ ಅಧ್ಯಕ್ಷರಾಗಿದ್ದ ಡಾ।। ಬಲರಾಮ ಜಾಖಡ್ ತಮ್ಮ ಶೋಕ ಸಂದೇಶದಲ್ಲಿ : "ಅವರ ಸಾವಿನಲ್ಲಿ ನಮ್ಮ ಸಂಸದೀಯ ಬದುಕಿನ ಒಬ್ಬ ಮಹಾನ್ ವ್ಯಕ್ತಿಯನ್ನು ಕಳೆದುಕೊಂಡಿದ್ದೇವೆ. ತೀರ ಗಂಭೀರ ಸ್ವಭಾವದ ಸದಸ್ಯರಲ್ಲಿ ಅವರೊಬ್ಬರಾಗಿದ್ದರು. ತನ್ನ ಹೃದಯಕ್ಕೆ ಹತ್ತಿರವಾದ ಮಹತ್ಕಾರಣಕ್ಕಾಗಿ ಅಚಲ ನಂಬುಗೆ, ಅಮಿತ ಬದ್ಧತೆಯಿಂದ ಬಡಿದಾಡುತ್ತಿದ್ದ ವ್ಯಕ್ತಿ ಅವರಾಗಿದ್ದರು".

ಭೂಪೇಶ-ದಾ ಅವರ ವ್ಯಕ್ತಿತ್ವದ ಕಿರು ಪರಿಚಿತ ಆಯಾಮದ ಮೇಲೆ ಬೆಳಕು ಚೆಲ್ಲುತ್ತ ರಾಜ್ಯ ಸಭೆಯ ಅಂದಿನ ಉಪಾಧ್ಯಕ್ಷರಾಗಿದ್ದ ಶ್ರೀ ಶಾಮಲಾಲ ಯಾದವ ಅವರು ಆಡಿದ ಮಾತು ಇಂತಿವೆ;

"ತಮ್ಮ ರಾಜಕೀಯ ಚಟುವಟಿಕೆಗಳಲ್ಲಿ ಪ್ರಜ್ವಲ ಕ್ರಾಂತಿಕಾರಿಗಳಾಗಿದ್ದರೂ ಶ್ರೀ ಭೂಪೇಶ ಗುಪ್ತ ಅವರು ತಮ್ಮ ಸಂಸದೀಯ ಸಹವರ್ತಿಗಳಿಗೆ ಒಬ್ಬ ತುಂಬಾ ಪ್ರಿಯರೂ ಹೃದಯವಂತರೂ ಆದ ಗೆಳೆಯರಾಗಿದ್ದರು".

ಮುಂದುವರೆದು ಅವರು ಇಂತೆಂದರು;

"ಶ್ರೀ ಭೂಪೇಶ ಗುಪ್ತ ಅವರ ಹೊರತು ರಾಜ್ಯ ಸಭೆಯು ಎಂದೆಂದಿಗೂ ಅಪೂರ್ಣವಾಗಿರುತ್ತದೆ. ಯಾಕೆಂದರೆ, ಅವರು ತಮ್ಮಷ್ಟಕ್ಕೆ ತಾವು ಒಂದು ಸಂಸ್ಥೆಯಾಗಿದ್ದರು 1952ರಲ್ಲಿ ರಾಜ್ಯ ಸಭೆ ಸ್ಥಾಪನೆಗೊಂಡಾಗಿನಿಂದಲೂ ನಿರಂತರವಾಗಿ ಅದರ ಸದಸ್ಯರಾಗಿ ಸ್ಥಾನ ಅಲಂಕರಿಸಿದ್ದರು. ಅವರ ಬದುಕಿನಾದ್ಯಂತ ಅವರು ತುಳಿತಕ್ಕೊಳಗಾದ ಜನತೆಯ ಪರವಾಗಿ ಹೋರಾಟ ನಡೆಸಿದ್ದರು. ಅವರ ಸಾವಿನಿಂದಾದ ತೆರವು ತುಂಬುವುದು ಅತ್ಯಂತ ಕಠಿಣ ಕೆಲಸ. ಅವರ ಸಾವಿನಲ್ಲಿ ಭಾರತೀಯ ಕಾರ್ಮಿಕ ವರ್ಗ ಒಬ್ಬ ಮಹಾನ್ ನೇತಾರರನ್ನು ನಿಶ್ಚಿತಮತಿ ನಿರ್ದೇಶಕನನ್ನು ಕಳೆದುಕೊಂಡಿದೆ. ಅಂತೆಯೇ ರಾಜ್ಯಸಭೆಯೂ ತನ್ನ ಜೇಷ್ಠ ಸದಸ್ಯನೊಬ್ಬನನ್ನು ಕಳೆದುಕೊಂಡಿದೆ".

ಈ ರೀತಿಯಾಗಿ ಅವರಿಗೆ ತುಂಬಾ ಆಪ್ತವಾಗಿದ್ದವರೆಲ್ಲರೂ ಅವರ ಅಚ್ಚು ಮೆಚ್ಚಿನ ಸ್ವಭಾವ ಕುರಿತು ನೆನಪಿಸಿಕೊಂಡಿದ್ದಾರೆ. ಕಾರ್ಮಿಕ ವರ್ಗದ ಮಹಾಕಾರಣಕ್ಕಾಗಿ ಅವರ ಸಮರ್ಪಿತ ಬದುಕು, ತುಂಬಾ ಶಕ್ತಿಯುತವಾದ ಲೇಖನಿ, ಹರಿತವಾದ ಮಾತು, ಸಂಸದೀಯ ವ್ಯವಹಾರದಲ್ಲಿ ತೋರುತ್ತಿದ್ದ ಅಪೂರ್ವ ಕುಶಲತೆ, ಅವರು ಗೆಳೆಯರೊಂದಿಗೆ ನಡೆದುಕೊಳ್ಳುತ್ತಿದ್ದ ಸೋಲ್ಲಾಸ ಸಲುಗೆ, ಬಡಬಗ್ಗರ ಬಗ್ಗೆ ತೋರುತ್ತಿದ್ದ ಹೃದಯವಂತಿಕೆ, ಈ ಎಲ್ಲವೂ ಅವರ ಬದುಕನ್ನು ಒಬ್ಬ ಧೀಮಂತ ತ್ಯಾಗಿಯ ಬದುಕನ್ನಾಗಿ ಮಾರ್ಪಡಿಸಿದ್ದವು. ವಾಸ್ತವವಾಗಿ, ನಮ್ಮ ದೇಶದ ರಾಷ್ಟ್ರೀಯ ಹಾಗೂ ಸಾಮಾಜಿಕ ವಿಮೋಚನೆಯ ಕಾರಣದೊಂದಿಗೆ ಅವರಿಗಿದ್ದ ಬದ್ಧತೆ, ಅವರ ಪ್ರಾಮಾಣಿಕತೆ ಹಾಗೂ ನಿಸ್ಪೃಹ ಧ್ಯೇಯ, ಒಪ್ಪಿಕೊಂಡ ಮೌಲ್ಯಗಳ ಬಗ್ಗೆ ಅರ್ಪಣಾ ಮನೋಭಾವ, ಈ ಮುಂತಾದ ಅವರ ಗುಣಗಳು ಶೋಷಣೆಯ ವಿರುದ್ಧ ಸೆಣಸುತ್ತಾ, ಸಾಮಾಜಿಕ ಹಾಗೂ ಆರ್ಥಿಕ ಸಮತೆಯಿಂದೊಡಗೂಡಿ ಒಂದು ವ್ಯವಸ್ಥೆಯ ಸಂಸ್ಥಾಪನೆಗಾಗಿ ಇಂದು ದುಡಿಯುತ್ತಿರುವ ಎಲ್ಲರಿಗೂ ನಿರಂತರ ಸ್ಫೂರ್ತಿಯನ್ನೀಯುತ್ತವೆ.

## ಆಕರ

1. ಅಹಮ್ಮದ್ ಮುಜಾಫ್ಫರ್ : My self and the Communist party of India - 1920 to 29 ಬಂಗಾಲಿಯಿಂದ ಪ್ರಭಾಸಕುಮಾರ್ ಸಿನ್ಹಾ ಅವರಿಂದ ಅನುವಾದಿತ, ಕಲ್ಕತ್ತಾ, 1970.

2. ಮಜುಮ್‌ದಾರ್, ಅಶಿಶ್ ಕುಮಾರ್ : Indian Foreign Policy and Marxist opposition parties in Parliament, ಕಲ್ಕತ್ತಾ, ನಯಾ ಪ್ರಕಾಶ, 1986.

3. ಮೋಹನ ರಾಮ್ : Indian Split within a split, ದೆಹಲಿ ವಿಕಾಸ ಪಬ್ಲಿಷಿಂಗ್ ಹೌಸ್, 1969.

4. ಮುಖರ್ಜಿ ಹಿರೇನ್ : Under Communism's colours-Reflection on Marxim, India and the World scene. ಹೊಸ ದಿಲ್ಲಿ: ಪೀಪಲ್ಸ್ ಪಬ್ಲಿಷಿಂಗ್ ಹೌಸ್, 1982, PP-146-150.

5. ನ್ಯೂ ಏಜ್, August 9 ಮತ್ತು 16, 1981.

6. ಸೇನ್‌ಗುಪ್ತ ಭವಾನಿ : Communism in Indian Politics, ನ್ಯೂಯರ್ಕ್, ಕೊಲಂಬಿಯಾ ಯುನಿವರ್ಸಿಟಿ ಪ್ರೆಸ್, 1972.

7. ಶರ್ಮಾ, ಟಿ.ಆರ್. : Communism in India: The Politics of fragmentation, ಹೊಸ ದೆಹಲಿ, ಸ್ಟರ್ಲಿಂಗ್, 1984.

8. ಸಿನ್ಹ, ವಿ.ಇ. : The Red rebel in India - A Study of Communist strategy and tactics, ಹೊಸದೆಹಲಿ, ಅಸೋಸಿಯೇಟೆಡ್ ಪಬ್ಲಿಷಿಂಗ ಹೌಸ, 1968.

9. Who is Who, Rajya Sabha, 1980.

# ಭಾಗ - 2

## ಅವರ ವಿಚಾರಧಾರೆ

ರಾಜ್ಯ ಸಭೆಯಲ್ಲಿ ಶ್ರೀ ಭೂಪೇಶ ಗುಪ್ತ ಅವರು ಮಾಡಿದ ಕೆಲವು ಭಾಷಣಗಳ ಆಯ್ದ ಭಾಗಗಳು.

# ಭಾಗ - 2

## ಭೂಪೇಶ ಗುಪ್ತ ಅವರ ವಿಚಾರಧಾರೆ

ರಾಜ್ಯ ಸಭೆಯಲ್ಲಿ ಅವರು ಮಾಡಿದ ಭಾಷಣಗಳ ಕೆಲವು ಆಯ್ದ ಭಾಗಗಳು.

1. ಕೊಳಚೆ ಪ್ರದೇಶಗಳ (ಸುಧಾರಣೆ ಮತ್ತು ನಿರ್ಮೂಲನೆ) ವಿಧೇಯಕ
2. ಅಣ್ವಸ್ತ್ರ ಪರೀಕ್ಷಣಾ ಆಸ್ಫೋಟಗಳ ಕುರಿತು ಜಾಗತಿಕ ಶಕ್ತಿ ರಾಷ್ಟ್ರಗಳ ಸಮ್ಮೇಳನ.
3. ಆರ್ಥಿಕ ಅಭಿವೃದ್ಧಿ.
4. ಹಿಂದೀ ಭಾಷೆಗೆ ಉತ್ತೇಜನ.
5. ಚುನಾವಣೆಗಳಲ್ಲಿ ಹರಿದು ಬರುವ ಬೃಹತ್ ಮೊತ್ತದ ಹಣ ಹಾಗೂ ಸರ್ಕಾರಿ ಯಂತ್ರದ ಬಳಕೆ - ಇವುಗಳನ್ನು ತಡೆಯುವ ಕುರಿತು.
6. ಕೇಂದ್ರ- ರಾಜ್ಯ ಸಂಬಂಧಗಳು.
7. ಉದ್ಯೋಗದ ಹಕ್ಕು ಮೂಲಭೂತ ಹಕ್ಕಾಗಬೇಕು.
8. ಪಾಕಿಸ್ತಾನಕ್ಕೆ ಅಮೇರಿಕದ ಮಿಲಿಟರಿಯ ಸಹಾಯ.
9. ಭಾರತದಲ್ಲಿ ಮಹಿಳೆಯ ಸ್ಥಾನ.
10. ಮತದಾನದ ವಯಸ್ಸು ಇಳಿಸುವ ಕುರಿತು.
11. ಸಂಸದೀಯ ಸಮಿತಿಗಳು.

## 1. ಕೊಳಚೆ ಪ್ರದೇಶಗಳ (ಸುಧಾರಣೆ ಮತ್ತು ನಿರ್ಮೂಲನೆ) ವಿಧೇಯಕ*

ಸನ್ಮಾನ್ಯ ಉಪಾಧ್ಯಕ್ಷರೆ, ಈ ವಿಧೇಯಕದಲ್ಲಿ ನಾನು ಆಸಕ್ತಿ ಕಳೆಯಲು ಕಾರಣವೆಂದರೆ, ಇಂಥ ಕ್ರಮಗಳು ಕೇವಲ ಕೇಂದ್ರ ಸರಕಾರದ ಮಟ್ಟದಲ್ಲಿ ಅಷ್ಟೇಯಲ್ಲ, ರಾಜ್ಯ ಸರ್ಕಾರದ ಮಟ್ಟಗಳಲ್ಲಿಯೂ ಹೆಚ್ಚು ಹೆಚ್ಚಾಗಿ ಕೈಗೊಳ್ಳುವಂತಾಗಬೇಕೆಂಬುದೇ ನನ್ನ ಬಯಕೆಯಾಗಿದೆ. ಆದರೆ ನನಗೆ ಈ ಕುರಿತು ಇದ್ದ ಆರಂಭದ ಉತ್ಸಾಹದ ಮೇಲೆ, ಮಾನ್ಯ ಮಂತ್ರಿಗಳ ಸಂಕ್ಷಿಪ್ತವಾದ ಗೊಂದಲಗೊಳಿಸುವ ಭಾಷಣದಿಂದ, ಒಂದಿಷ್ಟು ತಣ್ಣೀರೆರಚಿದಂತಾಗಿದೆ ಎಂಬುದನ್ನು ನಾನು ಒಪ್ಪಿಕೊಳ್ಳುತ್ತೇನೆ. ಈ ಕ್ರಮಗಳನ್ನು ಹಿಂದಿನ ಕೊರತೆಗಳನ್ನು ತುಂಬುವ ದೃಷ್ಟಿಯಿಂದ ವಿಫಲತೆಗಳನ್ನು ಸರಿಪಡಿಸುವ ಉದ್ದೇಶದಿಂದ ಹಾಗೂ ಮಾನವೀಯ ಸಹಾನುಭೂತಿಯ ನೆಲೆಯಿಂದ ಕೈಗೊಳ್ಳಲಾಗುತ್ತಿದೆಯೆಂದು ಭಾವಿಸಿದ್ದೆ; ಮತ್ತು ಸರಕಾರದ ಈ ನಿಲುವಿನ ಬಗ್ಗೆ ಒಂದಿಷ್ಟು ಹೆಮ್ಮೆಯೂ ಎನಿಸಿತ್ತು. ಆದರೆ ಹೀಗೆ ಕೈಗೊಳ್ಳಲಾದ ಕ್ರಮಗಳಿಗೆ ಈ ಯಾವುದೇ ಉದ್ದೇಶವಿಲ್ಲವೆಂಬುದು ಮಾನ್ಯ ಮಂತ್ರಿಗಳ ಭಾಷಣದಿಂದ ಸ್ಪಷ್ಟವಾಗಿದೆ. ಅವರು ಹೇಳಿದಂತೆ ಈ ಕ್ರಮಕೈಗೊಳ್ಳಲು ಮುಖ್ಯ ಕಾರಣವೆಂದರೆ, ನಮ್ಮ ಕೊಳಗೇರಿಗಳು ಬೀಳಬಾರದು, ಅವರ ಮುಂದೆ ನಾವು ಸುಂದರವಾದ ಭಾರತ ಪ್ರಸ್ತುತಪಡಿಸುವಂತಾಗಬೇಕು. ಈ ಉದ್ದೇಶದಿಂದ, ಸಂದರ್ಶಕರಲ್ಲಿ ಅಸಹ್ಯ ಹುಟ್ಟಿಸಬಹುದಾದ, ಭಾರತದ ಸೌಂದರ್ಯಕ್ಕೆ ಚ್ಯುತಿ ತರಬಹುದಾದ ಈ ಕೊಳಗೇರಿಗಳನ್ನು ನಿರ್ಮೂಲನ ಮಾಡಲು ಯೋಚಿಸಲಾಗಿದೆ. ದೆಹಲಿ ಮತ್ತು ಅದರ ಸುತ್ತಮುತ್ತಲಿನ ಜನರು ಸುದೈವಿಗಳೇ ಇರಬೇಕು. ಯಾಕೆಂದರೆ, ಅವರು ನಮ್ಮ ಮಾನ್ಯ ಮಂತ್ರಿಗಳಿಗೆ ತೀರ ಹತ್ತಿರದಲ್ಲಿದ್ದಾರೆ. ಎರಡನೆಯದಾಗಿ, ಅವರು ಬಹು ಸರಳವಾಗಿ ವಿದೇಶಿ ದರ್ಶಕರ ದೃಷ್ಟಿಗೆ ಬೀಳುವಂತಿದ್ದಾರೆ. ಆದರೆ ನಾನಾದರೋ ಈ ಸಮಸ್ಯೆಯನ್ನು ಈ ದೃಷ್ಟಿಯಿಂದ ನೋಡುವುದಿಲ್ಲ. ತಿಪ್ಪೆಸಾರಿಸುವ ದೃಷ್ಟಿಯಿಂದ ಮಾಡುವ ಇಂಥ ಯಾವುದೇ ಕೆಲಸದಿಂದ ಉಪಯೋಗವಾಗದು. ಯಾಕೆಂದರೆ, ಇದು ಬಹು ವ್ಯಾಪಕವಾದ ಹರವಿನ ಸಮಸ್ಯೆಯಾಗಿದೆ. ಮೇಲಾಗಿ, ಸರಕಾರದ ಸದಸ್ಯರು ಈ ಕುರಿತು ಮೇಲಿಂದ ಮೇಲೆ ಸಾಕಷ್ಟು ಮಾತಾಡಿದ್ದಾರೆ. ಆದರೆ ಮಾಡಿದ ಕೆಲಸ ಮಾತ್ರ ಶೂನ್ಯವೆಂದೇ ಹೇಳಬೇಕು. ನಮ್ಮ ಪ್ರಧಾನ ಮಂತ್ರಿಗಳು ಅನೇಕ ಸ್ಥಳಗಳಲ್ಲಿ ಕೊಳಗೇರಿಗಳ ಕುರಿತು ಮಾಡಿದ ಭಾಷಣಗಳು ಇಲ್ಲಿಯ ಎಲ್ಲ ಸಾಮಾನ್ಯ ಸದಸ್ಯರ ನೆನಪಿನಲ್ಲಿವೆ ಎಂದು ಭಾವಿಸುತ್ತೇನೆ.

ಮಾನ್ಯ ಪ್ರಧಾನ ಮಂತ್ರಿಗಳು ಕೊಳಗೇರಿಗಳ ವಿರುದ್ಧ ಒಂದು ಸಂಗ್ರಾಮವನ್ನೇ ಸಾರಿದಂತೆ ಕಾಣುತ್ತಿದ್ದರು. ಅವರು ಅದರಂತೆಯೇ ನಡೆದುಕೊಂಡಿದ್ದೇ ಆದರೆ ರಾತ್ರೋರಾತ್ರಿ ಎಲ್ಲ ಕೊಳಗೇರಿಗಳಾದರು ನಿರ್ನಾಮ ಮಾಡುವರೆಂದೇ ನಮಗನಿಸಿತ್ತು. ನಮಗೆ ಅಂಥ

---

* ಕೊಳಚೆ ಪ್ರದೇಶಗಳ (ಸುಧಾರಣೆ ಮತ್ತು ನಿರ್ಮೂಲನೆ) ವಿಧೇಯಕದ ಮೇಲಿನ ಚರ್ಚೆಯಿಂದ, ರಾಜ್ಯಸಭೆ,18 ಡಿಸೆಂಬರ್, 1956, ಸಿ.ಸಿ.2976-2986.

ವೀರಾವೇಶದ ಭಾಷೆಗಳಲ್ಲಿ ಮಾತಿನ ಶೂರತ್ವದಲ್ಲಿ, ಅಸಕ್ತಿಯಿರಲಿಲ್ಲ. ಆದರೆ ದೇಶದಲ್ಲಿಯ ಕೊಳಗೇರಿಗಳ ದೃಶ್ಯ ಸರಕಾರದ ಮನಸ್ಸನ್ನು ಬಹುಶಃ ವಿಚಲಿತಗೊಳಿಸಿದೆ ಎಂದೇ ನಾವು ಭಾವಿಸಿದ್ದೆವು. ಈ ಕೊಳಗೇರಿಗಳನ್ನೆಲ್ಲ ನಿರ್ಮೂಲನೆ ಮಾಡಿ, ಕೊಳಚೆ ನಿವಾಸಿಗಳನ್ನು ಅಸಹ್ಯ, ಹೇಯ ಸ್ಥಿತಿಯಿಂದ ಮೇಲೆತ್ತಿ ಉತ್ತಮ ಬದುಕಿಗೆ ದಾರಿ ಮಾಡಿಕೊಡಲು ಯಾವುದಾದರೂ ಒಂದು ತೀವ್ರ ಕ್ರಮ ಕೈಗೊಳ್ಳಬಹುದೆಂದೂ ನಾವು ಸರಕಾರದ ಬಗ್ಗೆ ಆಶಾಭಾವನೆಯನ್ನು ಹೊಂದಿದ್ದೆವು. ಆದರೆ ನಿಮ್ಮೆಲ್ಲರಿಗೂ ತಿಳಿದಿರುವಂತೆ, ವಾಸ್ತವವಾಗಿ ಏನೂ ಮಾಡಲಾಗಿಲ್ಲ. ಪ್ರಸಕ್ತ, ದೆಹಲಿಯಲ್ಲಿ ಕೈಗೊಳ್ಳಲಾಗುತ್ತಿರುವ ಈ ಕ್ರಮಗಳ ಮೂಲಕ ಯಾವ ಮಟ್ಟಿನ ಸುಧಾರಣೆಯಾಗುವುದೋ ನಮಗೆ ಗೊತ್ತಿಲ್ಲ. ನಮ್ಮ ನಗರಗಳಲ್ಲಿ ಕಳೆದ ಐದು ವರ್ಷದ ಅವಧಿಯಲ್ಲಿ ಆವಾಸದ ಸಮಸ್ಯೆ ತುಂಬ ತೀವ್ರಗೊಂಡಿದೆ, ಮತ್ತು ಎರಡನೇ ಪಂಚವಾರ್ಷಿಕ ಯೋಜನೆಯಿಂದ ತಿಳಿದುಬರುವುದರ ಮಟ್ಟಿಗೆ ಹೇಳುವುದಾದರೆ, ಭವಿಷ್ಯತ್ತಿನಲ್ಲಿಯೂ ಈ ಸಮಸ್ಯೆಗೆ ಪರಿಹಾರ ತುಂಬಾ ಆಶಾದಾಯಕವಾಗಿದೆ. ನಾನು ಹೀಗೆ ಹೇಳಲು ಕಾರಣ: ದ್ವಿತೀಯ ಪಂಚವಾರ್ಷಿಕ ಯೋಜನೆಯ ಮುಕ್ತಾಯದ ಸಂದರ್ಭದಲ್ಲಿ ನಗರದ ಆವಾಸದ ಸಮಸ್ಯೆ ಹಿಂದಿಗಿಂತಲೂ ಎರಡುಪಟ್ಟು ಉಲ್ಬಣಗೊಳ್ಳುವುದೆಂದು ಯೋಜನೆಯಲ್ಲಿಯೋ ಸ್ಪಷ್ಟವಾಗಿ ಹೇಳಲಾಗಿದೆ. ಬೇಕಾದರೆ ಯೋಜನೆಯಲ್ಲಿ ಮುದ್ರಿತವಾಗಿರುವ ಅದನ್ನು ನೀವೇ ಸ್ವತಃ ನೋಡಬಹುದು. ನಮಗೆ ಗೊತ್ತಿರುವಂತೆ ಸುಮಾರು 60 ಮಿಲಿಯನ್‌ಗೂ ಹೆಚ್ಚು ಜನ ನಗರ-ಪಟ್ಟಣಗಳಲ್ಲಿ ವಾಸಿಸುತ್ತಿದ್ದಾರೆ. ಈ ಜನಸಂಖ್ಯೆಯ ದೊಡ್ಡದೊಂದು ಭಾಗ ಮನುಷ್ಯನ ವಾಸಕ್ಕೆ ಅಯೋಗ್ಯವಾಗಿರುವ ಕೊಳೆಗೇರಿಗಳಲ್ಲಿ ಬದುಕು ಸಾಗಿಸುತ್ತಿದೆ. ದೆಹಲಿಯಲ್ಲಿಯೇ 2 ಲಕ್ಷಕ್ಕೂ ಹೆಚ್ಚಿನ ಜನರು ಕೊಳೆಗೇರಿಗಳ ನಿವಾಸಿಗಳಾಗಿದ್ದಾರೆಂದು ಹೇಳಲಾಗಿದೆ. ಮತ್ತು ಸರಕಾರ ಈ ಕುರಿತು ತುರ್ತಾಗಿ ಗಮನ ಹರಿಸಿ, ಈ ಕೊಳಚೆ ನಿರ್ಮೂಲನೆಯ ಕ್ರಮಗಳನ್ನು ಕೂಡಲೇ ಕೈಗೊಳ್ಳಬೇಕಾಗಿದೆ. ಕಲ್ಕತ್ತಾ, ಬಾಂಬೆ, ಮದ್ರಾಸ್ ಮತ್ತು ಇನ್ನಿತರ ಸ್ಥಳಗಳ ಚಿತ್ರಣ ಇದಕ್ಕಿಂತ ಭಿನ್ನವಾಗಿಯೇನೂ ಇಲ್ಲ - ಇದಕ್ಕಿಂತಲೂ ತುಸು ಕೆಟ್ಟದ್ದಾಗಿಯೇ ಇದೆಯೆಂದು ಹೇಳಬಹುದು.

ಆದರೆ ಈ ಪರಿಸ್ಥಿತಿಯನ್ನು ಸುಧಾರಿಸಲು ಸರಕಾರ ಏನೇನೂ ಮಾಡಿಲ್ಲ. ಕೊಳೆಗೇರಿಗಳ ಆಸೆಬುರಕ ಮಾಲೀಕರು ಅವುಗಳನ್ನು ರಿಪೇರಿ ಮಾಡಿ ಅಲ್ಲಿಯ ನಿವಾಸಿಗಳಿಗೆ ಪೌರಸೌಕರ್ಯಗಳನ್ನೊದಗಿಸಿ, ಅವು ಮನುಷ್ಯನ ವಾಸಕ್ಕೆ ಯೋಗ್ಯ ಸ್ಥಳಗಳನ್ನಾಗಿ ಮಾಡುವಂತೆ ಕ್ರಮ ಕೈಗೊಳ್ಳಲು ಒತ್ತಾಯಿಸಬೇಕಾಗಿದೆ ಎನ್ನುವುದರ ಬಗ್ಗೆ ನನಗೆ ಸಂಪೂರ್ಣ ಸಮ್ಮತಿಯಿದೆ. ಇಂಥ ಒತ್ತಾಯದ ಕ್ರಮಗಳಿಲ್ಲದಿದ್ದರೆ ಪರಿಸ್ಥಿತಿಯಲ್ಲಿ ಯಾವುದೇ ಸುಧಾರಣೆ ಸಾಧ್ಯವಿಲ್ಲ, ಮತ್ತು ಇದರಿಂದ ಸರಕಾರಕ್ಕೆ ಯಾವುದೇ ಕೀರ್ತಿ ಬರಲಾರದು. ಈ ಕುರಿತು ಅನೇಕ ವಿಧೇಯಕಗಳು ತರಾತುರಿಯಲ್ಲಿ ಬಂದು ಹೋದುದ್ದನ್ನು ಕಂಡಿದ್ದೇವೆ. ಆದರೆ ಈ ಎಲ್ಲ

ವರ್ಷಗಳುದ್ದಕ್ಕೂ ಯಾವುದೇ ಕ್ರಮಗಳನ್ನು ತೀವ್ರಗೊಳಿಸಲು ಸರಕಾರಕ್ಕೆ ಯಾಕೆ ಸಾಧ್ಯವಾಗಿಲ್ಲವೆಂಬುದನ್ನು ನಾನು ತಿಳಿಯಬಯಸುತ್ತೇನೆ. ಈ ದಿಶೆಯಲ್ಲಿ ಯಾವುದೇ ಸೂಕ್ತ ಕ್ರಮಕೈಗೊಂಡು ನಾಗರಿಕ ಬದುಕಿನ ಮೇಲಿರುವ ಈ ಅವಮಾನವನ್ನು ಹೊಸಕಿ ಹಾಕಲು ಯಾಕೆ ಸಾಧ್ಯವಾಗಿಲ್ಲ? ನಿಜವೆಂದರೆ, ಅವರು ಈ ಕುರಿತು ಏನೂ ಮಾಡಿಲ್ಲ. ಆದ್ದರಿಂದ ಸರಕಾರ ದೇಶಕ್ಕೆ ಈ ಬಗ್ಗೆ ವಿವರಣೆ ನೀಡಬೇಕಾಗಿದೆ. ನನ್ನ ದೃಷ್ಟಿಯಲ್ಲಿ ಇದಕ್ಕೆ ಮುಖ್ಯ ಕಾರಣವೇನೆಂದರೆ, ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಸರಕಾರ ಈ ದಿಕ್ಕಿನಲ್ಲಿ ಯಾವುದೇ ಕ್ರಮಕೈಗೊಳ್ಳಲು ಹಿಂಜರಿಯುವಂತೆ ಒತ್ತಡ ಹಾಕುತ್ತಿವೆ. ಇಲ್ಲದಿದ್ದರೆ ಕೋಟ್ಯಾಂತರ ಜನರ ಬದುಕನ್ನು ಉತ್ತಮಗೊಳಿಸಲು ಉತ್ಸುಕವಾಗಿರುವ ಸರಕಾರ ಈ ಸಮಸ್ಯೆಯ ಬಗ್ಗೆ ಸಮಯೋಚಿತ ಕ್ರಮ ಕೈಗೊಳ್ಳಲು ಯಾಕೆ ಹಿಂದೇಟು ಹಾಕುತ್ತಿದೆ? ಸರಕಾರ ಈ ಸದನಕ್ಕೆ ಮತ್ತು ಆ ಮೂಲಕ ಇಡೀ ದೇಶಕ್ಕೆ ಇದರ ಬಗ್ಗೆ ಸಮಜಾಯಿಷಿ ನೀಡಬೇಕಾಗಿದೆ.

ಈಗ ಕೈಗೊಳ್ಳಲಾಗುತ್ತಿರುವ ಕ್ರಮಗಳು ಪರಿಸ್ಥಿತಿಯ ಅವಶ್ಯಕತೆಯ ದೃಷ್ಟಿಯಿಂದ ತೀರ ನಿಕೃಷ್ಟವಾಗಿವೆ: ವಿರಾಟ್ ಸ್ವರೂಪದ ಸಮಸ್ಯೆಯ ಸಮ್ಮುಖದಲ್ಲಿ ಈ ಕ್ರಮಗಳು ಏನೇನೂ ಸಾಲವು. ಈ ವಿಧೇಯಕದ ವಿವಿಧ ಛೇದ, ಪರಿಛೇದಗಳ ಬಗ್ಗೆ ಚರ್ಚೆಗೆ ಇಳಿದು, ಅವುಗಳ ಬಗ್ಗೆ ಅನೇಕ ಅಭಿಪ್ರಾಯಗಳು ಅಭಿವ್ಯಕ್ತಿಸಲ್ಪಡುತ್ತವೆ ಎಂಬುದರ ಬಗ್ಗೆ ಎರಡು ಮಾತಿಲ್ಲ. ಅಲ್ಲಿಯ ಕೊರತೆ ನ್ಯೂನತೆಗಳನ್ನೆತ್ತಿ ತೋರಿಸಿ, ಕೆಲವು ತಿದ್ದುಪಡಿಗಳನ್ನು ಸೂಚಿಸಬಹುದು. ಆದರೆ ಈಗ ಈ ಘಟ್ಟದಲ್ಲಿ ಕೈಗೊಳ್ಳಲಾಗುವ ಒಟ್ಟಾರೆ ಕ್ರಮಗಳು ಮಾತ್ರ ಸಾಕಷ್ಟು ಇಲ್ಲ. ಮತ್ತು ಅವುಗಳಿಂದ ಸಮೀಪದ ಭವಿಷ್ಯತ್ತಿನ ಪರಿಸ್ಥಿತಿಯಲ್ಲಿ ಹೆಚ್ಚಿನ ಸುಧಾರಣೆ ಸಾಧ್ಯವಿಲ್ಲವೆಂದು ಹೇಳಬಯಸುತ್ತೇನೆ. ಇದು ನನ್ನ ಭಯ ಮತ್ತು ಆತಂಕವಾಗಿದೆ. ಮಾನ್ಯರೆ, ಇದು ಕೇವಲ ಕೆಲವು ನಿಯಮಗಳನ್ನು ರೂಪಿಸುವ ಅಥವಾ ನಿಬಂಧನೆಗಳನ್ನು ಹೇರುವ ಅಧಿಕಾರವನ್ನು ಹಸ್ತಗತ ಮಾಡಿಕೊಳ್ಳುವುದಕ್ಕೆ ಸಂಬಂಧಿಸಿದ ಪ್ರಶ್ನೆಯಲ್ಲ. ನಮ್ಮ ನಗರ-ಪಟ್ಟಣ ಪ್ರವೇಶಗಳನ್ನು ಪುನರ್‌ನಿರ್ಮಿಸುವ ಕುರಿತು ಸರಕಾರಕ್ಕೆ ಒಂದು ಸರಿಯಾದ ದೃಷ್ಟಿಕೋನ ಇರಬೇಕಾಗಿದೆ ಇದು ಅತ್ಯಂತ ಮಹತ್ವದ ಸಂಗತಿ. ಆದರೆ ಇದಕ್ಕೆ ಸಂಬಂಧಿಸಿದಂತೆ ಈ ವಿಧೇಯಕದಲ್ಲಿ ಯಾವುದೇ ಪ್ರಸ್ತಾಪವಿಲ್ಲ. ಗೃಹ ನಿರ್ಮಾಣದ ನಿಮ್ಮ ಯೋಜನೆ ಎಲ್ಲಿದೆ? ಜನ ಸಾಮಾನ್ಯರು ಪ್ರಾಣಿ - ಪಶುಗಳೊಂದಿಗೆ ಕೊಳೆಗೇರಿಗಳಲ್ಲಿಯ ಇಕ್ಕಟ್ಟಿನ ಸ್ಥಳಗಳಲ್ಲಿ ಜೀವಿಸುತ್ತಿದ್ದಾರೆ. ಅವರ ಬದುಕು ವಾಸ್ತವವಾಗಿ ಪ್ರಾಣಿಗಳಿಗೂ ಕನಿಷ್ಠತರವಾಗಿದೆ. ಅವರಿಗಾಗಿ ನಿಮ್ಮಲ್ಲೊಂದು ಕಾರ್ಯಕ್ರಮವೇನಾದರೂ ಇದೆಯೆ? ನನಗೆ ಗೊತ್ತಿದೆ ಕೆಲವು ಕೊಳೆಗೇರಿಗಳನ್ನು ಸ್ವಚ್ಛಗೊಳಿಸಿ ಅಲ್ಲಿರುವವರಿಗೆ ಚೂರು ಪಾರು ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಇದಕ್ಕಿಂತಲೂ ಹೆಚ್ಚು ನೀವು ಏನು ಮಾಡಲಾಗುವುದಿಲ್ಲ. ಆದರೆ ಈಗ ಬೇಕಾಗಿರುವುದೇನೆಂದರೆ ಸರಿಯಾದ ಗೊತ್ತು- ಗುರಿಗಳಿಂದ ಕೂಡಿದ ಒಂದು ವ್ಯಾಪಕ

ಸ್ವರೂಪದ 'ಗೃಹ ನಿರ್ಮಾಣ ಕಾರ್ಯಕ್ರಮ'. ಇದು ಈ ಕ್ಷಣ ಸರಕಾರದ ಮುಂದಿರಬೇಕಾದ ಕಾರ್ಯಕ್ರಮವಾಗಿದೆ. ಈ ವಿಧೇಯಕದ ಮೂಲಕ ಈ ಕಾರ್ಯಕ್ರಮವನ್ನು ಬಹು ಸರಳವಾಗಿ ಆರಂಭಿಸಬಹುದೆಂದು ನನ್ನ ವಿಚಾರ. ಇಲ್ಲಿ ದೆಹಲಿಯಲ್ಲಿ ನೀವೆಲ್ಲ ಇಲ್ಲೆಲ್ಲ ಅತ್ಯುತ್ತಮವಾದ ಮನೆಗಳಲ್ಲಿ ವಾಸಿಸುತ್ತೀರಿ. ನಮ್ಮ ಜನ ಸಾಮಾನ್ಯರು ವಾಸಿಸುವ ಮನೆಗಳಿಗೆ ಹೋಲಿಸಿದರೆ, ನಾವು ಇಲ್ಲಿ ವಾಸಿಸುವ ಮನೆಗಳು ಅತ್ಯುತ್ತಮವೇ. ಆದರೆ, ದೆಹಲಿಯ ಸುತ್ತಮುತ್ತ ಅತ್ಯಂತ ಭಯಂಕರವಾದ, ಅಷ್ಟೇ ಅಸಹ್ಯವಾದ ಪರಿಸ್ಥಿತಿಯಲ್ಲಿ ಬದುಕುತ್ತಿರುವ ಜನರ ಕಡೆಗೆ, ಅವರ ನಿರ್ಲಕ್ಷತೆ ಕೊಳಚಿ ಪ್ರದೇಶಗಳ ಕಡೆಗೆ ಸರ್ಕಾರ ಗಮನವೇಕೆ ಕೊಡಬಾರದು? ನಾವು ಒಂದು ಸಮುಚಿತವಾದ ಗೃಹ ನಿರ್ಮಾಣ ಯೋಜನೆಯನ್ನು ತಯಾರಿಸಿ ಅದರೊಂದಿಗೆ ಏಕೆ ಮುನ್ನಡೆಯಬಾರದು? ಇಂಥ ಸಾರ್ವಜನಿಕ ಮಹತ್ವದ ಕೆಲಸಕ್ಕೆ ಎಷ್ಟೇ ಖರ್ಚಾದರೂ ಪರವಾಗಿಲ್ಲ. ಈ ಕೊಳೆಗೇರಿಗಳ ಆಸೆ ಬುರುಕ ಮಾಲೀಕರುಗಳ ಮೇಲೆ ತತ್‌ಕ್ಷಣವೇ ಒತ್ತಾಯ ತಂದು, ಅವರು ಈ ಕೊಳೆಗೇರಿಗಳನ್ನು ಅಭಿವೃದ್ಧಿಪಡಿಸಿ, ಮಾನವ ನಿವಾಸಕ್ಕೆ ಯೋಗ್ಯಗೊಳಿಸುವಂತೆ ನಾವೇಕೆ ಕ್ರಮ ಕೈಗೊಳ್ಳಬಾರದು? ಜನತೆಗೆ ಉತ್ತಮವಾದ ಬದುಕಿನ ಅವಕಾಶ ಒದಗಿಸಿಕೊಡುವಂತೆ ಅವರನ್ನೇಕೆ ಕೇಳಬಾರದು? ಈಗ ಇಲ್ಲಿರುವ ಕೊಳೆಗೇರಿಗಳನ್ನೆಲ್ಲ ಎಷ್ಟರಮಟ್ಟಿಗೆ ಸುಧಾರಿಸುತ್ತೀರೋ ನನಗೆ ಗೊತ್ತಿಲ್ಲ.

ಕೆಲವು ನೀರಿನ ಪೈಪುಗಳನ್ನು ಹಾಕಿ ಈ ಪ್ರದೇಶಗಳಿಗೆ ನೀರಿನ ಪೂರೈಕೆ ಮಾಡಬಹುದು: ಇನ್ನೂ ಕೆಲವು ಜನರಿಗೆ ಇನ್ನಿತರ ಸೌಲಭ್ಯಗಳನ್ನು ಕಲ್ಪಿಸಿಕೊಡಬಹುದು: ಆದರೆ ಅನೇಕ ಕೊಳೆಗೇರಿಗಳು ಯಾವುದೇ ಸುಧಾರಣೆ, ರಿಪೇರಿ ಸಾಧ್ಯವಿಲ್ಲದ ಸ್ಥಿತಿಯಲ್ಲಿದೆ. ಆಧುನಿಕ ಮಾನದಂಡಗಳಿಂದ ಅಳೆಯುವುದಾದರೆ, ಇವು ಸುಧಾರಣಾತೀತವಾದ ದುಃಸ್ಥಿತಿಯಲ್ಲಿ ನರಳುತ್ತಿವೆ. ಆದ್ದರಿಂದ ಒಂದು ಗೃಹ ನಿರ್ಮಾಣ ಕಾರ್ಯಕ್ರಮವನ್ನು ರೂಪಿಸಿ ಜನ ಸಾಮಾನ್ಯರ ಆವಾಸಕ್ಕೆ ಚಿಕ್ಕ ಚಿಕ್ಕ ಮನೆಗಳನ್ನು ನಿರ್ಮಿಸಿ ಕೊಡಬೇಕಾದದ್ದು ಇಂದಿನ ಅವಶ್ಯಕತೆಯಾಗಿದೆ. ಕೊಳಚಿ ಪ್ರದೇಶಗಳಲ್ಲೆಲ್ಲ ಇಂತಹ ಶುಚಿಯಾದ ಚಿಕ್ಕ ಮನೆಗಳ ವಠಾರಗಳನ್ನು ಹೆಚ್ಚು ಹೆಚ್ಚಾಗಿ ನಿರ್ಮಿಸಬೇಕಾಗಿದೆ. ಆದರೆ ಈ ಕೆಲಸವನ್ನು ಖಾಸಗಿ ಮನೆಮಾಲೀಕರುಗಳಿಗೆ ಬಿಟ್ಟು ಕೊಡುವಂತಿಲ್ಲ. ಯಾಕೆಂದರೆ, ಅವರಿಗೆ ತಮ್ಮ ಲಾಭ ಮತ್ತು ಇತರ ಖಾಸಗಿ ಹಿತಾಸಕ್ತಿಗಳೇ ಮುಖ್ಯವಾಗುತ್ತವೆ ವಿನಃ ಜನಸಾಮಾನ್ಯರ ಏಳಿಗೆಯಲ್ಲ. ಲಾಭೋದ್ದೇಶವೇ ಅವರ ಏಕೈಕ ಮಾರ್ಗದರ್ಶಕವಾಗಿರುತ್ತದೆ. ಈ ಕಾರಣಕ್ಕಾಗಿ ಸರಕಾರ, ಮತ್ತು ಕೇವಲ ಸರಕಾರ, ಮಾತ್ರ ಈ ಕೆಲಸವನ್ನು ಕೈಗೆತ್ತಿಕೊಳ್ಳ ಬೇಕಾಗಿದೆ. ತನ್ನಲ್ಲಿರುವ ಸಂಪನ್ಮೂಲಗಳೆನ್ನೆಲ್ಲ ತೊಡಗಿಸಿ, ಈ ಯೋಜನೆಯನ್ನು ಕಾರ್ಯಗತಗೊಳಿಸಬೇಕಾಗಿದೆ. ಆದ್ದರಿಂದ, ಮಾನ್ಯ ಉಪಾಧ್ಯಕ್ಷರೆ, ಒಂದು ಸರಿಯಾದ ಗೃಹ ನಿರ್ಮಾಣ ಕಾರ್ಯಕ್ರಮ ರಚಿಸಿಕೊಳ್ಳಬೇಕಾದದ್ದು ಅತ್ಯಂತ ಮಹತ್ವದ ವಿಷಯವಾಗಿದೆ. ಆದರೆ ದೆಹಲಿಯಲ್ಲಿ ದೊಡ್ಡ ದೊಡ್ಡ ಅರಮನೆಗಳನ್ನು ಕಟ್ಟುತ್ತಿರುವುದನ್ನು ನೋಡುತ್ತಿದ್ದೇವೆ. ಅಶೋಕ ಹೋಟೆಲ್‌ಗಳ

ಮುಂತಾದ ಭವ್ಯ ಬಂಗಲೆಗಳು ಒಂದಾದ ನಂತರ ಮತ್ತೊಂದು, ಸರಕಾರ ಬಯಸಿದಾಗಲೆಲ್ಲ, ದಿಢೀರನೆ ತಲೆಯೆತ್ತುತ್ತವೆ. ಮೇಲಾಗಿ, ಸರಕಾರದಲ್ಲಿ ಇಂಥ ಬಯಕೆ ಮಾಡುವುದೇ ತಡ ಆದಕ್ಕೆ ಯಾವುದೇ ಹಣದ ಕೊರತೆ ಕಾಣಿಸುವುದಿಲ್ಲ: ಕಟ್ಟಡ ನಿರ್ಮಾಣಕ್ಕೆ ಬೇಕಾಗುವ ಸಾಮಾನ್ಯ ಸರಂಜಾಮುಗಳು ಹೇರಳವಾಗಿ ದೊರೆಯುತ್ತವೆ. ಆದರೆ ಜನಸಾಮಾನ್ಯರಿಗಾಗಿ ಚಿಕ್ಕ ಪುಟ್ಟ ಗುಡಿಸಲುಗಳನ್ನು ಕಟ್ಟಿಸಿಕೊಡುವ, ಕೆಳಹಂತದ ಸರಕಾರಿ ನೌಕರರಿಗೆ ಮನೆಗಳನ್ನು ರಚಿಸಿಕೊಡುವ ಪ್ರಶ್ನೆ ಎಂದಾಗಲೆಲ್ಲ ಸರಕಾರದ ಹೆಜ್ಜೆ ಸಾವಕಾಶವಾಗತೊಡಗುತ್ತದೆ. ಹಣಕಾಸಿನ ತೊಂದರೆ ಧುತ್ತೆಂದು ಎದುರಾಗುತ್ತದೆ. ಒಂದಿಲ್ಲೊಂದು ವಿವಿಧ ಅನೇಕ ನೆಪಗಳು ಮೇಲೆದ್ದು ಬರುತ್ತವೆ. ಇದು ಸರಕಾರಕ್ಕೆ ಶೋಭೆ ತರುವ ಸಂಗತಿಯಲ್ಲ. ಆದ್ದರಿಂದ ನಾನು ಹೇಳುವುದೇನೆಂದರೆ. ಈ ವಿಧೇಯಕದಡಿಯಲ್ಲಿ ಸಾಧ್ಯವಿರುವ ಏನೆಲ್ಲ ಕ್ರಮಗಳನ್ನು ಕೈಗೊಂಡು ಈ ಸಮಸ್ಯೆಗೆ ಕೂಡಲೇ ಪರಿಹಾರ ಕಂಡುಕೊಳ್ಳಬೇಕು. ಈ ದಾರಿಯಲ್ಲಿ ಅತ್ಯಂತ ಅವಶ್ಯಕವಾದುದೆಂದರೆ ಒಂದು ವ್ಯಾಪಕ ಸ್ವರೂಪದ ಗೃಹ ನಿರ್ಮಾಣ ಕಾರ್ಯಕ್ರಮ. ಈ ದಿಶೆಯಲ್ಲಿ ದ್ವಿತೀಯ ಪಂಚವಾರ್ಷಿಕ ಯೋಜನೆಯೂ ದಯನೀಯವಾಗಿ ಸೋತಿದೆ. ಮಾನ್ಯರೆ, ನಿಮಗೆ ಸ್ಪಷ್ಟವಾಗಿ ಗೊತ್ತಿದೆ - ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಔದ್ಯಮಿಕ ಕಾರ್ಮಿಕರಿಗಾಗಿ ನಗರ ಪ್ರದೇಶಗಳಲ್ಲಿ ಗೃಹ ನಿರ್ಮಾಣ ಮುಂತಾದ ಉದ್ದೇಶಗಳಿಗೊದಗಿಸಲಾಗಿದ್ದ ಹಣವನ್ನು ಖರ್ಚುಮಾಡಲಾಗಿಲ್ಲ. ಇದು ಎಷ್ಟು ದುಃಖದ ಸಂಗತಿಯೋ ಅಷ್ಟೇ ನಾಚಿಕೆಯ ವಿಷಯವಾಗಿದೆ. ಸರಕಾರ ಬೇರಾವದೋ ಕೆಲಸದಲ್ಲಿ ಮಗ್ನವಾಗಿತ್ತು. ವಿವಿಧ ಗೃಹ ನಿರ್ಮಾಣ ಯೋಜನೆಗಳಿಗೆ, ಔದ್ಯಮಿಕ ಕಾರ್ಮಿಕರಿಗೆ ಆವಾಸ ಹೆಚ್ಚಿಸುವ ಕಾರ್ಯಕ್ರಮಗಳಿಗೆ, ಮಂಜೂರಾಗಿದ್ದ ಹಣವನ್ನು ಖರ್ಚುಮಾಡಲು ಸರಕಾರಕ್ಕೆ ಸಮಯವಿರಲಿಲ್ಲ. ಇದು ದಾಖಲೆಗೊಂಡ ಸಂಗತಿ. ಇದನ್ನು ಸರಕಾರ ಅಲ್ಲಗಳೆಯುವಂತಿಲ್ಲ. ಆದ್ದರಿಂದ ಏನೆಲ್ಲಾ ಮಾಡಬೇಕಾಗಿತ್ತೋ ಅದನ್ನು ಮಾಡಿ ಮುಗಿಸದೇ ಇದ್ದುದರಿಂದ ಈಗ ಮಾಡಬೇಕಾದ ಕೆಲಸ ಬೇಕಾದಷ್ಟಿದೆ. ನಮಗೆ ಈಗ ಬೇಕಾದುದ್ದೆಂದರೆ, ಒಂದು ನಿರಂತರ ಪ್ರೇರಣೆ ಕೊಳಗೇರಿಗಳ ವಿರುದ್ಧ ಒಂದು ಅವ್ಯಾಹತವಾದ ಸಂಗ್ರಾಮ ಸಾರುವ ಮನಸ್ಸು. ಮೇಲಾಗಿ, ಹಿಂದೆಂದಿಗಿಂತಲೂ ತೀರಾ ಭಿನ್ನವಾದ ರೀತಿಯಲ್ಲಿ ನಾವದನ್ನು ಆರಂಭಿಸಬೇಕಿದೆ. ಕಾನ್ಪುರ ಮತ್ತು ಇತರೆಡೆಗಳಲ್ಲಿ ಮಾನ್ಯ ಪ್ರಧಾನ ಮಂತ್ರಿಗಳು ಮಾಡಿದ ಭಾಷಣಗಳನ್ನು ನೆನಪಿಸಿಕೊಂಡು ವಿಧೇಯಕದ ಮೇಲೆ ಕಣ್ಣಾಡಿಸಿ. ಅವರ ಘೋಷಣೆ ಮತ್ತು ಉದ್ದೇಶದ ಗುರಿಯ ನಡುವಿನ ವ್ಯತ್ಯಾಸ ಎದ್ದು ಕಾಣುತ್ತದೆ. ಆದ್ದರಿಂದಲೇ, ಈ ವಿಧೇಯಕವು ಈ ದೇಶದ ಪ್ರಧಾನ ಮಂತ್ರಿಗಳ ಘೋಷಣೆಗಳನ್ನು ಕಾರ್ಯಗತಗೊಳಿಸುತ್ತಿಲ್ಲ - ಎಂದು ನಾನು ಹೇಳಬಯಸುತ್ತೇನೆ ಮತ್ತು ಈ ದೃಷ್ಟಿಯಿಂದ ಅದು ತನ್ನ ವಿಫಲತೆಯನ್ನು ಮತ್ತೊಮ್ಮೆ ಹೊರಗೆಡುಹುತ್ತಿದೆ.

ಮಾನ್ಯ ಉಪಾಧ್ಯಕ್ಷರೆ, ಈ ವಿಧೇಯಕವನ್ನು ಪಾಸು ಮಾಡಬಹುದೆಂದು ನಾನು ಸೂಚಿಸುತ್ತೇನೆ. ಆದರೆ ಅದೇ ಕಾಲಕ್ಕೆ ಈ ವಿಷಯಕ್ಕೆ ಸಂಬಂಧಿಸಿದವರೊಂದಿಗೆ ಸರಕಾರ ಕೂಡಲೇ ಮಾತುಕತೆ ಆರಂಭಿಸಬೇಕೆಂದು ಹೇಳಬಯಸುತ್ತೇನೆ. ದೆಹಲಿಯಲ್ಲಿ ಗೃಹ ನಿರ್ಮಾಣದ ಈ ಯೋಜನೆಯೊಂದನ್ನು ರೂಪಿಸಲು - ನಮ್ಮ ಪ್ರಜಾತಾಂತ್ರಿಕ ವ್ಯವಸ್ಥೆಯ ರಾಜಧಾನಿಯಾಗಿರುವ ಮಹಾನಗರದಲ್ಲಿ ದುಡಿಯುತ್ತಿರುವ ಪ್ರತಿಯೊಬ್ಬನಿಗೂ ಒಂದು ಮನೆಯೊದಗಿಸಬಲ್ಲ ಒಂದು ಸುವಿಶಾಲ ಯೋಜನೆಯೊಂದನ್ನು ರೂಪಿಸಲು - ಸಂಬಂಧಪಟ್ಟವರ ಸಲಹೆ - ಸೂಚನೆ ಪಡೆಯಬೇಕು. ನಾವು ಇದನ್ನು ಮಾಡುತ್ತಿರುವುದು ವಿದೇಶೀಯರ ಕಣ್ಣಿಗೆ ಸುಂದರವಾದುದನ್ನು ಮಾತ್ರ ಪ್ರದರ್ಶಿಸಲು ಅಲ್ಲ. ಬದಲಾಗಿ, ನಮ್ಮ ಜನತೆಯ ಬಗ್ಗೆ ನಮಗೆ ಕಾಳಜಿ ಇದೆ. ಅವರ ಕುರಿತು ಚಿಂತಿಸಬೇಕಾದದ್ದು ನಮ್ಮ ಕರ್ತವ್ಯವಾಗಿದೆ. ನಮ್ಮ ಜನತೆಗೆ ಈವರೆಗೆ ನಿರಾಕರಿಸಲಾದದ್ದನ್ನು ಅವರಿಗೆ ದಕ್ಕುವಂತೆ ಮಾಡುವ ಉದ್ದೇಶದಿಂದ ನಾವಿದನ್ನು ಕೈಗೆತ್ತಿಕೊಳ್ಳಬೇಕಾಗಿದೆ. ನಮ್ಮ ಜನತೆಯ ಸ್ಥಿತಿ - ಗತಿಗಳನ್ನು ಸುಧಾರಿಸಿ ಅವರ ಬದುಕಿನ ಮಟ್ಟ ಎತ್ತರಿಸಬೇಕಿದೆ, ಈ ಉದ್ದೇಶಗಳಿಂದ ನಾವು ಕಾರ್ಯಪ್ರವೃತ್ತರಾಗಬೇಕಾಗಿದೆಯೇ ವಿನಃ, ವಿದೇಶಿ ದರ್ಶಕರ ಮನ ಮೆಚ್ಚಿಸಲು ಅಲ್ಲ. ಈ ವಿಷಯದಲ್ಲಿ ನಮ್ಮ ಸಂವಿಧಾನದ ನಿರ್ದೇಶಕರ ಸೂತ್ರಗಳು ನಮ್ಮ ಜನತೆಯ ಉಜ್ಜೀವನದ ಬಗ್ಗೆ ನಮಗಿರುವ ಕಾಳಜಿ ಇತ್ಯಾದಿಗಳೇ ನಮಗೆ ಮುಖ್ಯ ಮಾರ್ಗದರ್ಶಕಗಳಾಗಬೇಕು ಇದು ತುಂಬ ಮಹತ್ವದ ಸಂಗತಿ.

ಮಾನ್ಯ ಉಪಾಧ್ಯಕ್ಷರೆ, ಈ ಕಾರಣಕ್ಕಾಗಿಯೇ ನಾನು ಅರಮನೆಯಂತಹ ಭವ್ಯ ಬಂಗಲೆಗಳನ್ನು ನಿರ್ಮಿಸುವುದಕ್ಕೆ ಮಿತಿ ಹಾಕಬೇಕೆಂದು ಸೂಚಿಸಬಯಸುತ್ತೇನೆ. ಸರಕಾರದ ಉದ್ದೇಶಗಳಿಗೆ ಅವು ಅನಿವಾರ್ಯ ಎಂದಾದರೆ ಪರವಾಗಿಲ್ಲ. ಆದರೆ ಖಾಸಗಿ ಮಾಲೀಕರು ದೊಡ್ಡ ದೊಡ್ಡ ಕಟ್ಟಡಗಳನ್ನು ನಿರ್ಮಿಸಿ ಆಮೇಲೆ ಅವುಗಳನ್ನು ದುಬಾರಿ ಬಾಡಿಗೆಗೆ ಕೊಡುವುದನ್ನು ನಾನು ವಿರೋಧಿಸಬಯಸುತ್ತೇನೆ. ಅನೇಕ ಜನರು ಹಾದಿ - ಬೀದಿಗಳಲ್ಲಿ ಮಲಗುತ್ತಿರುವಾಗ, ಅಸಂಖ್ಯಾತ ಜನರು ಪ್ರಾಣಿ - ಪಶುಗಳೊಂದಿಗೆ ಕೊಳೆಗೇರಿಯ ಕೊಂಪೆಗಳಲ್ಲಿ ಜೀವನ ಸಾಗಿಸುತ್ತಿರುವಾಗ, ಸಹಸ್ರಾರು ಜನರು ತಲೆಯಮೇಲೊಂದು ಸೂರು ಇಲ್ಲದೆ ದುರ್ಭರ ಸ್ಥಿತಿಯಲ್ಲಿ ನರಳುತ್ತಿರುವಾಗ, ದೊಡ್ಡ ದೊಡ್ಡ ಬಂಗಲೆಗಳನ್ನು ಕಟ್ಟಲು ಪರವಾನಿಗೆ ಕೊಡುವ ಕಾಲ ಇದಲ್ಲ, ಕಟ್ಟಡ ನಿರ್ಮಾಣಕ್ಕೆ ಬೇಕಾಗುವ ಉಕ್ಕು-ಸಿಮೆಂಟು ಮುಂತಾದ ಸಾಮಾನು ಸರಂಜಾಮುಗಳು ಪರಿಮಿತವಾಗಿರುವ ಈ ಕಾಲದಲ್ಲಿ ಸಿರಿವಂತರ ಭವ್ಯ ಬಂಗಲೆಗಳು ಅವುಗಳನ್ನು ನುಂಗಿಹಾಕದಂತೆ ನಾವು ಎಚ್ಚರ ವಹಿಸಬೇಕಿದೆ. ಈ ಬಂಗಲೆಗಳು ಅವರ ತುರ್ತಿನ ಅವಶ್ಯಕತೆಗಳೇನಲ್ಲ, ಸಧ್ಯ ಅವಿಲ್ಲದೆಯೂ ಅವರು ಬದುಕಬಹುದು. ಕಟ್ಟಡ ನಿರ್ಮಾಣದ ಸರಕುಗಳಾದ ಕಬ್ಬಿಣ, ಸಿಮೆಂಟ್ ಇತ್ಯಾದಿ ಸಿರಿವಂತರ ಅರಮನೆಗಳ ರಚನೆಗೆ ಹರಿದು ಹೋಗದಂತೆ ಪ್ರತಿಬಂಧಿಸಬೇಕಾಗಿದೆ. ದೆಹಲಿ

ಭಾರತದ ರಾಜಧಾನಿಯಾಗಿದೆ. ಈ ರಾಜಧಾನಿಯಲ್ಲಿ ಒಂದೆಡೆ ಎದ್ದು ಕಾಣುತ್ತಿರುವ ಕೊಳೆಗೇರಿಗಳು ಅಲ್ಲಿಯ ಜನರ ಯಾತನಾಮಯ ಬದುಕು: ಇನ್ನೊಂದೆಡೆ ಅರಮನೆಯಂತಹ ಕಟ್ಟಡಗಳು - ಈ ವೈಷಮ್ಯ ನಮ್ಮ ರಾಜಧಾನಿಗೆ ಭೂಷಣಪ್ರಾಯವಲ್ಲ. ಈ ದೇಶದಲ್ಲಿ ದುಡಿಯುತ್ತಿರುವ ಪ್ರತಿಯೊಬ್ಬನಿಗೂ ಒಂದು ಮನೆ ದೊರಕುವವರೆಗೆ ಸಿರಿವಂತರ ಭಾರಿ ಭಾರಿ ಕಟ್ಟಡಗಳು ಮೇಲೇಳದಂತೆ ನಿರ್ಬಂಧಿಸಲು ಸಾಧ್ಯವಿಲ್ಲವೇ? ಪ್ರತಿಯೊಬ್ಬ ಪ್ರಜೆಯ ತಲೆಯಮೇಲೊಂದು ಸೂರು ದೊರಕುವವರೆಗೆ ಧನಿಕರ ಭಾರಿ ಬಂಗಲೆಗಳ ಆಕಾಂಕ್ಷೆ ಮುಂದೂಡಲು ಆಗುವುದಿಲ್ಲವೇ? ಇದು ನಿಮಗೂ ಶೋಭೆ ತರುವ ಸಂಗತಿಯಲ್ಲ ಒಬ್ಬ ಸಮುಚಿತ ದೃಷ್ಟಿಯ ವಿದೇಶೀಯನಿಗೆ ಈ ಕತೆ ಹೇಳಿದರೆ ಅವನಿಗೆ ಏನೆನ್ನಿಸುತ್ತದೆಯೋ ನನಗೆ ಗೊತ್ತಿಲ್ಲ. ಅಷ್ಟು ಸರಳವಾಗಿ ಆಲಕ್ಷಿಸಬಹುದಾದ ಕತೆ ಇದಲ್ಲ. ಯಾರು ಇದನ್ನು ನಿರ್ಲಕ್ಷಿಸಲಾರರು. ಇಂಗ್ಲೆಂಡಿನಲ್ಲಿ ಅನೇಕ ಸರಕಾರಗಳ ಅಡಿಯಲ್ಲಿ ಕಾರ್ಮಿಕ ವರ್ಗಕ್ಕೆ ಗೃಹ ನಿರ್ಮಾಣ ಮಾಡುವುದಕ್ಕೆ ಪ್ರಾಶಸ್ತ್ಯ ಕೊಡಲಾಗಿತ್ತು ಎಂಬುದು ನಿಮಗೆ ಗೊತ್ತಿದೆ. ಇತರ ದೇಶಗಳಲ್ಲಿಯೂ ಇದನ್ನೇ ಮಾಡಿದ್ದಾರೆ. ಆದರೆ ನಮ್ಮ ದೇಶದಲ್ಲಿ ಮಾತ್ರ ಸ್ಥಿತಿ ತೀರ ವ್ಯತಿರಿಕ್ತ, ಒಂದೆಡೆ ಗಗನ ಚುಂಬಿ ಕಟ್ಟಡಗಳು ಮೇಲೇಳುತ್ತಿರುವಂತೆಯೇ ಇನ್ನೊಂದೆಡೆ ಕೊಳೆಗೇರಿಗಳ ಕನಿಷ್ಠ ಬದುಕು ಇನ್ನು ಕಷ್ಟಕರವಾಗುತ್ತಾ ಪಾತಾಳ ತಲುಪುತ್ತದೆ. ಹತ್ತಾರು ವರ್ಷಗಳಿಂದ ಕೊಳಕು - ಕೊಂಪೆಗಳಲ್ಲಿಯೇ ಜೀವ ಹಿಡಿದುಕೊಂಡಿದ್ದವರು ಅದು ಹೇಗೋ ದಿನ ನೂಕ ತೊಡಗುತ್ತಾರೆ. ಇದು ಸರಕಾರಕ್ಕೆ ಕೀರ್ತಿ ತರುವ ದಾಖಲೆಯಲ್ಲ. ಆದ್ದರಿಂದಲೇ ಬಂಗಲೆಗಳ ನಿರ್ಮಾಣಕ್ಕೆ ಒಂದು ಪ್ರತಿಬಂಧಕ ಮಿತಿ ಹಾಕಬೇಕಾದದ್ದು ಸರಿ. ಈ ಮಾತನ್ನು ನಾನು ಹೇಳಲು ಕಾರಣವೆಂದರೆ ಬಡ ಜನತೆಗೆ ಮನೆ ನಿರ್ಮಿಸಿ ಕೊಡುವ ಪ್ರಶ್ನೆ ಬಂದಾಗಲೆಲ್ಲ ಸಿಮೆಂಟು, ಕಬ್ಬಿಣದ ಕೊರತೆ, ಹಣದ ಅಭಾವವೇ ಮುಂತಾದ ಸಬೂಬುಗಳ ಸರಮಾಲೆ ಹೆಣೆಯಲಾಗುತ್ತದೆ. ಸಿರಿವಂತರ ಕಟ್ಟಡಗಳ ನಿರ್ಮಾಣದ ಮೇಲೆ ನಿರ್ಬಂಧನೆ ಹೇರಿದರೆ ಅಲ್ಲಿ ಬಳಕೆಯಾಗಬಹುದಾಗಿದ್ದ ಎಲ್ಲಾ ಸಾಮಗ್ರಿಗಳೂ ಬಡವರ ಮನೆ ಕಟ್ಟಲು ಸುಲಭವಾಗಿ ದೊರೆಯುತ್ತವೆ.

ಇನ್ನು ಹಣಕಾಸಿನ ಬಗ್ಗೆ ಹೇಳುವುದಾದರೆ, ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಗೃಹ ನಿರ್ಮಾಣಕ್ಕೆ ನಿಗದಿ ಪಡಿಸಿದ ಮೊತ್ತ ಅತ್ಯಂತ ನಿಕೃಷ್ಟವಾಗಿದೆ. ಇದನ್ನು ಯಾಕೆ ಹೇಳುತ್ತಿದ್ದೇನೆಂದರೆ ಸಾಕಷ್ಟು ಮೊತ್ತದ ಹಣಕಾಸು ಒದಗಿಸಿದ ಹೊರತು ಗೃಹ ಮಂತ್ರಿಗಳು ಮನೆಗಳನ್ನು ನಿರ್ಮಿಸಲಾರರು. ಕಾಂಗ್ರೆಸ್ ಚುನಾವಣೆಗೆ ಎಷ್ಟು ಬೇಕಾದರೂ ಅಭ್ಯರ್ಥಿಗಳನ್ನು ಸೃಷ್ಟಿಸಬಲ್ಲರು. ಆದರೆ ಸಾಕಷ್ಟು ಮೊತ್ತದ ಹಣ, ಅವಶ್ಯಕವಾದ ಸಾಮಾನು-ಸರಂಜಾಮುಗಳನ್ನು ಒದಗಿಸಿದ ಹೊರತು, ಅಪೇಕ್ಷಿತ ಸಂಖ್ಯೆಯ ಗೃಹ ನಿರ್ಮಾಣ ಅಸಾಧ್ಯ, ಆದ್ದರಿಂದಲೇ ಅವರು ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಮನೆ ನಿರ್ಮಿಸಲು ಹೆಚ್ಚು ಹೆಚ್ಚು ಹಣಕಾಸಿನ ಬೇಡಿಕೆ ಮಂಡಿಸಿದರೆ, ನಾನು ಸದಾ ಅವರ ಬೆಂಬಲಕ್ಕೆ ನಿಲ್ಲುತ್ತೇನೆ.

ಸಾಧ್ಯವಾದಷ್ಟು ದೆಹಲಿಯಲ್ಲಿ ಗೃಹ ನಿರ್ಮಾಣಕ್ಕೆ ಸಂಬಂಧಿಸಿದ್ದವೇ-ಆದರೆ ದ್ವಿತೀಯ ಪಂಚವಾರ್ಷಿಕ ಯೋಜನೆ ಮತ್ತು ಇತರ ದಾಖಲೆಗಳಲ್ಲಿ ಈ ಕುರಿತು ಯಾವುದೇ ಪ್ರಸ್ತಾಪವಿಲ್ಲ. ಈ ದಿಶೆಯಲ್ಲಿ ಆಮೂಲಾಗ್ರ ಸುಧಾರಣೆ ಏನೂ ಒದಗಿಸಲಾಗಿಲ್ಲ. ಆದ್ದರಿಂದ ಯಾವುದೇ ವಾಸ್ತವ ಅರ್ಥವಲ್ಲಿ ದೆಹಲಿ ಮಹಾನಗರದ ಪುನರ್ ನಿರ್ಮಾಣ ಸಾಧ್ಯವೆಂದು ನನಗನಿಸುವುದಿಲ್ಲ. ಇಲ್ಲಿ ಒಂದಿಷ್ಟು ಸ್ಥಳಗಳು ಚೆಲುವುಗೊಳ್ಳಬಹುದು, ವಿದೇಶಿ ಪ್ರವಾಸಿಗನ ಎದುರು ಸಾದರಪಡಿಸಲು ಒಂದು ಹೊಸ ಅಭ್ಯುದಯಪರ ಭಾರತವನ್ನು ಸೃಜಿಸಬಹುದು. ಆದರೆ ಸರಕಾರ ತನ್ನ ಧೋರಣೆಯನ್ನು ಬದಲಿಸಿಕೊಳ್ಳದ ಹೊರತು ಇದಕ್ಕಿಂತಲೂ ಹೆಚ್ಚು ಏನೂ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಈ ದಿಶೆಯಲ್ಲಿ ಆಮೂಲಾಗ್ರ ಬದಲಾವಣೆ ಅವಶ್ಯಕವಾಗಿದೆ. ಈ ಕೊಳೆಗೇರಿಗಳನ್ನು ಶುಚಿಗೊಳಿಸದಿದ್ದರೆ, ಮನೆಗಳ ಮಾಲೀಕರು ಸರಕಾರದ ನಿರ್ದೇಶನಗಳನ್ನು ಜಾರಿಗೊಳಿಸುವಲ್ಲಿ ವಿಫಲವಾದರೆ ಏನಾಗುವುದು ಗೊತ್ತೇ? ನಾನು ಈ ಪ್ರಶ್ನೆಯನ್ನು ಮಾನ್ಯ ಮಂತ್ರಿಗಳಿಗೆ ಹಾಕಬಯಸುತ್ತೇನೆ. ವಿಫಲರಾದವರ ಮೇಲೆ ಎಲ್ಲಾ ವಿಧದ ದಂಡಗಳನ್ನು ನೀವೀಗ ಹಾಕುತ್ತೀರಿ. ಆದರೆ ನಿವಾಸಿಗಳ ಮೇಲೆ ಅದರಿಂದಾಗುವ ಪರಿಣಾಮವಾದರೂ ಏನು? ಆ ನತದೃಷ್ಟರ ಸ್ಥಿತಿಗತಿಯನ್ನು ಸುಧಾರಿಸುವವ ಯಾರು? ಅವರ ಸುಧಾರಣೆಗೆ ಬೇಕಾಗುವ ಹಣ ಪಡೆಯುವುದೆಂತು? ಎಷ್ಟು ಬೇಗನೆ ಈ ಸುಧಾರಣೆಗಳನ್ನು ಜಾರಿಗೊಳಿಸುವುದು ಸಾಧ್ಯ? ಮಾನ್ಯ ಮಂತ್ರಿಗಳು ಈ ಚರ್ಚೆಗೆ ಪ್ರತಿಯಾಗಿ ಮಾತಾಡುವಾಗ ಈ ಎಲ್ಲ ಪ್ರಶ್ನೆಗಳಿಗೆ ಉತ್ತರಿಸಬೇಕೆಂದು ನಾನು ಕೋರುತ್ತೇನೆ.

ಇದಲ್ಲದೆ ಇನ್ನೂ ಕೆಲವು ಪ್ರಶ್ನೆಗಳು ಉದ್ಭವಿಸುತ್ತವೆ. ಕೆಲವು ಕೊಳಚೆಗೇರಿಗಳನ್ನು ನಿರ್ಮೂಲನೆ ಮಾಡಿ ಶುಚಿಗೊಳಿಸಿದ್ದಿರಿ ಎಂದಿಟ್ಟುಕೊಳ್ಳಿ, ಆಗ ಅಲ್ಲಿಯ ನಿವಾಸಿಗಳು ಎಲ್ಲಿಗೆ ಹೋಗಬೇಕು: ಅವರೆಲ್ಲಿ ವಾಸಿಸಬೇಕು? ಇಂಥ ಜನರ ಆವಾಸಕ್ಕೆ ಸರಕಾರ ಪರ್ಯಾಯ ವ್ಯವಸ್ಥೆ ಮಾಡತಕ್ಕದ್ದು. ಇಂಥ ಪರ್ಯಾಯ ವ್ಯವಸ್ಥೆಗಳನ್ನು ರೂಪಿಸಲು ಯೋಜನೆಗಳೇನಾದರೂ ಇದೆಯೇ? ನನಗೆ ತಿಳಿದ ಮಟ್ಟಿಗೆ ಇಂಥ ಯೋಜನೆಗಳಿಲ್ಲ. ಮಾನ್ಯ ಉಪಾಧ್ಯಕ್ಷರೆ, ಕೊಳೆಗೇರಿಗಳ ನಿರ್ಮೂಲನೆಯ ಜೊತೆ ಜೊತೆಗೆ ಸರಕಾರ ಅಲ್ಲಿಯ ಜನತೆಯ ಆವಾಸಕ್ಕೆ ಪರ್ಯಾಯ ವ್ಯವಸ್ಥೆ ಮಾಡಬೇಕು. ಮತ್ತು ಇದು ನಿರಂತರವಾಗಿ ಹೆಚ್ಚುತ್ತಾ ಹೋಗಬೇಕು. ಇಲ್ಲದಿದ್ದರೆ ಕೊಳೆಗೇರಿಗಳಿಂದ ಸ್ಥಳಾಂತರಗೊಂಡ ಜನತೆ ತಲೆಯ ಮೇಲೊಂದು ಸೂರಿಲ್ಲದೆ ಕಂಗಾಲುತ್ತಾರೆ, ಮತ್ತು ಅಂತಿಮವಾಗಿ ಇಡೀ ಪ್ರಕ್ರಿಯೆ ಒಂದು ಬಿಕ್ಕಟ್ಟಿಗೆ ದಾರಿಮಾಡಿಕೊಟ್ಟು, ಆವಾಸದ ಸಂಕೀರ್ಣ ಸಮಸ್ಯೆಯನ್ನು ಸೃಷ್ಟಿಸುತ್ತದೆ. ಇದುವೇ ನನ್ನಲ್ಲಿ ಒಂದು ವಿಧದ ಭಯಾತೀತಕ್ಕೆ ಕಾರಣವಾಗಿದೆ. ಆದ್ದರಿಂದ ಸರಕಾರ ನಗರದ ಬಡಜನತೆಯ ಆವಾಸಕ್ಕೆ ನಿರ್ದಿಷ್ಟ ಪ್ರದೇಶಗಳನ್ನು ಗುರುತಿಸಿ, ಕೂಡಲೇ ಅವರಿಗಾಗಿ ಮನೆಗಳ ನಿರ್ಮಾಣಕ್ಕೆ ತೊಡಗಬೇಕೆಂದು ನನ್ನ ಸಲಹೆ. ಇದರ ಜೊತೆ ಜೊತೆಗೆ ಕೊಳಚೆಗೇರಿಗಳ ಖಾಸಗಿ ಮಾಲೀಕರು ಅವುಗಳನ್ನು ಸುಧಾರಿಸಿ ಒಂದು ನಿರ್ದಿಷ್ಟ ಮಟ್ಟಕ್ಕೆ

ತರುವಂತೆ ಸರಕಾರ ಅವರನ್ನು ಒತ್ತಾಯಿಸಬೇಕು. ಈ ಇಡೀ ಕೆಲಸದ ನಿರ್ವಹಣೆ ಆಗಬೇಕಾದ ರೀತಿ ಇದು. ಯಾಕೆಂದರೆ ಅಂತಿಮ ವಿಶ್ಲೇಷಣೆಯಲ್ಲಿ, ನಾವು ಈ ಸದ್ಯದ ಯೋಜನೆಯನ್ನು ಕೈಬಿಟ್ಟು ಹೊಸ ಯೋಜನೆಯೊಂದನ್ನು ರೂಪಿಸಿಕೊಳ್ಳಬೇಕು. ಅದರನ್ವಯ ಹೊಸ ಹೊಸ ಮನೆಗಳನ್ನು ನಿರ್ಮಿಸಿ ಅವುಗಳಲ್ಲಿ ಆಧುನಿಕ ಸಾಧನ ಸೌಲಭ್ಯಗಳನ್ನು ಕನಿಷ್ಠ ಮಟ್ಟದಲ್ಲಾದರೂ ದೊರೆಯುವಂತೆ ನೋಡಿಕೊಳ್ಳಬೇಕು. ಇದನ್ನು ಸರಕಾರ ಈ ರೀತಿಯಾಗಿಯೆ ಪರಿಭಾವಿಸಬೇಕು. ಇದಕ್ಕೆ ಸಂಬಂಧಿಸಿ ನಾನೊಂದು ಉದಾಹರಣೆ ಕೊಡಬಯಸುತ್ತೇನೆ.

ನಾನು, ಸಂಸತ್ ಸದಸ್ಯರಿಗೆ ದೆಹಲಿಯಲ್ಲಿ ಕೊಡಲಾಗಿರುವ ಬಂಗ್ಲೆಯೊಂದರಲ್ಲಿ ವಾಸಿಸುತ್ತಿದ್ದೇನೆಂಬುದು ಸರಿಯಷ್ಟೇ? ಒಂದು ದಿನ ಒಬ್ಬ ವ್ಯಕ್ತಿ ಬಂದು ನಾನಿರುವ ಬಂಗ್ಲೆಗೆ ರಿಪೇರಿ ಮಾಡುವುದಾಗಿ ಹೇಳಿದ - ಏನೋ ಒಂದು ತರಹದ, ಯಾವುದೋ ಒಂದು ರಿಪೇರಿ ನನ್ನ ಬಂಗ್ಲೆಯಲ್ಲಿ ಏನೂ ಕೆಟ್ಟಿಲ್ಲ -ನಾನೆಂದೆ ಅವನು ನೇರವಾಗಿ ಬಾತ್ ರೂಂಗೆ ಹೋಗಿ ಏನೋ ಪರೀಕ್ಷಿಸಿದಂತೆ ಮಾಡಿ, ಅಲ್ಲಿಯ ನೆಲದ ಹಾಸಿಗೆಯನ್ನು ತೆಗೆದು ಅದರ ಬದಲಾಗಿ ಮೊಜಾಯಿಕ್ ಹಾಸಿಗೆ ಹಾಕುವುದಾಗಿ ಹೇಳಿದ. ಅದು ಈಗಿರುವಂತೆಯೇ ತುಂಬಾ ಉತ್ತಮವಾದ ಬಾತ್ ರೂಂ, ಯಾರು ಬೇಕಾದರೂ ಅಲ್ಲಿ ಚೆನ್ನಾಗಿ ಸ್ನಾನ ಮಾಡಬಹುದು. ಆದರೆ ಸಂಸತ್ ಸದಸ್ಯರ ಬಾತ್ ರೂಂಗಳ ನೆಲ ಹಾಸಿಗೆ ತೆಗೆದು ಮೊಜಾಯಿಕ್ ಹಾಸಿಗೆ ಹಾಸುವಂತೆ ಈಗ ಆದೇಶವನ್ನು ಹೊರಡಿಸಲಾಗಿದೆ. ನಾನೆನ್ನುತ್ತೇನೆ ಅದರ ಅವಶ್ಯಕತೆ ಇಲ್ಲ. ಪಾರ್ಲಿಮೆಂಟ್ ಸದಸ್ಯರಾದ ನಾವು ಅಂತಹ ಸೌಲಭ್ಯಕ್ಕಾಗಿ ಇನ್ನು ಕೆಲವು ಕಾಲ ಕಾಯಬಹುದು. ಅಂದರೆ ನಗರದ ಬಡಜನತೆಗಾಗಿ ಸೂಕ್ತ ಕ್ರಮಗಳನ್ನು ಕೈಗೊಂಡು ಅವರ ಪ್ರಾಥಮಿಕ ಅವಶ್ಯಕತೆಗಳನ್ನು ಪೂರೈಸುವವರೆಗೆ ನಾವು ಕಾಯಬಹುದು. ಆದರೂ ಸಂಸತ್ ಸದಸ್ಯರ ಮನೆಗಳ ನವೀಕರಣಕ್ಕಾಗಿ, ನಿರುಪಯುಕ್ತ ಥಳ-ಥಳಕಿನ ನವೀಕರಣಕ್ಕಾಗಿ, ಈಗ ಹಣವನ್ನು ಹಾಳು ಮಾಡಲಾಗುತ್ತಿದೆ. ಇದೇ ಮಾತನ್ನು ಸರಕಾರದ ಉಳಿದವರ ಮನೆಗಳ ವಿಷಯದಲ್ಲಿಯೂ ಹೇಳಬಹುದು. ಆದರೆ ಅದೇ ಸಮಯದಲ್ಲಿ ನಗರದ ಬಡವರು ತಮ್ಮ ಕೊಳೆಗೇರಿಗಳ ಕೊಳಕು-ಕೊಂಪೆಗಳಲ್ಲಿ ನರಳುತ್ತಿದ್ದಾರೆ. ಅಪಾರ ಅಲಕ್ಷ್ಯ ಮತ್ತು ಅವರ್ಣನೀಯ ಸಂಕಟ ಅವರನ್ನು ಆವರಿಸಿಕೊಂಡಿದೆ. ರಾಜಧಾನಿಯಲ್ಲಿಯೇ ಇಂಥ ಘಟನೆಗಳು ಸಂಭವಿಸಲು ಅದು ಹೇಗೆ ಅವಕಾಶ ಮಾಡಿಕೊಡುತ್ತೀರೋ ನನಗೆ ತೋಚಲೊಲ್ಲದು. ಈ ವಿಶಿಷ್ಟ ಕತೆಯನ್ನು ವಿದೇಶಿಯನೊಬ್ಬನಿಗೆ ಹೇಳಿದರೆ ಅವನ ಅನಿಸಿಕೆ ಏನಾಗಿರಬಹುದು? ಈ ವಿಷಯದಲ್ಲಿ ಸರಕಾರದ ಸಾಧನೆ ಅವನನ್ನು ಮಂತ್ರಮುಗ್ಧನನ್ನಾಗಿ ಮಾಡುವುದು ಎನ್ನುವುದು ಖಚಿತ.

ಗೃಹ ನಿರ್ಮಾಣಕ್ಕೆ ಸಂಬಂಧಿಸಿದಂತೆ ಸರಕಾರ ಅನಾವಶ್ಯಕ ಖರ್ಚು ಮಾಡುತ್ತಿದೆ, ಮತ್ತು ಈ ಖರ್ಚು ಹೇರಳವಾಗಿಯೇ ಇದೆ. ಆದರೆ ಅವಶ್ಯಕ ಮನೆ ನಿರ್ಮಾಣದ

ಬಾಬತ್ತಿಗೆ ಪುಡಿಗಾಸೂ ಕೊಡುತ್ತಿಲ್ಲ: ಬದಲಾಗಿ ಇದರ ಬಗ್ಗೆ ನಿರ್ಲಕ್ಷ್ಯ ತೋರುತ್ತಿದೆ. ಇದನ್ನೇ ನಾನು ಹೇಳಬಯಸುತ್ತಿದ್ದೇನೆ. ಅಲ್ಲದೆ ನನ್ನ ಜವಾಬ್ದಾರಿಯ ಬಗ್ಗೆ ನಖ-ಶಿಖಾಂತವಾಗಿ ಎಚ್ಚರದಿಂದಲೆ ಈ ಆರೋಪವನ್ನು ನಾನು ಮಾಡುತ್ತಿದ್ದೇನೆ. ಈ ಆರೋಪ ಆಧಾರರಹಿತವೆಂದು ಅಥವಾ ಸುಳ್ಳು ಎಂದು ಯಾರಾದರು ಸಾಬೀತು ಪಡಿಸಿದರೆ ನಾನದನ್ನು ಸ್ವಸಂತೋಷದಿಂದ ಒಪ್ಪಿಕೊಳ್ಳುತ್ತೇನೆ. ದೆಹಲಿಯಲ್ಲಿ ಆವಾಸದ ಸಮಸ್ಯೆ ತುಂಬಾ ತೀವ್ರವಾಗಿದೆ ಮತ್ತು ಸರಕಾರ ಅದಕ್ಕೇನೂ ಗಮನ ಹರಿಸಿಲ್ಲವೆಂಬುದನ್ನು ದೆಹಲಿಯ ಪ್ರತಿಯೊಬ್ಬ ನಿವಾಸಿಯೂ ಚೆನ್ನಾಗಿ ಬಲ್ಲನು. ಸಿರಿವಂತರ ಮತ್ತು ಸಂಸತ್ ಸದಸ್ಯರ ಆವಾಸಕ್ಕೆ ಸರಕಾರ ಹೇಗೆ ಗಮನಕೊಡುತ್ತದೆಂಬುದು ನನಗೆ ಗೊತ್ತು - ಸಂಸತ್ ಸದಸ್ಯರನ್ನು ನಾನು ಸಿರಿವಂತರಲ್ಲಿ ಒಳಗೊಳ್ಳುವುದಿಲ್ಲ. ಸಂಸತ್ ಸದಸ್ಯರಿಗೆ ಒಳ್ಳೆಯ ಮನೆಗಳು ಬೇಕು - ಇದನ್ನು ನಾನು ಬಯಸುತ್ತೇನೆ, ಮತ್ತು ತಮಗೆ ಗೊತ್ತಿರುವಂತೆ, ನಾಲ್ಕು ವರ್ಷಗಳ ಹಿಂದೆ ಈ ವಿಷಯ ಚರ್ಚೆಗೆ ಬಂದಾಗ ನಮ್ಮಂಥ ಸಂಸತ್ ಸದಸ್ಯರಿಗೆ ಸಣ್ಣ ಫ್ಲ್ಯಾಟುಗಳು ಅಂದರೆ ಒಂದು ರೂಮಿನ ವಠಾರಗಳು ಸಾಕು ಎಂದು ನಾವು ಸಲಹೆ ಮಾಡಿದ್ದೆವು. ಅಲ್ಲದೆ ದೇಶ ಸೇವೆಗೆ ತಮ್ಮನ್ನು ತೊಡಗಿಸಿಕೊಂಡವರಿಗೂ ಇಂಥವೇ ಚಿಕ್ಕ ಮನೆಗಳು ಸಾಕಾಗುತ್ತವೆ ಎಂಬುದು ನನ್ನ ಭಾವನೆ. ಆದರೆ ನಮ್ಮ ಸಲಹೆ ಸಾಕಾರಗೊಳ್ಳಲಿಲ್ಲ; ಅದಕ್ಕೆ ವ್ಯತಿರಿಕ್ತವಾಗಿ ದೊಡ್ಡ ಬಂಗಲೆಗಳ ನಿರ್ಮಾಣಕಾರ್ಯ ಭರದಿಂದ ಸಾಗಿದೆ. ಸರಕಾರ ಈ ಪ್ರಶ್ನೆ ಕುರಿತು ವಿಶೇಷವಾಗಿ ಚಿಂತಿಸಬೇಕೆಂದು ನಾನು ಬಯಸುತ್ತೇನೆ. ಹೀಗೆ ಹೇಳುವ ಮೂಲಕ ಸಂಸತ್ ಸದಸ್ಯರಿಗೆ ಅನಾನುಕೂಲತೆಯುಂಟು ಮಾಡಬೇಕೆಂದು ನಾನು ಬಯಸುತ್ತಿಲ್ಲ. ಯಾಕೆಂದರೆ ಅವರು ನಿರ್ದಿಷ್ಟ ಜವಾಬ್ದಾರಿಗಳನ್ನು ಹೊತ್ತು, ಜನತೆಗಾಗಿ ಕೆಲವು ಕಾರ್ಯಗಳಲ್ಲಿ ತೊಡಗಿರುತ್ತಾರೆ. ಅದಕ್ಕಾಗಿ ಅವರ ಕೆಲಸ ಸುಸೂತ್ರವಾಗಿ ನಡೆಯಲು ಕೆಲವು ಸೌಲಭ್ಯ ಸೌಕರ್ಯಗಳು ಬೇಕೇ ಬೇಕು. ಅದಕ್ಕವರು ಅರ್ಹರೂ ಹೌದು. ಇಷ್ಟು ರಿಯಾಯಿತಿ ಕೊಡಲು ನಾನು ಸಿದ್ಧ. ಆದರೆ ಇದರಾಚೆಗೆ ಯಾವುದೇ ರಿಯಾಯಿತಿಗೆ ನನ್ನ ಸಮ್ಮತಿಯಿಲ್ಲ. ಸನ್ಮಾನ್ಯ ಮಂತ್ರಿಗಳ ಮಟ್ಟಿಗೆ ಹೇಳುವುದಾದರೆ ನನಗೇನೂ ತಿಳಿಯದು. ಆದರೆ ಮಾನ್ಯ ಸದಸ್ಯರೊಬ್ಬರು ಹೇಳಿದರು: ಸನ್ಮಾನ್ಯ ಮಂತ್ರಿಗಳು ದೊಡ್ಡ ದೊಡ್ಡ ಮನೆ ಇತ್ಯಾದಿಗಳಲ್ಲಿ ಇರಕೂಡದು.

(ಕಾಲದ ಗಂಟೆ ಬಾರಿಸುತ್ತದೆ)

ಈಗ ಇಲ್ಲಿಯೂ ಕೂಡ ನಿಮಗೆ ಗೊತ್ತಿದೆ ಒಂದೊಂದು ದೊಡ್ಡ ಅರಮನೆಗಳನ್ನು ಬೃಹತ್ ಬಂಗಲೆಗಳನ್ನು ಅವರಿಗೆ ಕೊಡಲಾಗುತ್ತದೆ ಎಂಬುದು. ಅವುಗಳೊಳಗೆ ಯಾರಿರುತ್ತಾರೆ ಎನ್ನುವುದು ಮುಖ್ಯವಲ್ಲ. ಎಷ್ಟು ಅತಿಥಿಗಳು ಅಲ್ಲಿ ವಾಸಿಸುತ್ತಾರೆ ಎಂಬುದನ್ನು ನೋಡಬೇಕು. ಇದು ಸಂಯಮದ ಸತ್ವಪರೀಕ್ಷೆ ಅಥವಾ ಸಾಮಾಜಿಕ ನ್ಯಾಯವಲ್ಲವೆಂದು ನನ್ನ ಅನಿಸಿಕೆ. ಏನೇ ಇದ್ದರೂ, ಒಂದೆಡೆ ಅಲಕ್ಷಿತ ಜನಕೋಟಿ ಆವಾಸದ ಕೊರತೆಯಿಂದ

ಪರದಾಡುತ್ತಿದ್ದಾರೆ, ಇನ್ನೊಂದೆಡೆ ಇಂಥ ಸಂಗತಿ ಘಟಿಸುತ್ತಿರುವುದು ಒಳ್ಳೆಯ ಮಾದರಿಯಲ್ಲ. ಹೀಗೆಂದ ಮಾತ್ರಕ್ಕೆ ಅವರೆಲ್ಲ ನಾವು ವಾಸಿಸುತ್ತಿರುವಂಥ ಮನೆಗಳಿಗೆ ಬರಬೇಕೆಂದು ನಾನು ಸೂಚಿಸುತ್ತಿಲ್ಲ. ನಾನು ಮಂತ್ರಿ ಏನಾದರೂ ಆಗಿದ್ದರೆ ನಿಸ್ಸಂಕೋಚವಾಗಿ ಈಗ ನಾನಿರುವ ಮನೆಯಲ್ಲಿಯೇ ಇರುತ್ತಿದ್ದೆ ಅದು ನನಗೆ ಮತ್ತು ನನ್ನಂಥ ಜನತೆಗೆ ಸುಖದಾಯಕವಾಗಿಯೇ ಇದೆ.

ಆದಾಗ್ಯೂ ನಿಮ್ಮ ಪರಿಗಣನೆಗಾಗಿ ನಾನೊಂದು ವಿಷಯವನ್ನು ಇಲ್ಲಿ ಮಂಡಿಸುತ್ತಿದ್ದೇನೆ. ನಾನು ಇದನ್ನೆಲ್ಲ ಹೇಳಲು ಕಾರಣವೇನೆಂದರೆ, ಎಲ್ಲವನ್ನು ಒಳಗೊಳ್ಳುವ ಸರ್ವಗ್ರಾಹಿಯಾದ, ಸಮಗ್ರವೂ ಆದ ಒಂದು ಯೋಜನೆಯನ್ನು ರೂಪಿಸಿಕೊಳ್ಳದ ಹೊರತು ಗೃಹ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯಾವುದೇ ಸುಧಾರಣೆ ಸಾಧ್ಯವಿಲ್ಲ - ಕೊನೆಯ ಪಕ್ಷ ನಾವೆಲ್ಲರೂ ಬಯಸುವ ವಿಧದ ಸುಧಾರಣೆಯಂತೂ ಸಾಧ್ಯವಿಲ್ಲ. ಈಗ ಇನ್ನುಳಿದ ಮನೆಗಳ ಬಗ್ಗೆ ಒಂದೆರಡು ಮಾತು. ಸರಕಾರ ಅಸ್ತಿತ್ವದಲ್ಲಿರುವ ಎಲ್ಲ ಮಹಲು ಹಾಗೂ ಖಾಸಗಿ ನಿವಾಸದ ಮನೆಗಳ ತಪಶೀಲು ಮಾಡಿ ಒಂದು ಪಟ್ಟಿಯನ್ನು ತಯಾರಿಸಿಕೊಂಡು ಅವುಗಳನ್ನು ವಿವಿಧ ಉದ್ದೇಶಗಳಿಗಾಗಿ ಬಳಸುವ ಕುರಿತು ಚಿಂತಿಸಬೇಕು. ಯುದ್ಧದ ಸಮಯದಲ್ಲಿ ಕಲ್ಕತ್ತಾದಲ್ಲಿ ಖಾಸಗಿ ಮನೆಗಳನ್ನು ಪಡೆದು ಸರಕಾರಿ ನೌಕರರಿಗೆ ಆಶ್ರಯ ಕಲ್ಪಿಸಿ ಕೊಡಲಾಗಿತ್ತೆಂಬುದು ನಮಗೆ ಗೊತ್ತಿದೆ. ಆದರೆ ಆಗ ಅನೇಕ ಖಾಸಗಿ ಮನೆ, ಮಹಡಿಗಳು ಅನಾವಶ್ಯಕವಾಗಿ ಖಾಲಿ ಬಿದ್ದಿವೆಯಾದರೆ ಸರಕಾರಕ್ಕೆ ಅಲ್ಲಿ ಆಶ್ರಯ ದೊರೆಯುತ್ತಿಲ್ಲ. ದೊಡ್ಡ ದೊಡ್ಡ ಬಂಗಲೆಗಳಲ್ಲಿ ಕೆಲವೇ ಜನ ವಾಸಿಸುತ್ತಿದ್ದಾರೆ. ಇದನ್ನು ನಾನು ಸಾಮಾಜಿಕ ಅನ್ಯಾಯದ ಪರಕಾಷ್ಠೆಯೆಂದು ಭಾವಿಸುತ್ತೇನೆ. ಸರಕಾರ ಈ ದಿಶೆಯಲ್ಲಿ ದಿಟ್ಟ ಹೆಜ್ಜೆಗಳನ್ನು ಇಟ್ಟು ಖಾಸಗಿ ಮನೆಗಳನ್ನು ಸ್ವಾಧೀನ ಪಡಿಸಿಕೊಂಡು ಆ ವಾಸಹೀನ ನೌಕರರಿಗೆ ಆಶ್ರಯ ಕಲ್ಪಿಸಿ ಕೊಡಬೇಕಾಗಿದೆ - ಇವೇ ನಾನು ಮಾಡಬಯಸಿದ ಸಲಹೆಗಳು. ಇನ್ನು ಕೊಳಚೆ ನಿರ್ಮೂಲನೆಗೆ ಸಂಬಂಧಿಸಿದಂತೆ ನಾನು ಮತ್ತೊಮ್ಮೆ ಒತ್ತಿ ಹೇಳಬಯಸುತ್ತೇನೆ, ನಮ್ಮ ಇಂದಿನ ಅವಶ್ಯಕತೆಯೆಂದರೆ ಅನತಿಕಾಲದಲ್ಲಿಯೇ, ಇಂದಿನ ಯಾವ ರಿಪೇರಿ ಮತ್ತು ಸುಧಾರಣೆಗೂ ಜಗ್ಗದೆ ನಿಂತಿರುವ, ಈ ಕೊಳೆಗೇರಿಗಳ ಸ್ಥಾನದಲ್ಲಿ ನವನವೀನ ಮನೆಗಳು ತಲೆಯೆತ್ತುವಂತೆ ಮಾಡಬಲ್ಲ ಒಂದು ವ್ಯಾಪಕ ಗೃಹ ನಿರ್ಮಾಣ ಕಾರ್ಯಕ್ರಮ ರೂಪಿಸಿ ಜಾರಿಗೊಳಿಸುವುದು. ಇದನ್ನು ಎಲ್ಲರೂ ಸ್ಪಷ್ಟವಾಗಿ ತಿಳಿದುಕೊಳ್ಳಬೇಕಾಗಿದೆ.

ಆದ್ದರಿಂದ ಸರಕಾರ ಇಂಥ ಯೋಜನೆಗಳ ನಿರ್ಮಾಣದೆಡೆಗೆ ತನ್ನ ಗಮನ ಹರಿಸಬೇಕೆಂದು ನಾನು ಸೂಚಿಸ ಬಯಸುತ್ತೇನೆ. ಗೃಹ ನಿರ್ಮಾಣದ ಸಮಸ್ಯೆಯನ್ನು ಸರಿಯಾಗಿ ಗ್ರಹಿಸಿ ಅದನ್ನು ನಮ್ಮ ತೆಕ್ಕೆಗೆ ತೆಗೆದುಕೊಳ್ಳಬೇಕಾಗಿದೆ. ಏತನ್ಮಧ್ಯೆ, ನಾವು ಈ ಕೊಳೆಗೇರಿಗಳ ವಿರುದ್ಧ ಯುದ್ಧ ಸಾರಬೇಕಾಗಿದೆ. ಆದರೆ ಆ ಯುದ್ಧಕ್ಕೆ ಒಂದು

ಮಾನವೀಯ ನೆಲೆಯಿರಬೇಕು. ಇಷ್ಟು ದಿನಗಳಿಂದ ಕೊಳಕು ಕೊಂಪೆಗಳ ಶೋಚನೀಯ ಬದುಕಿಗೆ ತಳ್ಳಲ್ಪಟ್ಟವರು, ಅದರಿಂದ ವಿಮುಕ್ತರಾಗಿ ಉತ್ತಮವಾದ ಮನೆಯಲ್ಲಿ ವಾಸಿಸುವಂತೆ ವ್ಯವಸ್ಥೆ ಮಾಡಬೇಕಾಗಿದೆ. ಈ ಕ್ರಿಯೆ ತುಂಬ ಚುರುಕಿನದಾಗಿರಬೇಕು. ಅಂದರೇನೇ ಅವರು ನಮ್ಮಂತೆ ಬದುಕಲು ಸಾಧ್ಯವಾಗಬಹುದು. ಕೊನೆಯ ಪಕ್ಷ ಆಧುನಿಕ ನಾಗರಿಕ ಬದುಕಿನ ಕನಿಷ್ಠ ಸೌಲಭ್ಯಗಳಾದರೂ ಅವರಿಗೆ ಎಟುಕುವಂತಾಗಬೇಕು.

## 2. ಅಣ್ವಸ್ತ್ರ ಪರೀಕ್ಷಣಾ ಆಸ್ಫೋಟಗಳ ಕುರಿತು ಜಾಗತಿಕ ಶಕ್ತಿ ರಾಷ್ಟ್ರಗಳ ಸಮ್ಮೇಳನ*

ಸನ್ಮಾನ್ಯ ಉಪಾಧ್ಯಕ್ಷರೆ, ಶ್ರೀ ಕೃಷ್ಣ ಮೆನನ್ ಅವರು ಸೂಚಿಸಿದ ತಿದ್ದುಪಡಿಯೊಂದಿಗೆ ನಾನು ಈ ಗೊತ್ತುವಳಿಯನ್ನು ಬೆಂಬಲಿಸುತ್ತೇನೆ. ಅಣ್ವಸ್ತ್ರ ಮತ್ತು ಹೈಡ್ರೋಜನ್ ಬಾಂಬ್‌ಗಳ ಪರೀಕ್ಷಣೆಯನ್ನು ತಡೆಗಟ್ಟುವ ಹಾಗೂ ಅಂತಿಮವಾಗಿ ಅವುಗಳ ನಿಷೇಧಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಇಡೀ ದೇಶದಲ್ಲಿ ಸಂಪೂರ್ಣ ಒಮ್ಮತವಿದೆ. ಆದ್ದರಿಂದ ಆ ವಿಷಯ ಕುರಿತು ನಾನಿಲ್ಲಿ ದೀರ್ಘ ಚರ್ಚೆಗೆ ತೊಡಗುವ ಅವಶ್ಯಕತೆಯಿಲ್ಲವೆಂದು ಭಾವಿಸುತ್ತೇನೆ. ಯಾಕೆಂದರೆ ದೇಶದ ಸಮಗ್ರ ಜನಸಾಮಾನ್ಯರಷ್ಟೇ ಅಲ್ಲ, ಸರಕಾರದಲ್ಲಿಯೂ ಸಹ ಇದೇ ತೆರವಾದ ಒಮ್ಮತವಿದೆ ಎಂಬುದು ನನ್ನ ಅಭಿಪ್ರಾಯ, ಹಾಗಾಗಿ, ಅವರೆಲ್ಲರೂ ಮುಂದಿಡುತ್ತಿರುವ ಏಕೈಕ ಬೇಡಿಕೆಯೆಂದರೆ ಇಂಥ ಪರೀಕ್ಷಣೆಗಳು ಅಮಾನತ್ತುಗೊಳ್ಳಬೇಕು ಮತ್ತು ಅಣ್ವಸ್ತ್ರ ಹಾಗೂ ಇತರ ರೂಪದ ಪರಮಾಣು ಅಸ್ತ್ರಗಳ ಉತ್ಪಾದನೆಯನ್ನು ನಿಷೇಧಿಸುವುದಕ್ಕೆ ಕ್ರಮ ಕೈಗೊಳ್ಳಬೇಕು.

ಈ ಚರ್ಚೆಯ ಸಂದರ್ಭದಲ್ಲಿ ನಾನು ಇನ್ನೊಂದು ವಿಷಯ ಸಾದರಪಡಿಸ ಬಯಸುತ್ತೇನೆ. ಸಧ್ಯದ ಸಂದರ್ಭದಲ್ಲಿ ಬಹುಶಃ ಒಂದಿಷ್ಟು ವಿವಾದವಾದ ವಿಷಯ ಇದಾಗಿದೆ. ಆದರೂ, ಮಾನ್ಯರೆ, ಈ ಸಂಗತಿಯನ್ನು ಇಲ್ಲಿ ಪ್ರಸ್ತಾಪಿಸುವುದು ಬಹಳ ಮಹತ್ವದ್ದಾಗಿದೆ. ಏಕೆಂದರೆ ಪ್ರಸಕ್ತ ಪರಿಸ್ಥಿತಿಯಲ್ಲಿ ಕೇವಲ ಈ ಪರೀಕ್ಷಣೆಗಳನ್ನು ಅಮಾನತ್ತುಗೊಳಿಸಿದರಷ್ಟೇ ಸಾಲದು. ಇದಕ್ಕೆ ಬದಲಾಗಿ, ಎಲ್ಲ ಅಣ್ವಸ್ತ್ರಗಳು ಪರಮಾಣು ಶಸ್ತ್ರಾಸ್ತ್ರಗಳು ನಿರ್ನಾಮವಾಗಬೇಕೆಂಬುದು ನಮ್ಮೆಲ್ಲರ ಬಯಕೆಯಾಗಿದೆ. ಮಾನವ ಕುಲಕೋಟಿಯ ತಲೆಯ ಮೇಲೆ ತೂಗುತ್ತಿರುವ ಮಹಾಭೀತಿ ತೊಲಗಿಸಿ ಎಲ್ಲರೂ ನೆಮ್ಮದಿಯ ಉಸಿರು ಬಿಡುವಂತಾಗಬೇಕೆಂಬುದು ನಮ್ಮ ಆಶಯವಾಗಿದೆ. ಇವು ಸರ್ವಮಾನ್ಯವಾದ ಸಾಮಾನ್ಯ ಬಯಕೆಗಳಾಗಿವೆ. ಇವುಗಳ ಬಗ್ಗೆ ಯಾರದೂ, ಕನಿಷ್ಠಪಕ್ಷ ನಮ್ಮ ದೇಶದಲ್ಲಾದರೂ ಭಿನ್ನಾಭಿಪ್ರಾಯವಿಲ್ಲ. ಇದು ಸಂತೋಷದ ಸಂಗತಿಯೇ. ಆದರೆ ನನ್ನ ಪ್ರಶ್ನೆಯೆಂದರೆ, ಈ ಬೇಡಿಕೆಗೆ ಅಪಾರ ಜನತೆಯ ಬೆಂಬಲವಿದ್ದರೂ ಈ ಅಣುಪರೀಕ್ಷಣೆಗಳು ಯಾಕೆ ಅಮಾನತ್ತುಗೊಳ್ಳುತ್ತಿಲ್ಲ ಎಂಬುದು?

ಇಷ್ಟು ವ್ಯಾಪಕ ಜನಾಭಿಪ್ರಾಯದ ಬೆಂಬಲವಿದ್ದೂ ಈ ಬೇಡಿಕೆ ಯಾಕೆ ಸಾಕಾರಗೊಳ್ಳುತಿಲ್ಲ? ಕಾಮನ್‌ವೆಲ್ತ್‌ನಲ್ಲಿರುವ ಒಂದು ಶಕ್ತಿರಾಷ್ಟ್ರ-ಭಾರತವು ಕೂಡ

* ಅಣ್ವಸ್ತ್ರ ಪರೀಕ್ಷಣಾ ಆಸ್ಫೋಟಗಳನ್ನು ತಡೆಯಲು ಸೂಕ್ತ ಕ್ರಮಗಳನ್ನು ಕೈಗೊಳ್ಳುವ ಕುರಿತು ಪರಿಶೀಲಿಸಲು ಜಾಗತಿಕ ಶಕ್ತಿ ರಾಷ್ಟ್ರಗಳ ಸಮ್ಮೇಳನವನ್ನು ಸಂಘಟಿಸುವುದಕ್ಕೆ ಸಂಬಂಧಿಸಿ ಮಂಡಿಸಲಾಗಿದ್ದ ಖಾಸಗಿ ಸದಸ್ಯರ ಗೊತ್ತುವಳಿ ಮೇಲಿನ ಚರ್ಚೆಯಿಂದ ಆಯ್ದುಕೊಂಡಿದ್ದು ರಾಜ್ಯಸಭೆ, 24 ಮೇ, 1957, ಪಿಸಿ 1490-97

ಕಾಮನ್‌ವೆಲ್ತ್‌ನ ಒಂದು ಭಾಗವಾಗಿಯೇ ಇದೆ-ಕಾಮನ್‌ವೆಲ್ತ್ ರಾಷ್ಟ್ರಗಳ ಅನೇಕ ಜನತೆಯ ಬಯಕೆಯನ್ನು ಧಿಕ್ಕರಿಸಿ ಇತ್ತೀಚಿಗೆ ಕ್ರಿಸ್‌ಮಸ್ ದ್ವೀಪಗಳ ಮೇಲೆ ಅಣುಪರೀಕ್ಷಣೆಗಳನ್ನು ಏಕೆ ನಡೆಯಿಸಿತು? ಕಾಮನ್‌ವೆಲ್ತ್ ಸರಕಾರದ ಒಂದು ಘಟಕವಾಗಿರುವ ಅದಕ್ಕೆ ಇದರಿಂದ ಯಾಕೆ ಮುಜುಗರವಾಗಿಲ್ಲ? ಅಣು ಮತ್ತು ಪರಮಾಣು ಶಸ್ತ್ರಾಸ್ತ್ರಗಳ ನಿಷೇಧದ ದಾರಿಯಲ್ಲಿರುವ ಅಡ್ಡಿ-ಅಡಚಣೆಗಳಾದರೂ ಯಾವುವು? ನಾವಿಂದು ಎದುರಿಸಬೇಕಾಗಿರುವ ಪ್ರಶ್ನೆಗಳು ಇವು. ಈ ಕುರಿತು ವಿಭಿನ್ನ ತಿಳಿಸುವಿಕೆ ಮತ್ತು ವಿಶ್ಲೇಷಣೆಗಳು ಅಸ್ತಿತ್ವದಲ್ಲಿವೆ ಎಂಬುದು ನನಗೆ ಗೊತ್ತಿದೆ. ಇಂಥ ವಿಷಯ ಕುರಿತು ವಿಭಿನ್ನ ದೃಷ್ಟಿ ಬಾರಿಗಳಿರುವುದೂ ಸಹಜ. ಇದೇನೇ ಇದ್ದರೂ ಈ ಸಮಸ್ಯೆಯನ್ನು ನಾವಿಂದು ಎದುರಿಸಬೇಕಾಗಿದೆ, ಅದರ ಆರಂಭ ಎಲ್ಲಿಯಾದರೂ ಒಂದು ಕಡೆ ಆಗಲೇ ಬೇಕು.

ಈ ಕುರಿತು ನಾವು ಮುಂದುವರಿಯುವ ಮುಂದೆ, ಅಣು ಮತ್ತು ಪರಮಾಣು ಶಸ್ತ್ರಾಸ್ತ್ರಗಳ ಭಯಂಕರ ವಿನಾಶಕ ಶಕ್ತಿ ಕುರಿತು ಪ್ರಾಯಶಃ ಒಂದೆರಡು ಮಾತು ಹೇಳುವುದು ಅವಶ್ಯಕವೆಂದು ಭಾವಿಸುತ್ತೇನೆ. ಇದನ್ನು ಕುರಿತು ನನ್ನದೇ ಮಾತನಾಡುವ ಬದಲು ಅಮೇರಿಕೆಯ ಸೈನ್ಯ ಸಂಶೋಧನಾ ಹಾಗೂ ಅಭಿವೃದ್ಧಿ ಇಲಾಖೆಯ ಮುಖ್ಯಸ್ಥರಲ್ಲೊಬ್ಬರಾಗಿರುವ ಶ್ರೀ ಗ್ಯಾವಿನ್ ಅವರು ಹೇಳಿದ್ದನ್ನು ಓದಬಯಸುತ್ತೇನೆ. ಅವರ ಪ್ರಕಾರ ಸಂಯುಕ್ತ ಸಂಸ್ಥಾಪನವು ತನ್ನ ಮೇಲೆ ದಾಳಿಯೆಸಗುವ ಯಾವುದೇ ರಾಷ್ಟ್ರದ ಮೇಲೆ ಪೂರ್ಣ ಪ್ರಮಾಣದ ಪರಮಾಣು ಆಕ್ರಮಣ ಆರಂಭಿಸಿದ್ದೇಯಾದರೆ ಕೋಟಿ ಕೋಟಿ ಜನ ಸಾವಿಗೀಡಾಗುವರು. ವಿಕಿರಣದಿಂದಾಗುವ ಭಯಾನಕ ಪರಿಣಾಮ ಅನಿರ್ವಚನೀಯ. ಈ ದಾಳಿಯ ಪರಿಣಾಮ ಶತ್ರು ರಾಷ್ಟ್ರದ ಗಡಿಗಷ್ಟೇ ಸೀಮಿತವಾಗಿರುವುದಿಲ್ಲ. ಆಧಾರತೆಯೂ ಅದರ ಕರಾಳ ಹಸ್ತ ಚಾಚಿಕೊಂಡು, ಮಿತ್ರ ರಾಷ್ಟ್ರಗಳಲ್ಲಿಯೂ ಸಾವು-ನೋವುಗಳು ಸಂಭವಿಸುವಂತೆ ಮಾಡುತ್ತದೆ. ಇದು ಈ ವಿಷಯ ಕುರಿತು ಅಮೇರಿಕೆಯ ತಜ್ಞನೊಬ್ಬ ಹೇಳಿದ ಮಾತು. ಇಂಗ್ಲೆಂಡಿನ ಖ್ಯಾತ ವಿಜ್ಞಾನಿಗಳಲ್ಲೊಬ್ಬರಾದ ಪ್ರೊ॥ ರಾಟ್‌ಬ್ಲ್ಯಾಟ್ ಹೇಳಿದಂತೆ, ಈಗಾಗಲೇ ನಡೆಸಿದ ಅಣುಪರೀಕ್ಷೆಗಳ ಪರಿಣಾಮವಾಗಿ ಸಾವಿರ ಸಾವಿರ ಜನ ಸಾವಿನ ಬಾಯಿಗೆ ನುಗ್ಗುತ್ತಿದ್ದಾರೆ. ಇನ್ನು ಮಿಲಿಯಾಂತರ ಜನ ಆ ದಾರಿಯಲ್ಲಿಯೇ ಹೆಜ್ಜೆ ಹಾಕುವ ಭಯವಿದೆ. ಕೆಲವು ಜನ ಇದನ್ನು ವೈಜ್ಞಾನಿಕ ಹೇಳಿಕೆಯೆಂದು ಬಗೆಯದೆ, ಒಂದು ಅಪಪ್ರಚಾರವೆಂದು ಬಗೆಯುತ್ತಿದ್ದಾರೆ. ಈ ಕುರಿತು ನಾನು ವಿವರವಾಗಿ ಹೇಳಬಯಸುವುದಿಲ್ಲ. ಯಾಕೆಂದರೆ ಅಣು ಮತ್ತು ಹೈಡ್ರೋಜನ್ ಬಾಂಬ್‌ಗಳನ್ನು ನಿರ್ಮಿಸಲು ಸಿದ್ಧತೆ ನಡೆಸಿ ಮಾನವ ಕುಲದ ಮಹಾ ಮಾರಣಹೋಮದ ಭೀತಿ ಬಿತ್ತುತ್ತಿರುವ ಪರಮಾಣು ಉನ್ಮಾದ ರೋಗಕ್ಕೆ ತುತ್ತಾಗಿರುವವರಿಗಿಂತಲೂ ಈ ವಿಷಯ ಕುರಿತು ಸಮರ್ಥವಾಗಿ ಮಾತನಾಡುವ ಶಕ್ತಿ ವಿಜ್ಞಾನಿಗಳಿಗಿದೆಯೆಂಬುದೇ ನನ್ನ ಅಭಿಪ್ರಾಯ. ಪರಮಾಣು ಉನ್ಮಾದ ರೋಗಿಗಳು ಭೀತಿ ಬಿತ್ತುತ್ತಿರುವ ಪ್ರಳಯಾಂತಕರು ಎಂದಾಗ ನನ್ನ ಮನಸ್ಸಿನಲ್ಲಿ ಸಾಮ್ರಾಜ್ಯಶಾಹಿ ಶಕ್ತಿಗಳಾದ

ಬ್ರಿಟನ್ ಮತ್ತು ಯು.ಎಸ್.ಎ ಗಳಿವೆ ಎಂದು ಸ್ಪಷ್ಟವಾಗಿ ಹೇಳಬಯಸುತ್ತೇನೆ. ಇದು ಈಗಿರುವ ಸ್ಥಿತಿ ಹಾಗೂ ವಿಕಿರಣವೆಂಬುದು ನಮ್ಮೆಲ್ಲರ ಮೇಲೂ ಪರಿಣಾಮ ಬೀರಬಲ್ಲ ಒಂದು ಸತ್ಯ ಸಂಗತಿ. ಜಗತ್ತಿನ ಈ ಭಾಗದಲ್ಲಿರುವ, ವಿಶೇಷವಾಗಿ ನಾವು ಈ ದುಷ್ಪರಿಣಾಮಕ್ಕೆ ಗುರಿಯಾಗುತ್ತಿದ್ದೇವೆ. ಯಾಕೆಂದರೆ ಈ ಪರೀಕ್ಷಣೆಗಳು ನಡೆಯುತ್ತಿರುವುದು ಶಾಂತಿಮಹಾ ಸಾಗರದಲ್ಲಿ ಕಾರಣವಾಗಿ, ಪಾಶ್ಚಿಮಾತ್ಯ ರಾಷ್ಟ್ರಗಳು ಮತ್ತು ಅಲ್ಲಿಯ ಜನತೆಗಳಿಗಿಂತಲೂ ಹೆಚ್ಚಾಗಿ ಈ ಪರೀಕ್ಷಣೆಗಳು ಭಯಾನಕ ಪರಿಣಾಮ ಮತ್ತು ಅದರಿಂದುದ್ಭವಿಸುವ ವಿಕಿರಣದ ದುಷ್ಪ್ರಭಾವ ನಮ್ಮ ಮೇಲೆಯೆ ಹೆಚ್ಚಾಗಿ ಆಗುತ್ತದೆ. ಅದ್ದರಿಂದ ಸಹಜವಾಗಿಯೇ ನಮಗೆ ಆ ಕುರಿತು ಹೆಚ್ಚಿನ ಕಾಳಜಿ ಇದೆ. ನಮಗಿಂತಲೂ ಹೆಚ್ಚು ಜಪಾನೀಯರಿಗಿದೆ. ಇಡೀ ಜಪಾನಿನ ಜನಮನದಲ್ಲಿ ಕ್ಷೋಭೆಯೆಬ್ಬಿಸಿರುವ ಈ ವಿಷಯ ಕುರಿತು ನಾವಿಂದು ಚರ್ಚಿಸುತ್ತಿರುವಾಗ ಜಪಾನಿನ ಪ್ರಧಾನ ಮಂತ್ರಿಗಳು ನಮ್ಮ ಅತಿಥಿಗಳಾಗಿ ನಮ್ಮ ಮಧ್ಯದಲ್ಲಿರುವುದು ಅತ್ಯಂತ ಸಂತೋಷದ ವಿಷಯವಾಗಿದೆ. ಇಂದು ಜಪಾನಿನ ಇಡೀ ಜನತೆ ಹಾಗೂ ಅವರ ಸರಕಾರ ಪರಮಾಣು ಪರೀಕ್ಷಣೆಗಳನ್ನು ನಿಲ್ಲಿಸಬೇಕೆಂದು ಒಕ್ಕೊರಲಿನಿಂದ ಕೂಗುತ್ತಿವೆ. ನಾಳೆ ಪತ್ರಿಕೆಗಳನ್ನು ನೋಡಿದೊಡನೆಯೆ ನಮ್ಮ ಸಂಪತ್ತು ಜಪಾನಿನ ಮಹಾಜನತೆಯ ಅಭಿಪ್ರಾಯಗಳನ್ನು ಸಂಪೂರ್ಣವಾಗಿ ಬೆಂಬಲಿಸುತ್ತಿರುವುದು ಅವರ ಗಮನಕ್ಕೆ ಬರುತ್ತದೆ. ಎಲ್ಲ ಪರೀಕ್ಷಣೆಗಳನ್ನು ಕೂಡಲೇ ಅಮಾನತ್ತುಗೊಳಿಸಿ ಅಣ್ವಸ್ತ್ರಗಳನ್ನು ಸಂಪೂರ್ಣವಾಗಿ ನಿಷೇಧಿಸಬೇಕೆಂಬ ಅವರ ಬೇಡಿಕೆಯೊಂದಿಗೆ ನಾವು ದನಿಗೂಡಿಸುತ್ತಿರುವುದು ಅವರಿಗೆ ಹರ್ಷ ಉಂಟು ಮಾಡದೇ ಇರದು. ವಿದೇಶೀಯರೊಬ್ಬರಿಗೆ ನಾವು ನೀಡಬಹುದಾದ ಅತ್ಯಂತ ಸೂಕ್ತವಾದ ಉಪಚಾರ ಇದೆಂದು ನನ್ನ ಭಾವನೆ. ಇದು ಸಂದರ್ಭೋಚಿತವಾದ ಸತ್ಕ್ರಿಯೆ. ಮಾನ್ಯಶ್ರೀ ಗೋವಿಂದರೆಡ್ಡಿ ಅವರ ಪ್ರಯತ್ನದ ಫಲವಾಗಿ ನಾವಿಂದು, ಜಪಾನಿನ ಅತಿಥಿಗಳು ಈ ಮಹಾನಗರದಲ್ಲಿ - ಈ ದೇಶದಲ್ಲಿರುವಾಗಲೇ, ಇಂದು ಈ ಗೊತ್ತುವಳಿಯ ರೂಪದಲ್ಲಿ ಈ ಅತಿಥಿಗಳಿಗೆ ಸತ್ಕಾರ ಮಾಡುವ ಪ್ರಯೋಗ ದೊರಕಿದ್ದುದು ತುಂಬಾ ಸಂತೋಷದ ಸಂಗತಿ.

ಮಾನ್ಯ ಉಪಾಧ್ಯಕ್ಷರೆ, ಇಂಥ ಪರೀಕ್ಷಣೆಗಳಲ್ಲಿ ಎಲ್ಲಾ ಶಕ್ತಿ ರಾಷ್ಟ್ರಗಳು ಅವುಗಳಿಗೆ ಮಂಗಳ ಹಾಡಬೇಕೆಂದು ಬಯಸುವ ನಮ್ಮೆಲ್ಲರ ಭಾವನೆ ಮತ್ತು ಅನಿಸಿಕೆಗಳ ಸ್ವರೂಪವನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ, ಇಲ್ಲಿ ಯಾವುದೇ ತಾರತಮ್ಯಕ್ಕೆ ಅವಕಾಶ ವಿರಬಾರದು ಮತ್ತು ಈ ರೀತಿಯ ಬೇಡಿಕೆಯನ್ನು ಮಂಡಿಸುವುದರಲ್ಲಿ ಇಡೀ ಮಾನವ ಕುಲದ ಬಗ್ಗೆ, ಅದು ಕಟ್ಟಿ ಬೆಳೆಸಿದ ನಾಗರೀಕತೆಯ ಬಗ್ಗೆ ಉದಾತ್ತವಾದ ಸದ್ಭಾವನೆಗಳೇ ತುಂಬಿವೆಯೆನ್ನುವುದರ ಬಗ್ಗೆ ನನಗೆ ಎಳ್ಳಷ್ಟು ಸಂಶಯವಿಲ್ಲ. ಆದ್ದರಿಂದ ಈ ವಿಷಯ ಕುರಿತು ಯಾವುದೇ ವಾದ ವಿವಾದಕ್ಕೆ ಇಲ್ಲಿ ಆಸ್ಪದವಿಲ್ಲ. ಸೋವಿಯತ್ ಯೂನಿಯನ್, ಅಮೇರಿಕಾ ಮತ್ತು ಬ್ರಿಟನ್‌ಗಳು ಇಂಥ ಪರೀಕ್ಷಣೆಗಳನ್ನು ನಡೆಸುತ್ತಿವೆಯೆಂದು ನಾವು

ಬೆರಳಿಟ್ಟು ಹೇಳಿದಾಗ ಕೇವಲ ಸತ್ಯವನ್ನು ಮಾತ್ರ ಹೇಳುತ್ತಿದ್ದೇವೆ. ಅದು ದುರ್ದಮ್ಯವಾದ ಸತ್ಯ. ಎಲ್ಲಾ ಪರೀಕ್ಷಣೆಗಳು ನಿಲ್ಲಬೇಕು ಇದು ನನ್ನ ದೃಢವಾದ ಬಯಕೆ. ವಾಸ್ತವವೆಂದರೆ, ಜಾಗತಿಕ ಶಾಂತಿ ಪರಿಷತ್ತಿನ ಬರ್ಲಿನ್‌ಬ್ಯೂರೋದ ಘೋಷಣೆಗೆ ನಾವು ಸಹಿ ಹಾಕಿದ್ದೇವೆ. ಆ ಘೋಷಣೆ ಹೀಗೆ ಹೇಳುತ್ತದೆ. " ಸಂಯುಕ್ತ ಸಂಸ್ಥಾನಗಳು ಮತ್ತು ಸೋವಿಯತ್ ನಾಡು ಅಣುಬಾಂಬ್ ಪರೀಕ್ಷಣೆಗಳನ್ನು ಮುಂದುವರಿಸುತ್ತಿವೆ: ಗ್ರೇಟ್ ಬ್ರಿಟನ್ ಅವುಗಳೊಂದಿಗೆ ಕೂಡಿಕೊಳ್ಳುತ್ತಿದೆ ಈ ಪರೀಕ್ಷಣೆಗಳು ಕೂಡಲೇ ನಿಲ್ಲಬೇಕೆಂಬುದು ನಮ್ಮ ಬೇಡಿಕೆಯಾಗಿದೆ, ಅಲ್ಲದೇ ಈ ಕೂಡಲೇ ಶಾಂತಿ ಸಂಸ್ಥಾಪಿತವಾಗಬೇಕೆಂಬುದು ನಮ್ಮ ಬೇಡಿಕೆ" ಗೊತ್ತುವಳಿಯನ್ನು ಮಂಡಿಸಿದವರು. ಇದು ಜಾಗತಿಕ ಶಾಂತಿ ಪರಿಷತ್ತಿನ ಬ್ಯೂರೋದ ಮನವಿ ಮತ್ತು ಈ ಮನವಿ ಜಗತ್ತಿನಾದ್ಯಂತ ಶಾಂತಿಪ್ರಿಯ ಜನತೆಯ ಬೇಡಿಕೆಯಾಗಿದೆ. ಈ ವಿಪತ್ತನ್ನು ಬಡಿದೋಡಿಸಲು ಅವಶ್ಯವಿರುವ ವಿಶಾಲ ಜನಾಭಿಪ್ರಾಯವನ್ನು ರೂಪಿಸುವಲ್ಲಿ ನಾವು ಕೂಡ ನಮ್ಮ ಪಾತ್ರವನ್ನು ನಿರ್ವಹಿಸಲು ಪ್ರಯತ್ನಿಸುತ್ತಿದ್ದೇವೆ.

ಆದರೆ, ಈ ಸಮಸ್ಯೆ ನಾವು ತಿಳಿದುಕೊಂಡಷ್ಟು ಸರಳವಾಗಿಲ್ಲ, ಅದು ತುಂಬಾ ಸಂಕೀರ್ಣತೆಯಿಂದ ಕೂಡಿದೆ. ಪರೀಕ್ಷಣೆಗಳನ್ನು ನಡೆಸುತ್ತಿರುವ ಮೂರು ಶಕ್ತಿ ರಾಷ್ಟ್ರಗಳನ್ನು ಹೆಸರಿಸಿದರಷ್ಟೇ ಸಾಲದು, ಈ ಪರೀಕ್ಷೆಗಳನ್ನು ತಡೆಯುವುದಕ್ಕೆ ಅವುಗಳ ಉತ್ಪಾದನೆಗಳನ್ನು ನಿಷೇಧಿಸುವುದಕ್ಕೆ ನಾವು ಮಾಡುವ ಪ್ರಯತ್ನದ ದಾರಿಯಲ್ಲಿರುವ ಅಡ್ಡಿ-ಆಡಚಣೆಗಳಾವುವೆಂಬುದನ್ನು ನಾವು ನಮ್ಮ ಜನತೆಗೆ ನಿರ್ಭಯವಾಗಿ ತಿಳಿಸಿಕೊಡಬೇಕಾಗಿದೆ. ಅಣು-ಪರಮಾಣು ಶಸ್ತ್ರಾಸ್ತ್ರಗಳ ಪೈಪೋಟಿಯ ಹಿಂದಿನ ಸಂಚನ್ನು ನಿರ್ಭಿಡೆಯಿಂದ ಬಯಲು ಮಾಡಬೇಕಿದೆ. ಇಲ್ಲಿಯೇ ನನ್ನ ಕೆಲವು ವಿರೋಧಿ ಮಿತ್ರರ ನಿಲುವಿನೊಂದಿಗೆ ನಾನು ವಾದಕ್ಕಿಳಿಯಬಯಸುತ್ತೇನೆ. ಅಣು-ಪರಮಾಣು ಪರೀಕ್ಷಣೆಗಳ ತಡೆಯುವಿಕೆಯ ಪ್ರಶ್ನೆಗೆ ಸಂಬಂಧಿಸಿದಂತೆ ಅವರು ಈ ಮೇಲಿನ ಮೂರು ಶಕ್ತಿ ರಾಷ್ಟ್ರಗಳನ್ನು ಒಂದೇ ಬುಟ್ಟಿಯಲ್ಲಿ ತುಂಬಲೆಳಸುತ್ತಾರೆ. ಆದರೆ ಒಂದೆಡೆ ಅಮೇರಿಕಾ ಮತ್ತು ಬ್ರಿಟನ್‌ಗಳಿದ್ದರೆ, ಇನ್ನೊಂದೆಡೆ ಸೋವಿಯತ್ ನಾಡಿದೆ. ಅವರು ಅವುಗಳನ್ನು ಎರಡು ಶಕ್ತಿ ಗಣಗಳೆಂದು ಕರೆಯುತ್ತಾರೆ. ಇದು ಈಗಿರುವ ಸ್ಥಿತಿ. ಇದು ಅತ್ಯಂತ ಮಹತ್ವದ್ದೂ ಕೂಡ - ಒಂದೆಡೆ ಸೋವಿಯತ್ ಯೂನಿಯನ್, ಇನ್ನೊಂದೆಡೆ ಅಮೇರಿಕಾ ಮತ್ತು ಗ್ರೇಟ್ ಬ್ರಿಟನ್. ಈ ಮತಿಯಿಂದ ಪರಿಭಾವಿಸುವುದು ತುಂಬ ಅವಶ್ಯಕವಿದೆ. ಯಾಕೆಂದರೆ, ಈ ಕುರಿತಿರುವ ನಮ್ಮ ಭಾವನೆಗಳನ್ನು ಸರಿಯಾದ ರೀತಿಯಲ್ಲಿ ಮುಕ್ತಗೊಳಿಸಿ ನಿರ್ದಿಷ್ಟ ಧೋರಣೆಗಳನ್ನು ತಳೆದು, ನಮ್ಮೆಲ್ಲರಿಗೂ ಸಾಮಾನ್ಯವಾಗಿರುವ ನಾವೆಲ್ಲರೂ ಪ್ರತಿನಿಧಿಸುವ, ಗುರಿಗಳನ್ನು ಸಾಧಿಸುವ ದೃಷ್ಟಿಯಿಂದ ಈ ನೆಲೆ, ಈ ನಿಲುವು ಮುಖ್ಯವಾದದ್ದು.

1945 ರಲ್ಲಿ ಹಿರೋಷಿಮ ಮತ್ತು ನಾಗಸಾಕಿಗಳ ಮೇಲೆ ಅಣುಬಾಂಬ್ ಆಸ್ಫೋಟಿಸುವ ಮತಿಹೀನ ದುಷ್ಕೃತ್ಯಗೈದದ್ದು ಅಮೇರಿಕಾ ದೇಶವೇ ಎಂಬುದನ್ನು ಒತ್ತಿ ಹೇಳಲಾಗಿದೆ. ಮೇಲಾಗಿ ಫ್ಯಾಸಿಸ್ಟ್ ದುಷ್ಟ ಶಕ್ತಿಯನ್ನು ಸದೆಬಡೆದು ವಿಜಯದುಂದುಭಿ ಬಾರಿಸಲು ಅದು ಅವಶ್ಯಕವಾಗಿತ್ತೆಂದು ಹೇಳಿ ಅದನ್ನು ಸಮರ್ಥಿಸಿಯೂ ಕೊಳ್ಳಲಾಗಿದೆ. ಆದರೆ ಫ್ಯಾಸಿಸ್ಟ್ ಶಕ್ತಿಯನ್ನು ಸೋಲಿಸಿ ಯುದ್ದ ಗೆಲ್ಲಲು ಅಂಥ ನಿರ್ನಾಮಕಾರಿ ಅಸ್ತ್ರಗಳನ್ನು ಪ್ರಯೋಗಿಸುವ ಅವಶ್ಯಕತೆಯಿರಲಿಲ್ಲವೆಂಬುದು ಈಗ ಚರಿತ್ರೆಯಲ್ಲಿ ಸ್ಥಾಯಿಗೊಂಡಿರುವ ಸಂಗತಿಯಾಗಿದೆ. ಫ್ಯಾಸಿಸ್ಟ್ ಜಪಾನನ್ನು ಬಗ್ಗು ಬಡಿದು ಸೊಲ್ಲು ಅಡಗಿಸಲು ಇಂಥ ಭಯೋತ್ಪಾದನೆ, ಮಹಾ ಮರಣಹೋಮ ಮತ್ತು ಅಮಾನವೀಯ ಅಣ್ವಸ್ತ್ರಗಳ ಬಳಕೆ ಬೇಕಾಗಿರಲಿಲ್ಲವೆಂಬುದು ಅವರಿಗೂ ಚೆನ್ನಾಗಿ ಗೊತ್ತಿತ್ತು. ಬದಲಾಗಿ, ಜಪಾನಿ ಫ್ಯಾಸಿಸ್ಟ್ ಸೇನೆಯ ಭದ್ರ ಕೋಟೆಯಾಗಿದ್ದ ಕ್ವಾಂಗ್‌ಥಾಂಗ್ ರಕ್ಷಣೆ ಪಡೆಗಳನ್ನು ನಾಶಗೊಳಿಸುವುದರ ಮೂಲಕ ಜಪಾನನ್ನು ಸಂಪೂರ್ಣವಾಗಿ ಸೋಲಿಸಬಹುದಾಗಿತ್ತು ಎಂಬುದೂ ಅವರಿಗೆ ಇನ್ನು ಚೆನ್ನಾಗಿ ಗೊತ್ತಿತ್ತು.

ಮಾನ್ಯರೆ, ಇಷ್ಟಾಗಿಯೂ ಮಾನ್ಯ ಚರ್ಚಿಲ್ ಅವರು ಈ ಕುರಿತು ತಮ್ಮ ಫುಲ್ಟನ್ ಭಾಷಣದಲ್ಲಿ ಅಣ್ವಸ್ತ್ರಗಳ ಮಹತ್ವ ಮತ್ತು ಸಾಮರ್ಥ್ಯದ ಬಗ್ಗೆ ಮಾತನಾಡಿದ್ದಾರೆ. ಅದನ್ನನುಸರಿಸಿಯೇ ಪರೀಕ್ಷಣೆಗಳು ಆರಂಭವಾದವು. ಆನಂತರ 1952 ರಲ್ಲಿ ನೇಪಾಳದಲ್ಲಿ ಕೆಲವು ಪರೀಕ್ಷಣೆಗಳು ನಡೆದವು. ಆಮೇಲೆ 1954 ರಲ್ಲಿ ಅಮೇರಿಕವು ಬೀಕನಿ ದ್ವೀಪದ ಮೇಲೆ ಇನ್ನೊಂದು ಪರೀಕ್ಷಣೆಯನ್ನು ನಡೆಸಿತು. ಅದಾದ ಮೇಲೆ ಅಣ್ವಸ್ತ್ರಗಳ ಬಳಕೆಯ ಭಯದ ಪ್ರದರ್ಶನ ಎಲ್ಲೆಲ್ಲೂ ನಡೆಯತೊಡಗಿತು. ಕೊರಿಯಾದ ಯುದ್ಧದಲ್ಲಿ ಅಮೇರಿಕಾ ಇಂಥ ಭೀತಿ ಸೃಷ್ಟಿಸಿತು. ಇಂಡೋ ಚೀನಾ ಯುದ್ದದ ಸಂದರ್ಭದಲ್ಲಿಯೂ ಈ ಭೀತಿ ಪುನರಪಿ ಕಾಣಿಸಿಕೊಂಡಿತು. ಇದು ಎಲ್ಲರಿಗೂ ಚಿರಪರಿಚಿತವಾದ ಸಂಗತಿ. ಇದಾದ ಮೇಲೆ ನ್ಯಾಟೋ ಕೌನ್ಸಿಲ್ ಅಣ್ವಸ್ತ್ರಗಳ ಆಧಾರದ ಮೇಲೆ ತನ್ನ ತಂತ್ರೋಪಾಯಗಳನ್ನು ರೂಪಿಸಿ ಅಭಿವೃದ್ಧಿ ಪಡಿಸುತ್ತಾ ಒಂದಾದ ಮೇಲೊಂದರಂತೆ ಯುದ್ದ ಭೀತಿಯ ಹೇಳಿಕೆಗಳನ್ನು ಕೊಡುತ್ತಿದೆ. ಅನತಿ ಕಾಲದಲ್ಲಿಯೇ ನ್ಯಾಟೋ ಕೌನ್ಸಿಲ್ ತನ್ನದೇಯಾದ ಬೃಹತ್ ಮಿಲಿಟರಿ ವ್ಯವಸ್ಥೆಯನ್ನು ಹೊಂದಲಿದೆಯೆಂಬುದನ್ನು ಅವರ ಹೇಳಿಕೆಗಳಿಂದ ಸರ್ವವಿದಿತವಾಗ ತೊಡಗಿದೆ. ಇದಕ್ಕೆ ಮೂಲ ನೆಲೆಯೆಂದರೆ, ಅಣು ಮತ್ತು ಪರಮಾಣು ಯುದ್ಧ ಅವರ ಕಾರ್ಯ ಮತ್ತು ತಂತ್ರೋಪಾಯಗಳು. ಕೇವಲ ತೀರಾ ಇತ್ತೀಚೆಗೆ ಬರ್ಮುಡಾ ಸಮ್ಮೇಳನಾ ಜರುಗಿತು. ಅಲ್ಲಿ ಬ್ರಿಟೀಷ್ ಪ್ರಧಾನ ಮಂತ್ರಿ ತನ್ನ ಅಧಿನಾಯಕ ಅಧ್ಯಕ್ಷ ಆನಸೆ ಹೋವರ್‌ನ್ನು ಭೇಟಿ ಮಾಡಿದರು. ಬ್ರಿಟನ್ ಅಲ್ಲಿ ಹೋಗದುದಕ್ಕೆ ಕಾರಣ ಅದು ತಾನು ಕಳೆದುಕೊಂಡಿದ್ದ ಸ್ಥಾನಮಾನವನ್ನು ಮತ್ತೆ ಗಳಿಸಿಕೊಳ್ಳುವುದು. ಸಾಮ್ರಾಜ್ಯಶಾಹಿ ಸಂಯೋಜನೆಯಲ್ಲಿ ತನ್ನ ಹಿರಿಯ ಪಾಲುದಾರನ ಸಮ್ಮುಖದಲ್ಲಿ ಕಳೆದುಕೊಂಡ ಮುಖ ಉಳಿಸಿಕೊಳ್ಳುವುದೇ ಅದರ

ಪರಮ ಗುರಿಯಾಗಿತ್ತು. ಸಮ್ಮೇಳನದ ನಂತರ ಕೂಡಲೇ ಎರಡೂ ಶಕ್ತಿ ರಾಷ್ಟ್ರಗಳು ಅಣ್ವಸ್ತ್ರ ಮತ್ತು ಪರಮಾಣು ಶಸ್ತ್ರಾಸ್ತ್ರಗಳಿಗೆ ಸಂಬಂಧಿಸಿ ತಮ್ಮ ಹೇಳಿಕೆಗಳನ್ನು ಕೊಟ್ಟವು. ಅವರ ಹೇಳಿಕೆಯ ಪ್ರಕಾರ ಅಣ್ವಸ್ತ್ರಗಳಿಗೆ ತಯಾರಿಕೆ ನಿಲ್ಲಿಸುವುದು ಅವರ ಉದ್ದೇಶವಾಗಿಲ್ಲ. ಬದಲಾಗಿ ಇಂಥಾ ತಯಾರಿಕೆಗಳ ಬಗ್ಗೆ ತಮಗಿರುವ ಸಮ್ಮತಿಯನ್ನು ಢಣಾಡಂಗುರವಾಗಿಯೇ ಘೋಷಿಸಿದರು. ಮಾನ್ಯರೇ, ನಿಮಗೆ ಗೊತ್ತಿರುವಂತೆ ಬ್ರಿಟನ್ ಕೆಲವು ಅಣ್ವಸ್ತ್ರ ಹಾಗೂ ಮಿಸೈಲ್‌ಗಳಿಗೆ ತಾನೂ ಒಂದೂ ನೆಲೆಯಾಗಲಿದೆಯೆಂದು-ಅಣು ಮತ್ತು ಪರಮಾಣು ಅಸ್ತ್ರಗಳ ಯುದ್ಧ ನೆಲೆಯಾಗಲಿದೆಯೆಂದು - ಘೋಷಿಸಲಾಯಿತು. ಈ ನೆಲೆ ಕೆಲವು ನಿರ್ದಿಷ್ಟ ರಾಷ್ಟ್ರಗಳ ವಿರುದ್ಧವೆಂಬುದು ಸ್ಪಷ್ಟಪಡಿಸಲಾಯಿತು. ಯಾವ ರಾಷ್ಟ್ರಗಳ ವಿರುದ್ಧವೆಂಬುದು ಎಲ್ಲರಿಗೂ ಚೆನ್ನಾಗಿ ಗೊತ್ತಿದೆ. ಬ್ರಿಟನ್‌ಗೆ ಈ ಎಲ್ಲ ಯುದ್ಧಾಸ್ತ್ರಗಳನ್ನೊದಗಿಸುತ್ತಿರುವುದು ಫ್ರಾನ್ಸ್ ಮತ್ತು ಇನ್ನಾವುದೇ ಪಾಶ್ಚಿಮಾತ್ಯ ರಾಷ್ಟ್ರಗಳ ವಿರುದ್ಧ ಯುದ್ಧ ಸಾರಲು ಅಲ್ಲ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಈ ಎಲ್ಲ ಸಿದ್ಧತೆಗಳು ಸೋವಿಯತ್ ನಾಡಿನ ವಿರುದ್ಧ ನಡೆಯುತ್ತಿವೆ ಎಂಬುದು ಸ್ಪಟಿಕದಷ್ಟೇ ಸ್ಪಷ್ಟ. ಈ ಪ್ರಕ್ರಿಯೆಯನ್ನು ಇಂದು ತಡೆಗಟ್ಟುವ ಕ್ರಿಯೆಯೆಂದೂ ಕರೆಯಲಾಗುತ್ತಿದೆ. ಸಾಂಪ್ರದಾಯಿಕ ಶಸ್ತ್ರಾಸ್ತ್ರಗಳ ಉತ್ಪಾದನೆ ಹಾಗೂ ಬಳಕೆಗಳನ್ನು ಕಡಿತಗೊಳಿಸಲಾಗಿದೆ. ಇದರಿಂದ ಬ್ರಿಟನ್ನಿನ ಇಡೀ ಯುದ್ಧ ತಂತ್ರವನ್ನು ಪುನರ್ ರೂಪಿಸಲಾಗುತ್ತಿದೆ. ಈಗ ಬ್ರಿಟನ್ ಅಣು ಮತ್ತು ಪರಮಾಣು ಶಸ್ತ್ರಾಸ್ತ್ರಗಳಿಂದ ಸನ್ನದ್ಧಗೊಳ್ಳುತ್ತಿದೆ. ಏಪ್ರಿಲ್ 7, 1957 ರ ನ್ಯೂಯಾರ್ಕ್ ಟೈಮ್ಸ್ ಸುಸ್ಪಷ್ಟವಾಗಿ ಪ್ರಕಟಿಸಲಾಗಿದೆ. "ಅಣು ಯುದ್ಧಕ್ಕಾಗಿ ಬ್ರಿಟನ್ ಉದ್ದೇಶಪೂರ್ವಕ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದೆ". ಇದನ್ನು ಹೇಳಿದ್ದು ಯಾವುದೇ ಕಮ್ಯುನಿಸ್ಟ್ ಪತ್ರಿಕೆ ಅಲ್ಲ. ಬದಲಾಗಿ ಬ್ರಿಟಿಷ್ ಸಾಮ್ರಾಜ್ಯಷಾಹಿಯೊಂದಿಗೆ ಅಪಾರ ಸಹಾನುಭೂತಿ ಹೊಂದಿರುವ ನ್ಯೂಯಾರ್ಕ್ ಟೈಮ್ಸ್ ಪತ್ರಿಕೆಯೇ ಇದನ್ನು ಘೋಷಿಸುತ್ತಿದೆ. ಆಮೇಲೆ ಲೋಕಸಭೆಯಲ್ಲಿ ವಿದೇಶಾಂಗ ವ್ಯವಹಾರದ ಮೇಲೆ ಚರ್ಚೆ ನಡೆದ ಸಂದರ್ಭದಲ್ಲಿ ಬ್ರಿಟಿಷ್ ಸರಕಾರ ಈ ಕುರಿತು ಒಂದು ಶ್ವೇತ ಪತ್ರವನ್ನು ಹೊರಡಿಸಿತು. ಅದರಲ್ಲಿ "ಇಂದು ಮುಕ್ತ ಜಗತ್ತು ತನ್ನ ರಕ್ಷಣೆಗಾಗಿ, ಮುಖ್ಯವಾಗಿ ಅಮೇರಿಕದ ಪರಮಾಣು ಸಾಮರ್ಥ್ಯದ ಮೇಲೆ ಅವಲಂಬಿಸಿದೆ" ಎಂದು ನಮೂದಿಸಲಾಗಿದೆ. ಅಂದರೆ, ಬ್ರಿಟನ್ ಅಮೇರಿಕದ ಮೇಲೆ ಅದು ಉತ್ಪಾದಿಸುವ ಪರಮಾಣು ಶಸ್ತ್ರಾಸ್ತ್ರಗಳ ಮೇಲೆ ಅವಲಂಬಿಸಿದೆಯೆಂಬುದು ನಿಚ್ಚಳ. ಇದನ್ನು ಶ್ವೇತ ಪತ್ರದಲ್ಲಿ ಸ್ಪಷ್ಟವಾಗಿಯೇ ಹೇಳಲಾಗಿದೆ. ಇನ್ನು ಮುಂದುವರೆದು ಅದು ಹೇಳುವುದೇನೆಂದರೆ "ಎಡನ್ ಕಾಲನಿಯ ರಕ್ಷಣೆಯ ಹೊಣೆ ಬ್ರಿಟನ್ನಿನದಾಗಿದೆ". ಅಷ್ಟೇ ಅಲ್ಲ ಪರಮಾಣು ಶಸ್ತ್ರಾಸ್ತ್ರಗಳನ್ನು ಹೊತ್ತೊಯ್ಯಬಲ್ಲ ಬಾಂಬರ್‌ಗಳ ಒಂದು ಸಮೂಹವನ್ನೇ ಸೈಪ್ರಸ್‌ನಲ್ಲಿ ನೆಲೆಗೊಳಿಸುವ ಯೋಜನೆಯನ್ನು ಅದು ಬಹಿರಂಗಪಡಿಸಿದೆ. ಇದರಿಂದ ಬ್ರಿಟನ್ನಿನ ಅಣು ಶಸ್ತ್ರಾಸ್ತ್ರಗಳ ಕಾರ್ಯಕ್ರಮದ ದಾಳಿಯನ್ನು ತಡೆಗಟ್ಟುವುದಿಲ್ಲ. ಇದಕ್ಕೆ ಪ್ರತಿಯಾಗಿ, ಏಷ್ಯ ಮತ್ತು ಆಫ್ರಿಕಾಗಳಲ್ಲಿ ಬ್ರಿಟೀಷ್ ಸಾಮ್ರಾಜ್ಯದ ಸಶಸ್ತ್ರ ಬಲಗಳನ್ನು ಅಣ್ವಸ್ತ್ರಗಳಿಂದ ಬಲಗೊಳಿಸಿ

ತಮ್ಮ ರಾಷ್ಟ್ರೀಯ ವಿಮೋಚನೆಗಾಗಿ ಹೋರಾಡುತ್ತಿರುವ ಜನತೆಯನ್ನು ಹೊಸಕಿ ಹಾಕುವುದು ಈ ಖಂಡಗಳಲ್ಲಿ ವಿವಿಧ ರಾಷ್ಟ್ರಗಳ ಸ್ವಾತಂತ್ರ್ಯ ಮತ್ತು ಸಾರ್ವಭೌಮತೆಯನ್ನು ಪ್ರತಿಗಟ್ಟುವುದು ಅವರ ನಿಜವಾದ ಉದ್ದೇಶವಾಗಿದೆಯೆಂಬುದು ಸ್ಪಷ್ಟವಾಗುತ್ತಿದೆ. ಬ್ರಿಟನ್ ತನ್ನ ಸಾಮ್ರಾಜ್ಯದ ಬೇರುಗಳನ್ನು ಇನ್ನು ಗಟ್ಟಿಗೊಳಿಸುವ ಉದ್ದೇಶದಿಂದಲೇ ಅಣುಶಸ್ತ್ರಾಸ್ತ್ರಗಳ ತಂತ್ರೋಪಾಯವನ್ನು ಅನುಸರಿಸುತ್ತಿದೆಯೆಂಬುದು ನಮ್ಮಲ್ಲಿ ಅತೀವ ಕಳವಳಕ್ಕೆ ದಾರಿಮಾಡಿಕೊಟ್ಟಿದೆ. ಬ್ರಿಟನ್ ಇಂದು ಯಾವುದೇ ಕಾರ್ಯಕ್ರಮ ಕೈಗೆತ್ತಿಕೊಂಡರೂ, ಯಾವುದೇ ಯೋಜನೆಯನ್ನು ರೂಪಿಸಿದರೂ, ಅವುಗಳ ಹಿಂದೆ ಪರಮಾಣು ಶಸ್ತ್ರಾಸ್ತ್ರಗಳ ತಯಾರಿಕೆ ಮತ್ತು ಬಳಕೆಯ ಭೀತಿಯೇ ಹೊರಹೊಮ್ಮುತ್ತಿದೆ. ಅದು ಇಡುವ ಪ್ರತಿಯೊಂದು ಹೆಜ್ಜೆಯೂ ಪರಮಾಣು ಯುದ್ಧ ಸನ್ನದ್ಧತೆಯ ಭೀತಿ ಬಿತ್ತುತ್ತಿದೆ. ಇದು ಬ್ರಿಟನ್ ಇಂದು ತಲುಪಿರುವ ಸ್ಥಿತಿ.

ಕಾಮನ್‌ವೆಲ್ತ್‌ನ ಭಾಗಿದಾರವಾಗಿರುವ ಭಾರತ ಹಾಗೂ ವಿಶೇಷವಾಗಿ ಸರಕಾರ ಈಗ ಈ ಎಲ್ಲಾ ಸಂಗತಿಗಳನ್ನು ಗಮನದಲ್ಲಿರಿಸಿಕೊಳ್ಳಬೇಕಿದೆ. ಈ ವಿಷಯ ಕುರಿತು ನಾನು ಇನ್ನು ಹೆಚ್ಚಾಗಿ ಹೇಳುವುದಿಲ್ಲ. ಐಸನ್‌ಹೋವರ್ ಸಿದ್ಧಾಂತವೆಂಬುದೊಂದು ನಮ್ಮ ಮುಂದಿದೆ. ತೈವಾನ್‌ನಲ್ಲಿ ಅವರು ಪರಮಾಣು ಅಸ್ತ್ರಗಳನ್ನು ನೆಲೆಗೊಳಿಸಿದ್ದರ ಜೊತೆಗೆ ಸೋವಿಯತ್ ಯೂನಿಯನ್ ಹಾಗೂ ಜಾಗತಿಕ ಸಾಮ್ರಾಜ್ಯಶಾಹಿ ದಬ್ಬಾಳಿಕೆ ವಿರುದ್ಧ ತಲೆಯೆತ್ತುವವರನ್ನು ಸದೆಬಡೆಯಲು ಅನೇಕ ರಾಷ್ಟ್ರಗಳಿಗೆ ಅಣ್ವಸ್ತ್ರಗಳನ್ನು ಪೂರೈಸಲಾಗುತ್ತಿದೆ. ಇದಕ್ಕೆ ತದ್ವಿರುದ್ಧವಾಗಿ ಸೋವಿಯತ್ ಯೂನಿಯನ್ ಅಣ್ವಸ್ತ್ರಗಳನ್ನು ಸಂಪೂರ್ಣವಾಗಿ ನಿಷೇಧಿಸುವ ತನ್ನ ಬಯಕೆಯನ್ನು ಅನೇಕ ಸಲ ಅಭಿವ್ಯಕ್ತಿಸಿದೆ. ಪರಮಾಣು ಶಸ್ತ್ರಾಸ್ತ್ರಗಳ ಪರೀಕ್ಷಣೆ ನಿಲ್ಲಿಸಬೇಕೆಂದು ನಮ್ಮ ಪ್ರಧಾನ ಮಂತ್ರಿಗಳು ಸೂಚಿಸಿದ್ದಾರೆ. ಇತ್ತೀಚೆಗೆ ಸೋವಿಯತ್ ರಾಜತಾಂತ್ರಿಕರು, ಪಾಶ್ಚಿಮಾತ್ಯ ಶಕ್ತಿ ರಾಷ್ಟ್ರಗಳಿಗೆ ಪರಮಾಣು ಪರೀಕ್ಷಣೆಗಳನ್ನು ಸಂಪೂರ್ಣವಾಗಿ ನಿಲ್ಲಿಸಲು ಸಾಧ್ಯವಾಗದಿದ್ದರೆ ಕೊನೆಯ ಪಕ್ಷ ಅವುಗಳನ್ನು ತಾತ್ಪೂರ್ತಿಕವಾಗಿ ನಿಲುಗಡೆಗೊಳಿಸುವ ಬಗ್ಗೆ ಒಂದು ಒಪ್ಪಂದವನ್ನಾದರೂ ಮಾಡಿಕೊಳ್ಳಬೇಕೆಂದು ಘೋಷಿಸಿದ್ದಾರೆ. ಸೋವಿಯತ್ ಯೂನಿಯನ್ ಪರೀಕ್ಷಣೆಗಳನ್ನು ನಿಲುಗಡೆಗೊಳಿಸಲು ಸದಾ ಸಿದ್ಧವಿದೆ ಎಂದು ಶ್ರೀ ಝೋರಿನ್ ಸ್ಪಷ್ಟ ಪಡಿಸಿದ್ದಾರೆ. ಅಷ್ಟೇ ಅಲ್ಲ, ತಕ್ಷಣ ಈ ಸಮಸ್ಯೆಯನ್ನು ಬದಿಗೊತ್ತಿ ಮರೆಮಾಡುವ ಉದ್ದೇಶದಿಂದ ಅಮೆರಿಕವೂ ಸಾರ್ವತ್ರಿಕ ನಿಶ್ಶಸ್ತ್ರೀಕರಣ ಪ್ರಶ್ನೆಯನ್ನು ಇದರ ಜೊತೆಗೆ ತಳುಕು ಹಾಕಬಾರದೆಂದು ಅವರು ಒತ್ತಿ ಹೇಳಿದ್ದಾರೆ. ಇದರಿಂದ ಅಣ್ವಸ್ತ್ರಗಳ ಪರೀಕ್ಷಣೆಗಳನ್ನು ಕೂಡಲೇ ಅಮಾನತ್ತುಗೊಳಿಸಲು ಸೋವಿಯತ್ ಯೂನಿಯನ್ ಸಿದ್ಧವಿರುವುದೆಂದೂ ಸ್ಪಷ್ಟವಾಗುತ್ತದೆ. ಅವರ ಈ ಮಾತಿನಿಂದ ಸೋವಿಯತ್ ಯೂನಿಯನ್ ನಿಲುವು ನಿಚ್ಚಳವಾಗಿದೆ. ಅಣು ಪರೀಕ್ಷಣೆಗಳ ನಿಷೇಧದ ಕುರಿತು ಅವರ ಪ್ರಸ್ತಾವನೆಗಳು ಸಂಪೂರ್ಣವಾಗಿ ಸ್ವೀಕಾರರ್ಹವಾಗಿಲ್ಲದಿದ್ದರೂ ಸರಿ ಕೊನೆಯ ಪಕ್ಷ ಪರೀಕ್ಷಣೆಗಳನ್ನು ತಾತ್ಪೂರ್ತಿಕವಾಗಿ ಅಮಾನತ್ತುಗೊಳಿಸಿ ಒಂದು ಅಪ್ಯಾಯಮಾನವಾದ

ವಾತಾವರಣ ಸೃಷ್ಟಿಸಿ ಹೆಚ್ಚಿನ ಚರ್ಚೆ ಜಿಜ್ಞಾಸೆಗಳ ಮೂಲಕ ಅಣ್ವಸ್ತ್ರಗಳ ಸಂಪೂರ್ಣ ನಿಷೇಧಕ್ಕೆ ದಾರಿ ಮಾಡಿಕೊಡಬಹುದಲ್ಲವೇ ? ಈ ವಿಷಯಕ್ಕೆ ಸಂಬಂಧಿಸಿ ಸೋವಿಯತ್ ಯೂನಿಯನ್ ತಾಳಿರುವ ನಿಲುವು ಇದಾಗಿದೆ. ಅಮೇರಿಕಾ ಮತ್ತು ಬ್ರಿಟೀಷ್ ಸರಕಾರಗಳು ಸೊವಿಯತ್ ನಾಡಿನ ಈ ಪ್ರಸ್ತಾವನೆಯನ್ನು ಒಪ್ಪುವಂತೆ ನಾವೆಲ್ಲರೂ ಒತ್ತಾಯ ಮಾಡಬೇಕಾಗಿದೆ. ಹೀಗೆಂದ ಮಾತ್ರಕ್ಕೆ ಸೋವಿಯತ್ ಸರಕಾರ ಹೇಳುವುದೆಲ್ಲವೂ ನಮ್ಮ ಸರಕಾರ ಸ್ವೀಕರಿಸಬೇಕೆಂದು ನಾನು ಹೇಳುತ್ತಿಲ್ಲ. ನನ್ನ ಮಾತಿನ ತಾತ್ಪರ್ಯವಿಷ್ಟೇ. ಅಮೇರಿಕಾ ಮತ್ತು ಬ್ರಿಟೀಷ್ ಸರಕಾರಗಳು ಪರಮಾಣು ಅಸ್ತ್ರಗಳನ್ನು ಉತ್ಪಾದಿಸಿ ಯುದ್ಧ ಸಿದ್ಧತೆ ನಡೆಸುತ್ತಿರುವುದೇ ಎಲ್ಲಾ ಶಾಂತಿ ಒಪ್ಪಂದಗಳಿಗೆ ಅಡ್ಡಿಯುಂಟು ಮಾಡುತ್ತಿದೆ:ಅವರ ಯುದ್ಧಕೋರ ನೀತಿಯೇ ಎಲ್ಲಾ ಸಮಸ್ಯೆಗಳಿಗೆ ಮೂಲವಾಗಿದೆ. ಅಣ್ವಸ್ತ್ರಗಳ ನಿಷೇಧಕ್ಕೆ ಸಂಬಂಧಿಸಿದಂತೆ ಬ್ರಿಟನ್ ಮತ್ತು ಅಮೇರಿಕಾ ಅನುಸರಿಸುತ್ತಿರುವ ಹಟಮಾರಿತನದ ಧೋರಣೆಯೇ ಈ ದಾರಿಯಲ್ಲಿಯ ದೊಡ್ಡ ಅಡಚಣೆಯಾಗಿದೆ. ಆದ್ದರಿಂದ, ಮಾನ್ಯ ಉಪಾಧ್ಯಕ್ಷರೆ, ನಾವು ಈಗ ಎತ್ತಿಕೊಂಡು, ಆಳವಾಗಿ ವಿಶ್ಲೇಷಿಸ ಬೇಕಾದ ಪ್ರಶ್ನೆಗಳು ಇವಾಗಿವೆ. ನಮ್ಮ ಸರಕಾರ ಈ ಕುರಿತು ಒಂದು ಸಾಮಾನ್ಯ ನಿಲುವು ತಳೆಯುವುದರಿಂದಷ್ಟೇ ಈ ಸಮಸ್ಯೆಗೆ ಪರಿಹಾರ ದೊರೆಯುವುದಿಲ್ಲ. ಒಂದು ಸಾಮಾನ್ಯ ದೃಷ್ಟಿಯನ್ನಿಟ್ಟುಕೊಳ್ಳುವುದೇನೋ ಸರಿ. ಆದರೆ ಅದಕ್ಕಿಂತಲೂ ಮುಖ್ಯವಾದದ್ದು ನಾವು ನಮ್ಮ ಒಲವು-ನಿಲವುಗಳ ಬಗೆಗೆ ದೃಢ ನಿರ್ಧಾರ ತೆಗೆದುಕೊಂಡು ಯುದ್ಧೋಪಾಯವನ್ನು ಮುಂದುವರಿಸುವುದಕ್ಕೆ ಕಾರಣೀಭೂತರಾದವರ ವಿರುದ್ಧ ಸೆಡ್ಡು ಹೊಡೆದು ನಿಲ್ಲಬೇಕಿದೆ. ಈ ಕುರಿತು ವ್ಯಾಪಕ ಜನಾಭಿಪ್ರಾಯವನ್ನು ರೂಢಿಸಿ ಅಣ್ವಸ್ತ್ರಗಳ ವಿರುದ್ಧ ಸಮಗ್ರ ಜನತೆಯ ಸದಭಿಪ್ರಾಯ ಹಾಗೂ ನೈತಿಕ ಧೋರಣೆಗಳನ್ನು ರೂಪಿಸಿ, ಇಡೀ ಮಾನವ ಕುಲದ ರಕ್ಷಣೆಗೆ ಒತ್ತಾಸೆಯಾಗಿ ನಿಲ್ಲುವಂತೆ ಮಾಡುವುದು ಸಾಧ್ಯವಿದೆ ಎಂದು ನನ್ನ ಭಾವನೆ. ಈ ರೀತಿಯಾಗಿ ಭಾರತೀಯರ ಶಾಂತಿ ಪರ ಬೆಂಬಲ ಇಡೀ ಜಗತ್ತನ್ನು ಅಂತಿಮ ಪರಮಾಣು ವಿನಾಶದಿಂದ ರಕ್ಷಿಸಬಲ್ಲದೆಂದು ನನ್ನ ನಂಬುಗೆಯಾಗಿದೆ.

# 3. ಆರ್ಥಿಕ ಅಭಿವೃದ್ಧಿ

ನಮ್ಮದು ಔದ್ಯಮಿಕವಾಗಿ ಹಿಂದುಳಿದ ರಾಷ್ಟ್ರ ಮತ್ತು ಈ ಸಂದರ್ಭದಲ್ಲಿ 'ಹಿಂದುಳಿದ' ಎಂದರೆ ರಾಜ್ಯಗಳು ಮುಂದುವರಿದಿದೆ, ಇನ್ನು ಕೆಲವು ಹಿಂದುಳಿದಿವೆ ಎಂದೇನೂ ಇದರರ್ಥವಲ್ಲ ಸತ್ಯತಃ ಮತ್ತು ಸಾಮಾನ್ಯವಾಗಿ, ನಾವು ಹಿಂದುಳಿದಿದ್ದೇವೆ ಎಂಬುದೇ ಇದರರ್ಥ.

ಈಗ ಒಂದು ವಿಶಿಷ್ಟ ಪ್ರಶ್ನೆ ಉದ್ಭವಿಸುತ್ತದೆ. ರಾಜ್ಯ-ರಾಜ್ಯಗಳ ನಡುವೆ ತೌಲನಿಕವಾಗಿ ನೋಡಿದರೆ, ಬಹುಶಃ ಕೆಲವು ರಾಜ್ಯಗಳಿಗೆ ಹೆಚ್ಚಿನ ಸೌಲಭ್ಯಗಳು ದೊರೆತು ಕೈಗಾರಿಕೀಕರಣದ ದಾರಿ ಸುಗಮವಾಗಿದೆ ಅಥವಾ ಈ ದಿಶೆಯಲ್ಲಿ ಅವು ಹೆಚ್ಚಿನ ಅಭಿವೃದ್ಧಿ ಸಾಧಿಸಲು ಅನುಕೂಲವಾಗಿದೆ. ಆದರೆ ಇನ್ನುಳಿದ ಕೆಲವು ರಾಜ್ಯಗಳಿಗೆ ಈ ಅವಕಾಶ ದೊರೆತಿಲ್ಲ. ಇದಕ್ಕೂ ಮಿಗಿಲಾಗಿ, ಅಭಿವೃದ್ಧಿ ಹೊಂದಿದ ರಾಜ್ಯಗಳೊಳಗೆ ಕೆಲವು ಪ್ರದೇಶಗಳು ತುಂಬಾ ನಿರ್ಲಕ್ಷ್ಯಕ್ಕೊಳಗಾಗಿದ್ದರೆ, ಇನ್ನು ಕೆಲವು ಪಕ್ಷಗಳು ಅಷ್ಟು ನಿರ್ಲಕ್ಷ್ಯಕ್ಕೊಳಗಾಗಿಲ್ಲ. ಆದ್ದರಿಂದ ಇದೊಂದು ಸಾರ್ವತ್ರಿಕ ಸಮಸ್ಯೆ, ಮತ್ತು ನಾವಿದನ್ನು ಈ ದೃಷ್ಟಿಕೋನದಿಂದಲೇ ಪರಿಭಾವಿಸಬೇಕಾಗಿದೆ. ಹೀಗಾಗಿ ಇಲ್ಲಿ ಪ್ರಾಂತೀಯವಾದಂಥ ಸಂಕುಚಿತ ಭಾವನೆಗಾಗಲೀ, ಉತ್ತರದ ವಿರುದ್ಧ ದಕ್ಷಿಣವೆಂಬ ಮೇಲಾಟದ ಪೈಪೋಟಿಯ ಪ್ರಶ್ನೆಗಾಗಲಿ, ಅವಕಾಶವಿಲ್ಲ. ಉದಾಹರಣೆಗೆ : ಅಸ್ಸಾಂ ಒಂದು ನಿರ್ಲಕ್ಷಿತ ಪ್ರದೇಶ, ಆದರೆ ಪಶ್ಚಿಮ ಬಂಗಾಲದ ಕಲ್ಕತ್ತಾಯೆಡೆಗೆ ನೋಡಿದರೆ ತುಂಬಾ ಮುಂದುವರಿದಿದೆ. ಗ್ರಾಮಾಂತರ ಪ್ರದೇಶಗಳೆಡೆಗೆ ದೃಷ್ಟಿ ಹಾಯಿಸಿದರೆ, ಅಷ್ಟೇ ನಿರ್ಲಕ್ಷಿತ ಎನ್ನದೇ ವಿಧಿಯಿಲ್ಲ. ಬಾಂಬೆ ಮಹಾನಗರದಲ್ಲಿ ಅಡ್ಡಾಡಿದರೆ ಅದರ ಮುನ್ನಡೆ ಮುಖಕ್ಕೆ ಈಡುವಷ್ಟು ಎದ್ದು ಕಾಣುತ್ತದೆ. ಆದರೆ ಅಹಮದಾಬಾದ್‌ನಂಥ ನಗರದಲ್ಲಿ ಕಾಲಿಟ್ಟ ಕ್ಷಣವೇ ಅದರ ಹಿಂದುಳಿದಿರುವಿಕೆ ಎದ್ದು ಕಾಣುತ್ತದೆ. ಅಷ್ಟೇ ಏಕೆ, ಮಹಾರಾಷ್ಟ್ರ ಅಥವಾ ಗುಜರಾತ್‌ದ ಒಳನಾಡಿನಲ್ಲಿ ದೃಷ್ಟಿ ಹಾಯಿಸಿದರೇ ಸಾಕು, ಅವು ನಿರ್ಲಕ್ಷ್ಯಕ್ಕೊಳಗಾಗಿರುವುದು ಸ್ಪಷ್ಟವಾಗುತ್ತದೆ. ಆದ್ದರಿಂದ ಹಿಂದುಳಿದಿರುವಿಕೆಯ ಪ್ರಶ್ನೆ ಒಂದು ಪ್ರಾಂತಕ್ಕೆ ಅಥವಾ ಉತ್ತರ ದಕ್ಷಿಣಕ್ಕೆ ಸಂಬಂಧಿಸಿದ್ದಲ್ಲ.

ಉದ್ಯಮಗಳ ಸ್ಥಾಪನೆಗೆ ಯೋಗ್ಯ ಸ್ಥಳ ಹುಡುಕುವ ಪ್ರಶ್ನೆಯೇ ಅತ್ಯಂತ ಮಹತ್ವದ್ದಾಗಿದೆ. ಆರ್ಥಿಕವಾಗಿ ಹಿಂದುಳಿದ ರಾಜ್ಯಗಳ ಅಭಿವೃದ್ಧಿಯನ್ನು ಅಧ್ಯಯನ ಮಾಡುವ ತಜ್ಞರ ಸಮಿತಿಯನ್ನು ನೇಮಿಸುವ ಕುರಿತು ಮಂಡಿಸಲಾಗಿದ್ದು ಖಾಸಗೀ ಸದಸ್ಯರು ಗೊತ್ತುವಳಿಯ ಮೇಲಿನ ಚರ್ಚೆಯಿಂದ ಹಿಂದುಳಿದ ರಾಜ್ಯಗಳ ಅಭಿವೃದ್ಧಿಯ ಸಮಸ್ಯೆಗಳನ್ನು ಅಧ್ಯಯನ ಮಾಡುವುದಕ್ಕೋಸ್ಕರ ತಜ್ಞರ ಸಮಿತಿಯೊಂದನ್ನು ಸಂಸ್ಥಾಪಿಸುವ ಕುರಿತು ಇರುವ ಈ

* ರಾಜ್ಯಸಭಾ 26 ಫೆಬ್ರವರಿ, 1960, ಸಿ.ಸಿ. 1987-83.

ಗೊತ್ತುವಳಿಯಲ್ಲಿ ನಾವು ಒತ್ತು ಕೊಡಬಯಸುವುದೇನೆಂದರೆ, ಈ ಪ್ರಶ್ನೆಯನ್ನು ಕುರಿತು ನಾವು ಮತ್ತೊಮ್ಮೆ ಹೊಸದಾಗಿ ಚಿಂತಿಸಬೇಕಾಗಿದೆ. ಹೊಸದಾಗಿ ಎಂದೊಡನೆಯೇ ಎಲ್ಲವನ್ನು ಕುರಿತು ಸಾರಾಸಗಟಾಗಿ ಅಲ್ಲ. ವಿವಿಧ ರಾಜ್ಯ, ಪ್ರಾಂತ ಹಾಗೂ ಪ್ರದೇಶಗಳ ಮೂಲಕ ಅವಶ್ಯಕತೆಗಳ ಬಗ್ಗೆ ವಿಶೇಷ ಗಮನದಿಂದ ನಾವು ಈ ಚಿಂತನೆ ನಡೆಸಬೇಕಿದೆ. ಔದ್ಯಮಿಕ ಬೆಳವಣಿಗೆಯನ್ನು ಬಹುಮಟ್ಟಿಗೆ ನಿರ್ಧರಿಸುವ ಅಂಶಗಳು ಹಲವಾರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ನೈಸರ್ಗಿಕ ಸಂಪನ್ಮೂಲಗಳ ಲಭ್ಯತೆ, ವಿದ್ಯುಚ್ಛಕ್ತಿ, ಇಂಧನಗಳ ಪೂರೈಕೆ ಮತ್ತು ಸಂಪರ್ಕ ಸಾರಿಗೆ ಸೌಲಭ್ಯಗಳು. ಇದನ್ನು ಯಾರು ಅಲ್ಲಗೆಳೆಯಲಾರರು. ಆದರೆ ಯಾವುದೇ ಸಂದರ್ಭದಲ್ಲಿ ಯಾವುದೂ ಅಂತಿಮವಾಗಿ ನಿರ್ಧಾರಿತವೆಂದು ಭಾವಿಸಬೇಕಾಗಿಲ್ಲ. ಮೇಲಾಗಿ, ಎಲ್ಲವೂ ತನ್ನಷ್ಟಕ್ಕೆ ತಾನೇ ನಮ್ಮ ಹಸ್ತಗತವಾಗುವುದೂ ಇಲ್ಲ. ಏನಿದ್ದರೂ ವಿದ್ಯುಚ್ಛಕ್ತಿ ಮತ್ತು ಇಂಧನಗಳನ್ನು ಹಿಂದುಳಿದ ಪ್ರದೇಶಗಳಲ್ಲಿಯೂ ದೊರೆಯುವಂತೆ ನಾವು ವ್ಯವಸ್ಥೆಗೊಳಿಸಬಹುದು. ಅಂತೆಯೇ ಸಂಪರ್ಕ ಸಾರಿಗೆ ಸೌಲಭ್ಯಗಳನ್ನು ಅಭಿವೃದ್ಧಿಪಡಿಸಬಹುದು. ಸಮಸ್ಯೆ ಉದ್ಭವಿಸುವುದು ಕೇವಲ ನೈಸರ್ಗಿಕ ಸಂಪನ್ಮೂಲಗಳ ಪ್ರಶ್ನೆ ಬಂದಾಗ ಮಾತ್ರ. ಉದಾಹರಣೆಗೆ : ಚಹಾ ಬೆಳೆಯಲು ಯೋಗ್ಯವಲ್ಲದ ಪ್ರದೇಶಗಳಲ್ಲಿ ನಾವದನ್ನು ಬೆಳೆಯಲು ಸಾಧ್ಯವಿಲ್ಲ. ಆದರೆ ಕೆಲವು ಕನಿಷ್ಠ ಸೌಲಭ್ಯಗಳು ದೊರೆತರೂ ಸಾಕು. ಎಲ್ಲಿ ಬೇಕೆಂದರಲ್ಲಿ ನಾವು ವಿದ್ಯುತ್ ಸ್ಥಾವರಗಳನ್ನು ಸ್ಥಾಪಿಸಬಹುದು. ಬಹುಶಃ ಇದೇನೋ ಕಷ್ಟದ ಕೆಲಸವಲ್ಲ. ಅಭಿವೃದ್ಧಿಯ ಸಮಸ್ಯೆಯನ್ನು ನಾವು ಬಗೆಯಬೇಕಾದ ವಿಧಾನವು ಹೀಗೇ ಇದೆ.

ಆರಂಭದಲ್ಲಿ ತೊಂದರೆಗಳೇನೋ ಸಾಕಷ್ಟು ಇವೆ ಎಂಬುದನ್ನು ನಾನು ಒಪ್ಪುತ್ತೇನೆ. ಆದರೆ ಅದೊಂದೇ ಕಾರಣಕ್ಕಾಗಿ ನಾವು ಹಿಂಜರಿಯಬೇಕಾಗಿಲ್ಲ. ನಾವೀಗ ತ್ವರಿತ ಕೈಗಾರೀಕರಣದ ಗುರಿಯನ್ನು ನಮ್ಮ ಮುಂದೆ ಇಟ್ಟುಕೊಂಡಿದ್ದೇವೆ. ತ್ವರಿತ ಕೈಗಾರಿಕೀಕರಣವೆಂದೊಡನೆ ಭಾರತೀಯ ಆರ್ಥಿಕ ವ್ಯವಸ್ಥೆಯ ಸಂದರ್ಭದಲ್ಲಿ ಎಲ್ಲೆಡೆಯೂ ಬಹುದೊಡ್ಡ ಉದ್ಯಮಗಳನ್ನು ಆರಂಭಿಸುವುದೆಂದೂ ಅರ್ಥವಲ್ಲ. ಇದು ನಮ್ಮ ಅರ್ಥ ವ್ಯವಸ್ಥೆಯ ಎಟುಕಿನಂತೆ ಇರುವ ಸಂಗತಿ. ಮೇಲಾಗಿ, ಅದು ಅಪೇಕ್ಷಣೆಯವೂ ಅಲ್ಲ. ಅಂಥದ್ದಕ್ಕೆ ಕೈ ಹಾಕಿದರೆ ಅದೊಂದು ಸಾಹಸವೇ ಆದೀತು. ದೇಶದ ತುಂಬೆಲ್ಲ ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸುವುದು ನಮಗೆ ಸಾಧ್ಯವಿಲ್ಲ ಮತ್ತು ಸಾಧುವು ಅಲ್ಲ. ಆದರೆ ದೇಶದಾದ್ಯಂತ ಅಸಂಖ್ಯಾತ ಸಣ್ಣ ಮತ್ತು ಮಧ್ಯಮ ಪ್ರಮಾಣದ ಉದ್ಯಮಗಳನ್ನು ಸ್ಥಾಪಿಸಿ ಅಸಮಾನತೆಯನ್ನು ಹೋಗಲಾಡಿಸಬೇಕಿದೆ. ನಾವು ಈ ಇಡೀ ವಿಷಯವನ್ನು ಈ ದೃಷ್ಟಿಯಿಂದ ನೋಡಬೇಕಾಗಿದೆ. ಹೀಗಾಗಿ ತ್ವರಿತ ಔದ್ಯಮೀಕರಣದ ಬಗ್ಗೆ ನಾವು ಮಾತನಾಡುವಾಗ, ಅದರ ವೇಗ ಕುರಿತು ಪ್ರಸ್ತಾಪಿಸುವಾಗ, ಸಹಜವಾಗಿಯೇ ನಮ್ಮ ಮನಸ್ಸಿನಲ್ಲಿ ಕಾಣಿಸಿಕೊಳ್ಳುವ ಪ್ರಶ್ನೆಯೆಂದರೆ, ಅವುಗಳಿಗೆ ಸೂಕ್ತವಾದ ಸ್ಥಳಗಳನ್ನು ಹುಡುಕುವುದು. ಇದಕ್ಕಿಂತ ಮಿಗಿಲಾಗಿ,

ಸಣ್ಣ ಮತ್ತು ಮಧ್ಯಮ ಗಾತ್ರದ ಕೈಗಾರಿಕೆಗಳು ದೇಶದಾದ್ಯಂತ ಪಸರಿಸುವಂತೆ ಮಾಡುವ ಪ್ರಶ್ನೆ ನಮ್ಮ ಮನದಲ್ಲಿ ಮೂಡುತ್ತದೆ. ವಿಶೇಷವಾಗಿ ಕೈಗಾರಿಕೆಗಳೇ ಇಲ್ಲದ ಪ್ರದೇಶಗಳಲ್ಲಿ ಔದ್ಯಮಿಕ ಅಭಿವೃದ್ಧಿಯ ದೃಷ್ಟಿಯಿಂದ ಹಿಂದುಳಿದಿರುವ ಪ್ರದೇಶಗಳಲ್ಲಿ ಅವು ಆವಿಷ್ಕರಿಸುವಂತೆ ಮಾಡುವ ಪ್ರಶ್ನೆ ನಮ್ಮ ಮನದಲ್ಲಿ ಮೂಡುತ್ತದೆ.

ಸರಿ, ನೀವಿನ್ನು ಔದ್ಯಮೀಕರಣವನ್ನು ತ್ವರಿತಗೊಳಿಸಲು ಬಯಸುವುದಾದರೂ ಯಾಕೆ? ನಾವು ನಮ್ಮ ಜನತೆಯ ಬದುಕಿನ ಮಟ್ಟವನ್ನು ಎತ್ತರಿಸಬಯಸುತ್ತೇವೆ. ನಾವು ನಮ್ಮ ಆರ್ಥಿಕತೆಯನ್ನು ಒಂದು ಮಾದರಿ ವ್ಯವಸ್ಥೆಯನ್ನಾಗಿ ಮಾಡಬಯಸುತ್ತೇವೆ. ಕೃಷಿ ಕ್ಷೇತ್ರದಲ್ಲಿಯ ಒಂದು ದೊಡ್ಡ ಜನವಿಭಾಗವನ್ನು ಔದ್ಯಮಿಕ ರಂಗಕ್ಕೆ ಸ್ಥಳಾಂತರಿಸಬೇಕೆಂಬುದು ನಮ್ಮ ಬಯಕೆ. ನಾಲ್ಕನೆಯ ಅಥವಾ ಐದನೆಯ ಪಂಚವಾರ್ಷಿಕ ಯೋಜನೆಯ ಮುಕ್ತಾಯದ ಹೊತ್ತಿಗೆ ಕೃಷಿಕ್ಷೇತ್ರದ ಜನತೆಯ ಸಂಖ್ಯೆ ಶೇಕಡ 70 ರಿಂದ 55 ಕ್ಕೆ ಇಳಿಸಲು ಸಾಧ್ಯವಾಗಬೇಕೆಂಬುದು ನಮ್ಮ ಲೆಕ್ಕಾಚಾರವಾಗಿದೆ. ಆಗ ಏಳುವ ಪ್ರಶ್ನೆ : ಹಾಗಾದರೆ, ಈ ಜನತೆಯನ್ನು ತೊಡಗಿಸುವುದಾದರೂ ಎಲ್ಲಿ ? ಈ ಬೃಹತ್ ಜನವಿಭಾಗವನ್ನು ನಮ್ಮ ಅರ್ಥ ವ್ಯವಸ್ಥೆಯ ಇತರ ರಂಗಗಳಲ್ಲಿ, ಅದರಲ್ಲಿಯೂ ವಿಶೇಷವಾಗಿ, ಔದ್ಯಮಿಕ ಕ್ಷೇತ್ರದಲ್ಲಿ ತೊಡಗಿಸಲಾಗುವುದು.

ಮಾನ್ಯರೇ, ಈಗ ನಮ್ಮ ಜನಸಂಖ್ಯೆಯು, ಸಾಮಾನ್ಯವಾಗಿ ಹೇಳಬೇಕೆಂದರೆ, ವರ್ಷ ಪ್ರತಿ ಶೇಕಡ 2 ರ ದರದಲ್ಲಿ ಬೆಳೆಯುತ್ತಿದೆ. ಈ ಹೆಚ್ಚಿನ ಸಂಖ್ಯೆಯ ಜನರನ್ನು ನಾವು ಒಂದಿಲ್ಲೊಂದು ಕಾರ್ಯ ಕ್ಷೇತ್ರದಲ್ಲಿ ತೊಡಗಿಸಬೇಕಾಗುತ್ತದೆ. ಆದರೆ ಈ ಸಮಸ್ಯೆಯ ಸ್ವರೂಪ ವಿಶಿಷ್ಟವಾದದ್ದು. ಉದಾಹರಣೆಗೆ : ಪ್ರತಿ ವರ್ಷ ಅಸ್ಸಾಂನಲ್ಲಿ ಹೆಚ್ಚಿನ ಶ್ರಮ ಶಕ್ತಿ ಸೃಷ್ಟಿಯಾಗುತ್ತದೆಂದು ಇಟ್ಟುಕೊಳ್ಳೋಣ. ಆದರೆ ಇವರನ್ನು ಕೃಷಿ ಕ್ಷೇತ್ರದಿಂದ ಔದ್ಯಮಿಕ ರಂಗಕ್ಕೆ ಸ್ಥಳಾಂತರಿಸುವುದು ಸಾಧ್ಯವಾಗುತ್ತಿಲ್ಲ. ಹಾಗಾಗಿ,ನಾವು ಅವರನ್ನು ಅಸ್ಸಾಂನಿಂದ ಪಶ್ಚಿಮ ಬಂಗಾಲಕ್ಕೋ, ಬಾಂಬೆಗೋ, ಸ್ಥಳಾಂತರಿಸುವಂತೆಯೂ ಇಲ್ಲ. ಆದ್ದರಿಂದ ಹೆಚ್ಚು ಹೆಚ್ಚು ಜನರನ್ನು ನಾವು ಕೃಷಿಯೇತರ ರಂಗದಲ್ಲಿ ತೊಡಗಿಸುವ ಗುರಿಯನ್ನು ಸಾಧಿಸಬೇಕಾದರೆ ನಾವು ಔದ್ಯಮೀಕರಣವನ್ನು ಕೈಗೊಳ್ಳಲೇಬೇಕು. ಭಾರತದ ವಿವಿಧ ಭಾಗಗಳಲ್ಲಿ ದೊರೆಯುಬಹುದಾದ ಎಲ್ಲ ಸಂಪನ್ಮೂಲಗಳನ್ನು ಬಳಸುವ ಉದ್ಯಮಗಳ ಸಂಸ್ಥಾಪನೆಯಾಗಬೇಕು. ಈ ದೃಷ್ಟಿಯಿಂದ ಇದು ತುಂಬಾ ಮಹತ್ವದ ಸಂಗತಿಯೂ ಹೌದು.

ಮಾನ್ಯರೆ, ನಿರುದ್ಯೋಗ ಭರದಿಂದ ಬೆಳೆಯುತ್ತಿದೆ. ತೃತೀಯ ಪಂಚವಾರ್ಷಿಕ ಯೋಜನೆಯ ಸಿದ್ಧತಾ ದಾಖಲೆಗಳಿಂದ ನಮಗೆ ತಿಳಿದು ಬರುವುದೇನೆಂದರೆ ಆ ಯೋಜನೆಯ ಮುಕ್ತಾಯದ ಹೊತ್ತಿಗೆ ಈ ಸಮಸ್ಯೆ ಇನ್ನು ಬೃಹತ್ತಾಗಿ ಬೆಳೆಯಲಿದೆ. ಕೃಷಿಕ್ಷೇತ್ರದ ಮೇಲೆ

ಇಷ್ಟು ತೀವ್ರವಾದ ಒತ್ತಡವಿರುವ ಹಿನ್ನಲೆಯಲ್ಲಿ ನಾವು ಮಧ್ಯಮ ಮತ್ತು ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಿ, ಅವುಗಳನ್ನು ರಾಷ್ಟ್ರದಾದ್ಯಂತ ಹರಡುವಂತೆ ಮಾಡದಿದ್ದರೆ, ಅದರಲ್ಲಿಯೂ ವಿಶೇಷವಾಗಿ, ಔದ್ಯಮಿಕವಾಗಿ ಹಿಂದುಳಿದ ಪ್ರದೇಶಗಳ ಬಗ್ಗೆ ಹೆಚ್ಚಿನ ಗಮನ ಹರಿಸದಿದ್ದರೆ, ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು ಅಸಾಧ್ಯ. ಆಮೇಲೆ ನಮಗೆ ಇಲ್ಲಿ ಮತ್ತೆ ಎದುರಾಗುವ ಪ್ರಶ್ನೆಯೆಂದರೆ, ಈವರೆಗೂ ಬಳಸಲ್ಪಡುವ ಶ್ರಮ ಶಕ್ತಿಯನ್ನು ಬಳಸಿ, ನಿರುದ್ಯೋಗವನ್ನು ಹೋಗಲಾಡಿಸುವುದರ ಜೊತೆಗೆ ನಮ್ಮ ಔದ್ಯಮಿಕ ಬೆಳವಣಿಗೆಗೆ ಪುಷ್ಟಿಕೊಟ್ಟು, ಆ ಮೂಲಕ ಆರ್ಥಿಕ ಅಭಿವೃದ್ಧಿಗೆ ದಾರಿಮಾಡಿಕೊಡುವುದು. ಈ ಹಿಂದುಳಿದ ಪ್ರದೇಶಗಳಿಗೆ ವಿಶೇಷ ಗಮನಕೊಟ್ಟು ಅವುಗಳನ್ನು ಅಭಿವೃದ್ಧಿಪಡಿಸುವುದು ಅತ್ಯಂತ ಅವಶ್ಯಕವಾದದ್ದಾಗಿದೆ.

ಇನ್ನು ಸಂಪನ್ಮೂಲಗಳ ಪ್ರಶ್ನೆ ನಮ್ಮ ಸಂವಿಧಾನದನ್ವಯ ಮತ್ತು ಭಾರತದ ಪ್ರಸಕ್ತ ಆರ್ಥಿಕ ವ್ಯವಸ್ಥೆಯಡಿಯಲ್ಲಿ ವಿವಿಧ ರಾಜ್ಯಗಳು ಸಂಪನ್ಮೂಲಗಳ ಕೊರತೆಯಿಂದ ನರಳುತ್ತಿರುವುದನ್ನು ನಾವು ನೋಡುತ್ತೇವೆ. ನಿನ್ನೆ ಪಶ್ಚಿಮ ಬಂಗಾಳದ ಶಾಸನ ಸಭೆಯಲ್ಲಿ ಡಾ : ಬಿ.ಸಿ. ರಾಯ್ ಅವರು ತಮ್ಮ ಬಜೆಟ್‌ನ್ನು ಮಂಡಿಸಿದ್ದಾರೆ. ಅವರು ಪಶ್ಚಿಮ ಬಂಗಾಲದಿಂದ ಕೇಂದ್ರಕ್ಕೆ ಕೊಡಬೇಕಾದ ಸಾಲದ ಮರುಪಾವತಿಯನ್ನು ತಡೆಹಿಡಿಯಬೇಕೆಂದು ಕೋರಿದ್ದಾರೆ. ಪಶ್ಚಿಮ ಬಂಗಾಲದಂತಹ ರಾಜ್ಯವೇ ಸಂಪನ್ಮೂಲಗಳ ಕೊರತೆಯಿಂದ ನರಳುತ್ತಿದ್ದು ತನ್ನ ವಾರ್ಷಿಕ ಬಜೆಟ್ಟನ್ನು ಸಮತೋಲನಗೊಳಿಸಲು ಸಾಧ್ಯವಾಗದೆ ಕೇಂದ್ರದ ಸಾಲ ಮರುಪಾವತಿ ಮಾಡದ ಸ್ಥಿತಿಯಲ್ಲಿದ್ದರೆ, ಇನ್ನು ಉಳಿದ ರಾಜ್ಯಗಳ ಸ್ಥಿತಿ? ಇದು ನಿಜ ಸ್ಥಿತಿ ? ಇನ್ನು ಆರ್ಥಿಕವಾಗಿ ಹಿಂದುಳಿದ ರಾಜ್ಯಗಳ ಸ್ಥಿತಿ-ಗತಿ ಅದರಲ್ಲಿಯೂ ಮುಖ್ಯವಾಗಿ ಪಶ್ಚಿಮ ಬಂಗಾಳ ಅಥವಾ ಬಾಂಬೆಗಳಂತೆ, ಹೇರಳ ಸಂಪನ್ಮೂಲಗಳ ಲಭ್ಯತೆಯಿಲ್ಲದಿರುವ ರಾಜ್ಯಗಳ ಸ್ಥಿತಿಯನ್ನು ನೀವೇ ಕಲ್ಪಿಸಿಕೊಳ್ಳಬೇಕು.

ಸಣ್ಣ ಮತ್ತು ಮಧ್ಯಮ ಗಾತ್ರದ ಉದ್ಯಮಗಳನ್ನು ಸಾರ್ವಜನಿಕ ರಂಗದಲ್ಲಿ ಸ್ಥಾಪಿಸದಿದ್ದರೆ ನಾವು ಸಂಪನ್ಮೂಲಗಳನ್ನು ಕ್ರೋಢೀಕರಿಸುವುದು ಸಾಧ್ಯವಾಗುವುದಿಲ್ಲ. ಅಭಿವೃದ್ಧಿಯ ಈ ಪಥವನ್ನು ನಾವು ಬೆಂಬಲಿಸದಿದ್ದರೆ ಆರ್ಥಿಕ ಮುನ್ನಡೆಯನ್ನು ನಿರೀಕ್ಷಿಸಲಾಗದು. ಸಾಕಷ್ಟು ಸಂಪನ್ಮೂಲಗಳನ್ನು ಕ್ರೋಢೀಕರಿಸುವುದರ ಪ್ರಶ್ನೆಗೆ ಸಂಬಂಧಿಸಿ ಹೇಳುವುದಾದರೆ, ನಾವು ಸ್ವದೇಶಿ ಬಂಡವಾಳವನ್ನು ಸರಿಯಾದ ಮಾರ್ಗದಲ್ಲಿ ಹರಿಯುವಂತೆ ಮಾಡಬೇಕಾಗುತ್ತೆಂಬುದು ಸುಸ್ಪಷ್ಟ. ದೇಶ ಬಂಡವಾಳದ ಹೂಡಿಕೆಯೂ ಶೇಕಡ 11 ಕ್ಕೆ ಏರಿಸಲು ಆಶಿಸಲಾಗಿದೆ. ಆದರೆ ಈ ಸಂಪನ್ಮೂಲಗಳನ್ನು ಪಡೆಯುವುದೆಂತು? ಜನತೆಯ ಮೇಲೆ ಇನ್ನು ಹೆಚ್ಚು ಹೆಚ್ಚಿನ ತೆರಿಗೆ ಹೇರುವುದರ ಮೂಲಕವೇ? ಅಥವಾ ಸಾರ್ವಜನಿಕ ಕ್ಷೇತ್ರದಲ್ಲಿ ಸಣ್ಣ ಪುಟ್ಟ ಉದ್ಯಮ ಹಾಗೂ ಇನ್ನಿತರ ಚಟುವಟಿಕೆಗಳನ್ನು ಆರಂಭಿಸಿ ಅದರಿಂದ ನಿಧಿ ಸಂಗ್ರಹಿಸ ಬೇಕೆ? ನಾನು ಪ್ರಸ್ತಾಪಿಸಿದ ಈ ಎರಡನೇ ಮೂಲದಿಂದ ನಿಧಿ ಸಂಗ್ರಹಿಸುವುದು

ಸಾಧುವೆನ್ನುವುದಾದರೆ, ನಾವು ಹೆಚ್ಚಿನ ಹಣವನ್ನು ಇತರ ಕ್ಷೇತ್ರಗಳಿಂದ, ಅದರಲ್ಲಿಯೂ ಮುಖ್ಯವಾಗಿ ಅಸಾಂಪ್ರದಾಯಿಕ ಕ್ಷೇತ್ರಗಳಿಂದ ಸಂಗ್ರಹಿಸಬೇಕಾಗಿದೆ. ನಮ್ಮ ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದಂತೆ ಹೇಳುವುದಾದರೆ, ಸಣ್ಣ ಹಾಗೂ ಮಧ್ಯಮ ಗಾತ್ರದ ಉದ್ಯಮಗಳನ್ನು ಆರಂಭಿಸಿ ಅಭಿವೃದ್ಧಿ ಪಡಿಸುವುದು ನಮ್ಮ ಅನಿವಾರ್ಯವಾದ ಕಾರ್ಯಭಾರವಾಗಿದೆ. ಆದರೆ ಈ ದಾರಿಯಲ್ಲಿರುವ ಮುಖ್ಯ ಅಡ್ಡಿಗಳೆಂದರೆ, ಬಂಡವಾಳಗಾರರು. ಅವರು ನಮ್ಮ ಔದ್ಯಮಿಕ ಅಭಿವೃದ್ಧಿ ಹಾಗೂ ಹಣಕಾಸಿನ ವ್ಯವಹಾರವನ್ನು ಕೆಲವೇ ಸ್ಥಳಗಳಲ್ಲಿ ಕೇಂದ್ರೀಕರಿಸಲು ಪ್ರಯತ್ನಿಸುತ್ತಿದ್ದಾರೆ. ಯಾಕೆಂದರೆ, ಅದು ಅವರಿಗೆ ತುಂಬಾ ಅನುಕೂಲಕರವಾಗಿರುತ್ತದೆ. ಈ ಕ್ಷೇತ್ರದಲ್ಲಿ ದೊಡ್ಡ ದೊಡ್ಡ ದೈತ್ಯರಿದ್ದಾರೆ. ಉದಾಹರಣೆಗೆ : ಬಾಂಬೆ ಮಿಲ್‌ಗಳ ಮಾಲೀಕರು, ಕಲ್ಕತ್ತಾ ಮಿಲ್‌ಗಳ ಮಾಲೀಕರು, ಎಲ್ಲ ಔದ್ಯಮಿಕ ಚಟುವಟಿಕೆಗಳು ಈ ಎರಡೇ ಸ್ಥಳಗಳಲ್ಲಿ ಕೇಂದ್ರೀಕರಣಗೊಳ್ಳಬೇಕೆಂದು ಅವರು ಬಯಸುತ್ತಾರೆ. ಏಕೆಂದರೆ ಅಲ್ಲಿಯೇ ಅವರಿಗೆ ಎಲ್ಲ ಬ್ಯಾಂಕಿನ ಸೌಲಭ್ಯಗಳು ದೊರೆಯುತ್ತವೆ, ಅಲ್ಲಿನಿಂದಲೇ ಅವರು ದೇಶದಾದ್ಯಂತ ತಮ್ಮ ವ್ಯವಹಾರ ನಡೆಸಬಯಸುತ್ತಾರೆ ಮತ್ತು ಅದಕ್ಕಾಗಿ ಬೇಕಾಗುವ ಸಾರಿಗೆ ಸಂಪರ್ಕದ ಸೌಕರ್ಯಗಳು ಅಲ್ಲಿಯೇ ಯಥೇಚ್ಛವಾಗಿ ದೊರೆಯುತ್ತವೆ. ಈ ಎಲ್ಲದರ ಹಿಂದಿರುವ ಒಂದೇ ಒಂದು ಉದ್ದೇಶ-ಲಾಭ. ಜನತೆ ಹಸಿವು ತೃಷೆಯಿಂದ ಸತ್ತರೂ ಅವರಿಗೆ ಚಿಂತೆಯಿಲ್ಲ, ಅಪಾರ ಜನತೆ ಬಡತನದ ಬೇಗೆಯಲ್ಲಿ ಬೆಂದರೂ ಅವರಿಗೆ ಎಳ್ಳಷ್ಟೂ ಕಾಳಜಿಯಿಲ್ಲ. ಅವರು ಮುಖ್ಯ ಸವಾರಿ ಮಾಡಿಯಾದರೂ ಸರಿ, ತಮ್ಮ ಶ್ರೇಯೋಭಿವೃದ್ಧಿ ಸಾಧಿಸುವುದೇ ಅವರ ಪರಮ ಗುರಿ. ಈ ಮಹಾಶಯರೇ ದೇಶದ ಆರ್ಥಿಕ ನೀತಿಯನ್ನು ನಿಯಂತ್ರಿಸುತ್ತಾರೆ. ಅದರ ಮೇಲೆ ಅಪಾರ ಪ್ರಭಾವ ಬೀರಿ ಅದರ ದಿಶೆ-ದಿಕ್ಕನ್ನು ನಿರ್ಧರಿಸುವ, ಅದರ ಸ್ಥಿತಿಗತಿಗಳನ್ನು ತೀರ್ಮಾನಿಸುವ ಪ್ರಭುಗಳು ಇವರೇ ಆಗಿರುತ್ತಾರೆ. ಉದ್ಯಮಗಳು ಕೆಲವೇ ಪ್ರದೇಶಗಳಲ್ಲಿ ಕೇಂದ್ರೀಕೃತಗೊಳ್ಳಬೇಕೆಂದು ಬಯಸುವವರು ಮತ್ತಾರೂ ಅಲ್ಲ. ಇಡೀ ಔದ್ಯಮಿಕ ಕ್ಷೇತ್ರ ಏಕ ಸ್ವಾಮ್ಯ ಬಂಡವಾಳ ಶಾಹಿಗಳ ಭದ್ರ ಕೋಟೆಯಾಗಿ ಬಿಟ್ಟಿದೆ. ಉದ್ಯಮ ಘಟಕಗಳು ಕೆಲವೇ ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ಕೇಂದ್ರೀಕರಣಗೊಂಡು ಆರ್ಥಿಕ ಅಸಮಾನತೆ ಉಲ್ಬಣಿಸುವುದಕ್ಕೆ ಇವರೇ ಕಾರಣೀ ಭೂತರು. ಭಾರತದಂತಹ ಅಭಿವೃದ್ಧಿ ಶೀಲ, ಹಿಂದುಳಿದ ರಾಷ್ಟ್ರದಲ್ಲಿ ಔದ್ಯಮಿಕ ಕೇಂದ್ರೀಕರಣದಿಂದಾಗಿ ಆರ್ಥಿಕ ಶಕ್ತಿಯ ಅಸಮತೋಲನವುಂಟಾಗಿದೆ. ಬ್ರಿಟೀಷರು ಮಾಡಿದ್ದು ಇದನ್ನೇ ಅವರ ಶೋಷಣೆಗೆ ಇಡೀ ದೇಶದ ವಿಶಾಲ ಪ್ರದೇಶ ಮುಕ್ತವಾಗಿದ್ದರೂ ಅವರು ಬಹು ಸರಳವಾಗಿ ಹಣಗಳಿಸುವ ದೃಷ್ಟಿಯಿಂದ ಕೇವಲ ಬಾಂಬೆ ಕಲ್ಕತ್ತಾಗಳಂತಹ ಸ್ಥಳಗಳಲ್ಲಿಯೇ ತಮ್ಮೆಲ್ಲಾ ಉದ್ಯಮಗಳನ್ನು ಕೇಂದ್ರೀಕರಿಸಿದ್ದರು. ಇಂಥ ಕೇಂದ್ರೀಕರಣ ಪರವಾದ ದೊಡ್ಡ ದೊಡ್ಡ ಬಂಡವಾಳಕ್ಕೆ ನಮ್ಮ ದಾರಿಯಲ್ಲಿರುವ ಮುಖ್ಯ ಎಡರು ತೊಡರುಗಳಾಗಿದ್ದಾರೆ. ಆದ್ದರಿಂದ ಸಂಬಂಧಿಸಿದ ವಿಷಯದಲ್ಲಿ ನಾವು ಈ ಎಲ್ಲ ಸಂಗತಿಗಳನ್ನು ಗಮನದಲ್ಲಿರಿಸಿಕೊಳ್ಳುವುದು ಉಚಿತ. ಬಂಡವಾಳ ಸಂಗ್ರಹಣೆಯ ಸಂದರ್ಭದಲ್ಲಿ ಈ

ಭಾರಿ ಬಂಡವಾಳಶಾಹಿಗಳ ಪಾತ್ರಕ್ಕೆ ಬಹು ಮಹತ್ವವಿದೆ. ಅವರು ಎಲ್ಲವು ತಮ್ಮ ಹಿತಾಸಕ್ತಿಗಳಿಗನುಗುಣವಾಗಿ ಜರಗುವಂತೆ ವ್ಯವಸ್ಥೆ ಮಾಡುತ್ತಾರೆ. ಇದು ಹೇಗೆ ನಡೆಯುವುದು ಗೊತ್ತೆ ? ಬಂಡವಾಳ ಸಂಗ್ರಹಣೆಯ ಪ್ರಕ್ರಿಯೆಯಲ್ಲಿ ವಾಸ್ತವವಾಗಿ ಹೆಚ್ಚಿನವುಗಳು ಈಗಾಗಲೇ ಅಸ್ತಿತ್ವದಲ್ಲಿರುವ ಉದ್ಯಮಗಳನ್ನು ವಿಸ್ತರಿಸುವ ಉದ್ದೇಶ ಹೊಂದಿರುತ್ತವೆ. ಅಂದರೆ ದೈತ್ಯೋದ್ಯಮಗಳನ್ನು ಇನ್ನೂ ಭಾರಿ ದೈತ್ಯ ಉದ್ಯಮವಾಗಿಸಿ ಆ ಮೂಲಕ ಎಲ್ಲ ಸ್ವಾಮ್ಯದ ಪ್ರದೈತೆಗಳನ್ನು ಬೆಳೆಯಿಸಿ, ಅವರ ಕೈ ಬಲಪಡಿಸುವ ಗುರಿ ಅವುಗಳಿಗೆ ಇರುತ್ತದೆ. ಮೆಸ್ಸರ್ಸ್ ಬಿರ್ಲಾ ಸಹೋದರರ ಬಟ್ಟೆ ಮಿಲ್‌ಗಳಿಗೆ ಇನ್ನಿಷ್ಟು ಬಂಡವಾಳ ಹರಿದು ಬಂದು ಅವು ಇನ್ನೂ ವಿಸ್ತರಣೆಗೊಂಡು ದೈತ್ಯ ರೂಪ ತಾಳುತ್ತವೆ. ಇದು ಔದ್ಯಮಿಕ ಬೆಳವಣಿಗೆಯ ವಿರೂಪ ಅಷ್ಟೇ ಅಲ್ಲ:ವಿಕೃತ ರೂಪವೂ ಹೌದು. ಹೀಗೆ ಬಂಡವಾಳ ಒಂದೇ ಎಡೆ ಶೇಖರಣೆಯಾಗುವುದನ್ನು ತಡೆದು ಬೇರೆ ದಿಕ್ಕಿನಲ್ಲಿ ಹರಿಯಬಿಟ್ಟರೆ, ಉದಾಹರಣೆಗೆ ಅಸ್ಸಾಂಗೆ, ಬಿಹಾರಿಗೆ ಅಥವಾ ಒರಿಸ್ಸಾಕ್ಕೆ ಅದು ಸಿಗುವಂತೆ ಮಾಡಿದರೆ, ಅಲ್ಲಿ ಏನಾದರೂ ಅಭಿವೃದ್ಧಿ ಪಡಿಸಬಹುದು. ಅನೇಕ ಸಣ್ಣ ಸಣ್ಣ ಘಟಕಗಳನ್ನು ಸ್ಥಾಪಿಸಿ, ಅಸಂಖ್ಯಾತ ಜನರಿಗೆ ಉದ್ಯೋಗ ಕಲ್ಪಿಸಿಕೊಡಬಹುದು. ಮೇಲಾಗಿ ಸಹಜವಾಗಿಯೇ ಏಕಸ್ವಾಮ್ಯದ ಬಂಡವಾಳಿಗರ ಶಕ್ತಿಗುಂದಿಸಬಹುದು. ಈ ಎಲ್ಲ ಕಾರಣಗಳಿಂದಾಗಿಯೇ ಬಂಡವಾಳಶಾಹಿಗಳು ಬಂಡವಾಳ ಚೆಲ್ಲಾಪಿಲ್ಲಿಯಾಗಿ ಚದುರಿ ಹೋಗುವುದಕ್ಕೆ ಪ್ರತಿಯಾಗಿ, ಒಂದೇ ಕಡೆ ಸಂಗ್ರಹವಾಗುವುದನ್ನು ಬಯಸುತ್ತಾರೆ.

ಅಪಾರ ನಿರ್ವಹಣೆಯ ಸಾಮರ್ಥ್ಯವಿರುವ ಮ್ಯಾನೇಜಿಂಗ್ ಏಜನ್ಸಿಗಳು ಆರ್ಥಿಕ ಶಕ್ತಿಯ ಕೇಂದ್ರೀಕರಣ, ವಿಕೃತಗೊಂಡ ವಾಣಿಜ್ಯ ವ್ಯವಹಾರ, ಕೇಂದ್ರೀಕೃತ ಬ್ಯಾಂಕಿಂಗ್ ವ್ಯವಸ್ಥೆ, ಕೇಂದ್ರೀಕೃತ ಔದ್ಯಮಿಕ ಸಂಕೀರ್ಣ ಈ ಎಲ್ಲವೂ ಏಕಸ್ವಾಮ್ಯ ಬಂಡವಾಳದ ಸಾಮಾನ್ಯ ಗುಣ ಲಕ್ಷಣಗಳಾಗಿವೆ. ಆದರೆ ಸುಯೋಜಿತ ಅಭಿವೃದ್ಧಿಯ ಮೂಲಕ ಸದೃಢ ದೇಶವೊಂದನ್ನು ನಿರ್ಮಿಸಿ ಹಿಂದುಳಿದ ಸಕಲ ಜನ ಕೋಟಿಯ ಏಳ್ಗೆಯನ್ನು ಸಾಧಿಸಬಯಸುವ ಅವರ ಬದುಕಿನ ಸ್ಥಿತಿಗತಿಗಳನ್ನು ಉತ್ತಮಿಸುವ ಅಭಿಲಾಷೆ ಹೊಂದಿರುವ ನಾವು ಬೇರೆಯೇ ಮಾರ್ಗವನ್ನು ತಿಳಿಯಬೇಕಾಗಿದೆ. ಈವರೆಗೆ ಅಲಕ್ಷ್ಯಕ್ಕೊಳಗಾಗಿರುವ ಪ್ರಾಂತ್ಯಗಳಾದ ಹಿಮಾಚಲ ಪ್ರದೇಶ, ಪಂಜಾಬ್, ಅಸ್ಸಾಂ, ಒರಿಸ್ಸಾ ಅಷ್ಟೇ ಏಕೆ, ರಾಜಸ್ಥಾನ, ಮಧ್ಯಪ್ರದೇಶಗಳಂಥ ರಾಜ್ಯಗಳ ಅವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ನಮ್ಮ ತ್ವರಿತ ಔದ್ಯಮೀಕರಣದ ಧೋರಣೆಯನ್ನು ಇಡೀಯಾಗಿ ಪುನರೂಪಿಸಬೇಕಿದೆ. ನಮ್ಮ ಔದ್ಯಮೀಕರಣದ ಪ್ರಕ್ರಿಯೆ ಈ ಎಲ್ಲ ಪ್ರದೇಶಗಳಲ್ಲಿ ಸಮಾನವಾಗಿ ನಡೆಯುವಂತೆ ನೋಡಿಕೊಳ್ಳಬೇಕಾಗಿದೆ.

ಬ್ಯಾಂಕಿಂಗ್ ವ್ಯವಹಾರವನ್ನೇ ನಿದರ್ಶನಕ್ಕೆ ತೆಗೆದುಕೊಳ್ಳಬಹುದು. ನಾನು ಸಂಬಂಧಪಟ್ಟ ದಾಖಲೆ ಪತ್ರಗಳನ್ನು ಪರಿಶೀಲಿಸಿದ್ದೇನೆ. ಕೆಲವೇ ಕೆಲವು ಜನರಿಗೆ

ರೂ. 200 ಕೋಟಿಯಿಂದ ರೂ. 300 ಕೋಟಿಗಳವರೆಗೆ ಸಾಲ ನೀಡಲಾಗಿದೆ. ಈ ಬೃಹತ್ ಮೊತ್ತದ ಸಾಲವನ್ನು ಪಡೆದವರು ಯಾರು? ಬೆರಳೆಣಿಕೆಯಷ್ಟಿರುವ ಕೆಲವೇ ಕೆಲವು ಏಕಸ್ವಾಮ್ಯ ಬಂಡವಾಳಶಾಹಿಗಳು. ಇವರ ಸಂಖ್ಯೆ ಖಚಿತವಾಗಿಯೂ ತೀರ ಸಣ್ಣದು. ಆದರೆ ಇವರದು ಬಹು ವ್ಯಾಪಕವಾದ ಆರ್ಥಿಕ ಕಾರ್ಯಕ್ಷೇತ್ರ. ಒಂದರ್ಥದಲ್ಲಿ ಇಡೀ ಮಾರುಕಟ್ಟೆಯನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡವರು. ಇಂಥ ಉದ್ಯಮಪತಿಗಳೇ ಈ ಭಾರಿ ಮೊತ್ತದ ಸಾಲ ಪಡೆದವರು. ಅಸ್ಸಾಂ, ಒರಿಸ್ಸಾದಂತಹ ಪ್ರದೇಶಗಳಿಗೆ ಈ ಸೌಲಭ್ಯಗಳು ಸಿಗುವುದಿಲ್ಲ. ಇಂಥ ಭಾರಿ ಮೊತ್ತದ ಸಾಲ ಯಾವಾಗಲೂ ಅವರ ಎಟುಕಿನಾಚೆಯದು. ಹಿಂದುಳಿದವರಿಗೆ ದುಡ್ಡು ದುರ್ಲಭ. ಲಾಭ ಸುಭದ್ರವಾಗಿರುವ ದಿಕ್ಕಿನಲ್ಲಿಯೇ ಹಣದ ಹೊಳೆಹರಿಯುವುದು ಸಹಜ. ಭದ್ರತೆ ಸುರಕ್ಷತೆಗಳೇ ಹಣವನ್ನಾಕರ್ಷಿಸುವ ಅಂಶಗಳು, ಅಲ್ಲದೆ, ಬ್ಯಾಂಕಿಂಗ್ ಕಂಪನಿಗಳು ಮತ್ತು ಔದ್ಯಮಿಕ ಬಂಡವಾಳಿಗರ ನಡುವಿನ ಸಂಬಂಧ ಕನಿಷ್ಟವಾಗಿರುವಲ್ಲಿಯೇ ಎಲ್ಲ ಹಣ ಕೇಂದ್ರಿಕೃತಗೊಳ್ಳುತ್ತದೆ, ಇದು ವಾಸ್ತವ ಸ್ಥಿತಿ.

ಇನ್ನು ದಿನ ಬಳಕೆಯ ಪದಾರ್ಥಗಳ ಕೈಗಾರಿಕೆ ಕುರಿತು ಒಂದೆರಡು ಮಾತು ನಮ್ಮ ದೇಶದ ಜನತೆಯ ದೈನಂದಿನ ಬಳಕೆಯ ಅವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ಅದಕ್ಕೆ ಸಂಬಂಧಿಸಿದ ಉದ್ಯಮಗಳ ಸ್ಥಾಪನೆಗೆ, ಯೋಜನೆಗಳಿಗೆ ಹೆಚ್ಚಿನ ಒತ್ತು ಕೊಡಲಾಗಿದೆ. ಹೌದು, ಇದು ಅವಶ್ಯಕವಾಗಿತ್ತು, ಆದರೆ ಇಲ್ಲಿಯೂ ಕೂಡ ಉದ್ಯಮಗಳನ್ನು ಸ್ಥಾಪಿಸುವ ಸ್ಥಳಗಳ ಕುರಿತು ಪುನರ್ ಚಿಂತಿಸಬೇಕಿತ್ತು. ಆ ಕುರಿತು ಇರುವ ನಮ್ಮ ಯೋಜನೆಗಳನ್ನು ಪುನರ್ ರೂಪಿಸಬೇಕಿದೆ. ದಿನಬಳಕೆಯ ವಸ್ತುಗಳ ಕೈಗಾರಿಕೆಗಳು ಸಣ್ಣ ಮತ್ತು ಮಧ್ಯಮ ಪ್ರಮಾಣದಲ್ಲಿ ಸಂಸ್ಥಾಪನೆಗೊಳ್ಳಬೇಕು ಮತ್ತು ಅವು ಇಡೀ ದೇಶದಾದ್ಯಂತ ವ್ಯಾಪಿಸುವಂತೆ ವ್ಯವಸ್ಥೆಗೊಳಿಸಬೇಕು. ಈ ಇಡೀ ಔದ್ಯಮೀಕರಣದ ಪ್ರಕ್ರಿಯೆಯನ್ನು ನಾವು ಈ ದೃಷ್ಟಿಯಿಂದಲೇ ನೋಡಬೇಕಾಗಿದೆ. ಕೊನೆಯದಾಗಿ ಇನ್ನೊಂದು ಮಾತನ್ನು ನಾನು ಹೇಳಬಯಸುತ್ತೇನೆ. ಎರಡು ಸಂಗತಿಗಳ ಕುರಿತು ನಾವು ದೃಢನಿರ್ಧಾರ ತೆಗೆದುಕೊಳ್ಳುವವರೆಗೆ ಈ ಉಪಯುಕ್ತ ಸಮಸ್ಯೆಗಳು ಬಗೆಹರಿಯುವುದಿಲ್ಲ. ಮೊದಲನೆಯದಾಗಿ, ಸಾರ್ವಜನಿಕರಂತಹ ಉದ್ಯಮಗಳು ಅಭಿವೃದ್ಧಿಗೊಳ್ಳಬೇಕು. ಇದಕ್ಕೆ ಒತ್ತುಕೊಡಲು ಕಾರಣವೆಂದರೆ, ಬಂಡವಾಳಶಾಹಿಗಳು ಇದನ್ನೆಂದೂ ಅಭಿವೃದ್ಧಿ ಪಡಿಸಲಾರವು. ಎರಡನೆಯದಾಗಿ, ಔದ್ಯಮಿಕ ಬಂಡವಾಳ ದೇಶದ ತುಂಬೆಲ್ಲ ಸಮಾನವಾಗಿ ವಿತರಣೆಯಾಗುವಂತೆ ನೋಡಿಕೊಳ್ಳಬೇಕು. ಬ್ಯಾಂಕಿಂಗ್ ಉದ್ಯಮವನ್ನು ರಾಷ್ಟ್ರೀಕರಿಸಿ, ಕೇವಲ ನಮ್ಮ ಅರ್ಥವ್ಯವಸ್ಥೆಯ ಯೋಜನೆಯನ್ನು ರೂಪಿಸುವುದರಿಂದ ಮಾತ್ರವಲ್ಲ. ಅದರ ಸಮರ್ಥ ನಿರ್ವಹಣೆ ಮತ್ತು ಆಡಳಿತದ ಮೇಲೂ ನಮ್ಮ ಸರಕಾರ ತನ್ನ ಅಧಿಕಾರವನ್ನು ಸ್ಥಾಪಿಸಿದಾಗ ಮಾತ್ರ ಇದು ಸಾಧ್ಯವಾಗುತ್ತದೆ. ರಾಷ್ಟ್ರದ ಇಡೀ ಆರ್ಥಿಕ ಕ್ಷೇತ್ರದ ಮೇಲೆ ಸರ್ಕಾರದ ಅಂಕುಶ ಹಿಡಿತ ಸಾಧಿಸಿದಾಗ ನಮ್ಮ ತ್ವರಿತ ಔದ್ಯಮೀಕರಣದ ಪ್ರಕ್ರಿಯೆ ಸಾರ್ಥಕವಾಗಲು ಸಾಧ್ಯ.

---

# 4. ಹಿಂದಿ ಭಾಷೆಗೆ ಉತ್ತೇಜನ*

ಮಾನ್ಯ ಉಪಾಧ್ಯಕ್ಷರೆ, ಇಂಥ ವಿಷಯ ಕುರಿತು ಮಾತನಾಡಲು ನಾನು ಅಷ್ಟೇನು ಸಮರ್ಥನಲ್ಲ. ಮೇಲಾಗಿ, ನಮ್ಮ ಮುಂದಿರುವ ಈ ಪ್ರಸ್ತಾಪನೆಯ ವಿವಿಧ ಆಯಾಮಗಳನ್ನು ಕುರಿತು ಅನೇಕ ಜನ ನನ್ನ ಗೆಳೆಯರು ಮಾತನಾಡಲಿದ್ದಾರೆ. ಆದರೆ ನಾನೊಬ್ಬ ಶ್ರೀ ಸಾಮಾನ್ಯನಾಗಿ ನಮ್ಮ ದೇಶದಲ್ಲಿ ಹಿಂದಿ ಭಾಷೆಗೆ ನೀಡಬೇಕಾಗಿರುವ ಪ್ರೋತ್ಸಾಹ ಕುರಿತು ಒಂದಿಷ್ಟು ಹೇಳಲಿಕ್ಕೆ ಇದೆ. ಯಾಕೆಂದರೆ, ಈ ವಿಧೇಯಕದ 6 ನೇ ಪರಿಚ್ಛೇದದಲ್ಲಿ ಸಮ್ಮೇಳನದ ಕಾರ್ಯೋದ್ದೇಶಗಳ ಬಗ್ಗೆ ಹೇಳಲಾಗಿದೆ ಮತ್ತು ಹಿಂದಿ ಭಾಷೆಯ ಪ್ರಚಾರ ಪ್ರೋತ್ಸಾಹಕ್ಕೆ ಸಂಬಂಧಿಸಿದಂತೆ ಅವು ಬಹು ವ್ಯಾಪಕವಾದ ಕ್ಷೇತ್ರವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡಿವೆ.

ಮೊಟ್ಟ ಮೊದಲನೆಯದಾಗಿ, ನಾನು ಹೇಳಬಯಸುವುದೇನೆಂದರೆ ಈ ಒಂದು ನಿರ್ದಿಷ್ಟ ಸಂಸ್ಥೆಯಲ್ಲದೆ ದೇಶದ ಇನ್ನಿತರ ಭಾಷೆಗಳ ಅನೇಕ ಸಂಸ್ಥೆಗಳು ಅಸ್ತಿತ್ವದಲ್ಲಿವೆ. ನಮ್ಮ ಸಂವಿಧಾನದನ್ವಯ ಅವೆಲ್ಲವು ರಾಷ್ಟ್ರಭಾಷೆಗಳಾಗಿವೆ. ಹೀಗಾಗಿ ಆ ಎಲ್ಲ ಭಾಷೆಗಳಿಗೆ ತಮ್ಮದೇಯಾದ ಮಹತ್ವವಿದೆ. ಈ ಎಲ್ಲ ಭಾಷೆಗಳಿಗೂ ಸಮಾನ ಸ್ಥಾನ-ಮಾನ ದೊರೆಯಬೇಕು. ಅಂದರೆ ಈಗ ಈ ಭಾಷೆಗೆ ದೊರೆಯುತ್ತಿರುವ ಮನ್ನಣೆ ಅವಶ್ಯವಿದ್ದರೆ ಆ ಉಳಿದೆಲ್ಲ ಭಾಷೆಗಳಿಗೂ ದೊರೆಯಬೇಕು. ಅವುಗಳಿಗೂ ರಾಷ್ಟ್ರೀಯ ಸಂಸ್ಥೆಯ ಸ್ಥಾನ-ಮಾನ ಅಥವಾ ರಾಷ್ಟ್ರೀಯ ಮಹತ್ವದ ಸಂಸ್ಥೆ ಎಂಬ ಮನ್ನಣೆ ಲಭಿಸಬೇಕು. ಯಾಕೆ ಈ ಮಾತನ್ನು ನಾನು ಹೇಳುತ್ತಿದ್ದೇನೆಂದರೆ, ನಮ್ಮ ದೇಶದಲ್ಲಿ ಇತರ ಭಾಷೆಗಳು ಸಮೃದ್ಧಿಗೊಳ್ಳಬೇಕಿದೆ. ಈ ಭಾಷೆಯಂತೆಯೇ ಅವು ಕೂಡ ಸಂಪನ್ನಗೊಳ್ಳುತ್ತಿರುವ ಭಾಷೆಗಳಾಗಿವೆ. ಇದನ್ನು ನಾನು ಅಲ್ಲಗೆಳೆಯುತ್ತಿಲ್ಲ. ಆದರೆ, ಪ್ರಭುತ್ವವು ಈ ಎಲ್ಲ ಭಾಷೆಗಳ ಪ್ರೋತ್ಸಾಹಕ್ಕೆ ವಿಶೇಷ ಪ್ರಯತ್ನ ಮಾಡಬೇಕು. ಮೇಲಾಗಿ ಇದು ಕೇವಲ ಸರಕಾರದ ಮಟ್ಟದಲ್ಲಿ ನಡೆದರೆ ಸಾಲದು. ಸರಕಾರೇತರ ಮಟ್ಟದಲ್ಲಿಯೂ ಈ ಉತ್ತೇಜನ ನೀಡುವ ಹಿಂದಿ ಸಾಹಿತ್ಯ ಸಮ್ಮೇಳನ-ಕ್ರಿಯೆ ಸದಾ ಜರುಗುತ್ತಿರಬೇಕು.

ಈಗ ಇಲ್ಲೊಂದು ಸಮಸ್ಯೆ, ನಾಳೆ ದಿನ ರಾಷ್ಟ್ರದಾದ್ಯಂತ ಈ ಕುರಿತು ಪ್ರಶ್ನೆಗಳೇಳಬಹುದು. ಈ ನಿರ್ದಿಷ್ಟ ಸಂಸ್ಥೆಯನ್ನು ರಾಷ್ಟ್ರೀಯ ಮಹತ್ವದ ಸಂಸ್ಥೆಯೆಂದು ಪರಿಗಣಿಸುವುದಾದರೆ, ಅದೇ ಮಾತು ಇನ್ನುಳಿದ ಸಂಸ್ಥೆಗಳಿಗೆ ಅನ್ವಯಿಸಲಾರದು. ಉಳಿದ ಇಂಥ ಅನೇಕ ಸಂಸ್ಥೆಗಳಿಗೂ ಇದೇ ಸ್ಥಾನ-ಮಾನ ಯಾಕೆ ಲಭಿಸಬಾರದು ? ಇಂಥ ಪ್ರಶ್ನೆ ಎತ್ತಿದರೆ ನಾವು ಅದಕ್ಕೆ ಸಮಂಜಸವಾದ ಹಾಗೂ ತೃಪ್ತಿಕರವಾದ ಉತ್ತರ ಕೊಡಬೇಕಾಗುತ್ತದೆ.

*ಹಿಂದಿ ಸಾಹಿತ್ಯ ಸಮ್ಮೇಳನ ವಿಧೇಯಕ ಮೇಲಿನ ಚರ್ಚೆಯಿಂದ, ರಾಜ್ಯಸಭೆ 15 ಮಾರ್ಚ್, ಸಿ.ಸಿ. 413-431

ಈ ಸಂಸ್ಥೆಯ ಕಾರ್ಯವಿಧಾನದ ಬಗ್ಗೆ ನಮಗೆ ಅಷ್ಟೇನೂ ಹೆಚ್ಚು ಗೊತ್ತಿಲ್ಲ : ಮೇಲಾಗಿ ಯಾರೂ ಆ ಕುರಿತು ನಮಗೆ ಹೇಳಿಯೂ ಇಲ್ಲ. ಆದಾಗ್ಯೂ ಅದಕ್ಕೆ ಈಗಾಗಲೇ ಅರ್ಧಶತಮಾನದಷ್ಟು ದೀರ್ಘ ಇತಿಹಾಸವುಳ್ಳ ಒಂದು ಸಂಸ್ಥೆಯ ಬಗ್ಗೆ ಚರ್ಚಿಸಬೇಕಾದರೆ ಆ ಜೊತೆ ವಿಜ್ಞಾನಿಗಳು ಅವರ ಅನುಭವಗಳ ಬೆಳಕಿನಲ್ಲಿ ನಡೆಯಬೇಕೆಂಬುದು ಸ್ಪಷ್ಟ. ಈವರೆಗೆ ಈ ಸಂಸ್ಥೆಯ ಕುರಿತು ನಮಗೆ ಗೊತ್ತಾಗಿರುವ ಸಂಗತಿಯೆಂದರೆ, ಅಲ್ಲಿ ಇನ್ನಿತರ ಕ್ಷೇತ್ರಗಳಲ್ಲಿಯಂತೆಯೇ, ಎರಡು ಗುಂಪುಗಳಿದ್ದು, ಪರಸ್ಪರ ಮೇಲಾಟದಲ್ಲಿ ಸಂಸ್ಥೆಗೆ ಒಬ್ಬ ಸರಕಾರಿ ಪಾರುಪತ್ತೆಗಾರರನ್ನು ನೇಮಿಸುವ ಸ್ಥಿತಿ ಬಂದಿತ್ತು ಎಂಬುದು. ಇದು ಯಾವುದೇ ಸಾಂಸ್ಕೃತಿಕ ಸಂಸ್ಥೆಗೆ ಶೋಭೆ ತರುವ ಸಂಗತಿಯಲ್ಲ. ಆದರೆ ಇಂಥ ಪರಿಸ್ಥಿತಿ ಉದ್ಭವಿಸಿದಾಗ ಶಿಕ್ಷಣ ಮಂತ್ರಿಗಳಾಗಲಿ, ಸರಕಾರವಾಗಲಿ ಕಣ್ಣು ಮುಚ್ಚಿ ಕೂಡುವುದು ಸಾಧ್ಯವಿಲ್ಲ. ಅವರು ಸಂಸ್ಥೆಯ ಬಗ್ಗೆ ಕಾಳಜಿ ವಹಿಸಿ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಪ್ರಯತ್ನಿಸಬೇಕು. ಆದರೆ ನಾವು ಸಮಸ್ಯೆಯ, ಪೂರ್ವಾಪರಗಳನ್ನು ಸಮಗ್ರವಾಗಿ ಅರಿತಿರುವುದೂ ಅಷ್ಟೇ ಅವಶ್ಯ. ಡಾ: ಸಪ್ರೂ ಅವರು ನಮಗೆ ಆ ಎರಡು ಗುಂಪಿನ ಬಗ್ಗೆ ತಿಳಿಸಿದ್ದಾರೆ. ರಾಜಕಾರಣದಲ್ಲಾಗಲಿ, ಇಂಥ ಸಂಸ್ಥೆಗಳಲ್ಲಾಗಲಿ, ನಾನು ಗುಂಪುಗಳ ಬಗ್ಗೆ ಕೇಳಿದೊಡನೆಯೇ ನನಗೆ ಭಯವಾಗುತ್ತದೆ. ಏಕೆಂದರೆ, ಮೂಲಭೂತವಾಗಿ ಎಲ್ಲಿಯೋ ಒಂದು ಕಡೆ ಪರಿಸ್ಥಿತಿ ಬಿಗಡಾಯಿಸಿರುತ್ತದೆ. ಆದ್ದರಿಂದ ನಾವು ಸಮಸ್ಯೆಯ ಮೂಲಕ್ಕೇ ಏಟು ಹಾಕದಿದ್ದರೆ ಏನನ್ನು ಸಾಧಿಸಲು ಸಾಧ್ಯವಿಲ್ಲ. ಸರಕಾರವೇನೂ ಇಂಥ ಸಂಸ್ಥೆಗಳಿಗೆ ತನ್ನ ಸಹಾಯದ ಹಸ್ತ ಚಾಚಿ ಪ್ರೋತ್ಸಾಹಿಸಿ ಪೋಷಿಸಬಹುದು. ಆದರೆ ಗುಂಪುಗಳು ಗುಂಪುಗಳಾಗಿಯೇ ಉಳಿದರೆ ಅಥವಾ ಒಂದಿಲ್ಲೊಂದು ಸೋಗಿನಲ್ಲಿ ಆಡಳಿತ ಮಂಡಳಿಗಳಲ್ಲಿ ಸೇರಿಕೊಂಡರೆ ಸಂಸ್ಥೆಯ ಅವನತಿ ಕಟ್ಟಿಟ್ಟಿದ್ದು. ನಾವು ಹೇಳಬಯಸುವುದು ಇದನ್ನೇ. ಹೊಸ ವ್ಯವಸ್ಥೆಯಡಿಯಲ್ಲಿ ಈ ಗುಂಪುಗಳು ಕಾರ್ಯಮಾಡುವ ವಿಧಿ-ವಿಧಾನಗಳ ಮೇಲೆ ನಾವು ಕಣ್ಣಿಡಬೇಕು. ಅಂತೆಯೇ ಸಂಸ್ಥೆಯ ಆಗು-ಹೋಗುಗಳ ಬಗ್ಗೆಯೂ ಅಷ್ಟೇ ಜಾಗರೂಕರಾಗಿರಬೇಕು-ಗುಂಪು-ಗುಂಪುಗಳ ನಡುವಿನ ಸಂಬಂಧ, ಅವುಗಳ ವರ್ತನೆ, ಇತ್ಯಾದಿಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು. ಅಷ್ಟೇ ಅಲ್ಲ ಅವೂ ಉದಾರವಾದಿಗಳಾಗಿವೆಯೋ ಅಥವಾ ಸಾಂಪ್ರದಾಯಿಕ ಕಂದಾಚಾರಿಗಳಾಗಿವೆಯೋ ಒಬ್ಬರು ಮತ್ತೊಬ್ಬರ ಮೇಲೆ ತಮ್ಮ ನಿಲುವು ನಿಟ್ಟುಗಳನ್ನು ಹೇಳಲು ಬಯಸುತ್ತಾರೆಯೇ ಎಂಬಿತ್ಯಾದಿ ಸಂಗತಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಬೇಕು. ಜೊತೆಗೆ, ಈ ಸಂಸ್ಥೆಗಳಿಗೆ ದೊರೆಯುವ ಅನುಕೂಲತೆಗಳನ್ನು ಕೆಲವೇ ಜನರು ದುರುಪಯೋಗ ಪಡಿಸಿಕೊಳ್ಳದಂತೆ, ತಮ್ಮ ಸಂಕುಚಿತ ಧ್ಯೇಯೋದ್ದೇಶಗಳನ್ನು ಈಡೇರಿಸಿಕೊಳ್ಳಲು ಬಳಸದಂತೆ, ಎಚ್ಚರಿಕೆ ವಹಿಸಬೇಕು. ಯಾವುದೇ ಸಂಸ್ಥೆಗೆ ದೊರೆಯುವ ಸಾರ್ವಜನಿಕ ಸಹಾಯ ದುರುಪಯೋಗವಾಗದಂತೆ ಕಾಳಜಿ ವಹಿಸಿಬೇಕು. ಯಾವುದೇ ಒಂದು ಸಂಸ್ಥೆಗೆ ಸರಕಾರ ಮನ್ನಣೆ ನೀಡಿ ಅದರ ಪೋಷಣೆಗೆ ಮುಂದಾಗುವ ಮೊದಲು ಈ ಉಪಯುಕ್ತ ಸಂಗತಿಗಳತ್ತ ಗಮನ ಹರಿಸಬೇಕು. ಇಂಥ ಸಂಸ್ಥೆಗಳಿಗೆ ಸರಕಾರ ಆಶ್ರಯ ನೀಡುವಾಗ ಅದರ ಭವಿಷ್ಯತ್ತಿನ

ಬಗ್ಗೆ ಚಿಂತಿಸ ಬೇಕಾದದ್ದು ಸರಕಾರದ ಕರ್ತವ್ಯ-ಆ ಸಂಸ್ಥೆಗಳ ಕುರಿತು ಕೂಲಂಕುಷವಾಗಿ ತಿಳಿದುಕೊಂಡು ಅವುಗಳ ಕಾರ್ಯವಿಧಾನದ ಬಗ್ಗೆ ಲಿಖಿತರೂಪದಲ್ಲಿ ಮಂಡಿಸಬೇಕು. ಯಾಕೆಂದರೆ, ಸರಕಾರ ಮಂಡಿಸುವ ಇಂಥ ಜ್ಞಾಪನದಿಂದ ಅಂಥ ಸಂಸ್ಥೆಗಳ ಕಾರ್ಯವಿಧಾನಗಳ ಕುರಿತು ಸರಕಾರದ ನಿಲುವುಗಳನ್ನು ತಿಳಿದುಕೊಳ್ಳಲು ನಿಮಗೆ ಸಾಧ್ಯವಾಗುತ್ತವೆ. ಆ ಕುರಿತು ಜಿಜ್ಞಾಸೆ ನಡೆಸಿ ಸೂಕ್ತ ಸಲಹೆ-ಸೂಚನೆಗಳನ್ನು ಕೊಡಲು ಅನುಕೂಲವಾಗುತ್ತದೆ. ಯಾಕೆಂದರೆ ಇದು ಯಾವುದೇ ಒಂದು ಪಕ್ಷಕ್ಕೆ ಸಂಬಂಧಿಸಿದ ವಿಷಯವಲ್ಲ : ಇವು ಎಲ್ಲರಿಗೂ ಸಂಬಂಧಿಸಿದ ಸಾಮಾನ್ಯ ವಿಷಯಗಳಾಗಿವೆ. ಆದ್ದರಿಂದ ಇವುಗಳನ್ನು ಕುರಿತು ಮಾತನಾಡುವಾಗ ನಾವು ಯಾವುದೇ ಒಂದು ಪಕ್ಷದ ನೆಲೆ-ನಿಲುವುಗಳಿಂದ ಮಾತಾಡಬಾರದು. ಮೂರು ನಾಲ್ಕು ಪ್ಯಾರಾಗಳಲ್ಲಿ ಪ್ರಸ್ತಾಪಿಸಲಾಗಿರುವ ಧ್ಯೇಯ-ಧೋರಣೆಗಳ ಕುರಿತು ಹೇಳಿಕೆ ಆ ಸಂಸ್ಥೆ ಇದರಿಂದ ನಮಗವಶ್ಯವಿರುವ ಸಂಗತಿಗಳು ಲಭಿಸಲಾರವು. ಆದ್ದರಿಂದ ಈ ಕುರಿತು ಮಾತನಾಡ ಬಯಸುವ ನಮ್ಮಂಥವರಿಗೆ ವಿಷಯದ ಕೊರತೆಯುಂಟಾಗುತ್ತದೆ. ಮಾಹಿತಿಯ ಅಭಾವದಿಂದಾಗಿ ಇಂಥ ಸಂಸ್ಥೆಗಳ ಕಾರ್ಯವಿಧಾನದ ಬಗ್ಗೆ ನಮ್ಮ [illegible] ನಿಸ್ಸಂಶಯವಾಗಿಯೂ ಪರಿಮಿತವಾಗಿರುತ್ತದೆ. ಈಗ ಹಿಂದಿ ಭಾಷೆಗೆ ಉತ್ತೇಜ[illegible] ನೀಡುವ ಪ್ರಶ್ನೆ ನಮ್ಮ ಮುಂದೆ ಇದೆ. ಹಿಂದಿ ನಮ್ಮ ರಾಷ್ಟ್ರದ ಅಧಿಕೃತ ಭಾಷೆ ಎಂಬುದರ ಬಗ್ಗೆ, ರಾಜ್ಯ ರಾಜ್ಯಗಳ ನಡುವಿನ ಸಂಬಂಧಕ್ಕೆ ಬದಲಾಗುವ ಭಾಷೆ, ಇತ್ಯಾದಿಯೆಂಬುದರ ಬಗ್ಗೆ ಎರಡು ಮಾತಿಲ್ಲ. ಇದರರ್ಥ ಅದು ಉಳಿದೆಲ್ಲ ಭಾಷೆಗಳ ಸ್ಥಾನ ಆಕ್ರಮಿಸಬೇಕೆಂದೇನೂ ಅಲ್ಲ. ಅವುಗಳನ್ನು ಸ್ಥಾನಪಲ್ಲಟಗೊಳಿಸಿ ತಾನೇ ತಾನಾಗಿ ಮೆರೆಯಬೇಕೆಂದೇನೂ ಅಲ್ಲ. ಅದು ಉಳಿದ ಭಾಷೆಗಳ ಜೊತೆ ಸಹವರ್ತಿಯಾಗಿ ಸಹಚರನಾಗಿ ಚಲಿಸಬೇಕಷ್ಟೆ. ಆದರೆ ನಮ್ಮ ದೇಶದಲ್ಲಿ ಅನೇಕ ಭಾಷೆಗಳಿರುವುದರಿಂದ ಅದು ಒಂದು ಸೀಮಿತ ಕ್ಷೇತ್ರದಲ್ಲಿ ಸಂಪರ್ಕ ಭಾಷೆಯಾಗಿ, ಕಾರ್ಯನಿರ್ವಹಿಸುತ್ತದೆ ಮತ್ತು ರಾಷ್ಟ್ರೀಯ ಐಕ್ಯತೆ ಹಾಗೂ ಭಾವೈಕ್ಯತೆಯ ಸಂದರ್ಭದಲ್ಲಿ ಅದು ಅವಶ್ಯಕತೆಯಾಗಿದೆಂಬುದನ್ನೂ ನಾನು ಒಪ್ಪುತ್ತೇನೆ, ಆದರೆ, ಮಾನ್ಯರೆ, ನಾನು, ರಾಷ್ಟ್ರೀಯ ಭಾವೈಕ್ಯತೆ ಎಂಬ ಶಬ್ದಗಳನ್ನು ಬಳಸಿದೆನಾದ್ದರಿಂದ ಆ ಕುರಿತು ಒಂದೆರಡು ಮಾತು ಹೇಳಬಯಸುತ್ತೇನೆ. ನನಗೆ ಗೊತ್ತಿರುವಂತೆ ರಾಷ್ಟ್ರೀಯ ಭಾವೈಕ್ಯತೆಗಾಗಿ ಸಮಿತಿಯೊಂದಿದೆ. ಆ ಸಮಿತಿಯಲ್ಲಿ ಅತ್ಯಂತ ಸಾಂಪ್ರದಾಯಕ ಜನರಿದ್ದಾರೆ. ಆ ಸಮಿತಿಯ ಅಧ್ಯಕ್ಷರಾಗಿರುವ ಡಾ|| ಸಪೂರ್ಣಾನಂದ ಒಬ್ಬ ತುಂಬಾ ಕಂದಾಚಾರ ಹಾಗೂ ಸಂಪ್ರದಾಯಸ್ಥ ವ್ಯಕ್ತಿಯಾಗಿದ್ದಾರೆ. ಅವರ ಬಾಯಿಯಿಂದ ಒಂದೇ ಒಂದು ಶಬ್ದ ಹೊರಬರುವುದೇ ತಡ, ಬದುಕಿನಲ್ಲಿ ಬಿರುಕು ಕಾಣಿಸಿಕೊಳ್ಳುತ್ತದೆ, ಯಾಕೆಂದರೆ ಅವರ ನಡೆ-ನುಡಿ ರಾಜಕೀಯ ಪೂರ್ವಾಗ್ರಹಗಳಿಂದ ಕೂಡಿರುತ್ತವೆ. ಭಾವೈಕ್ಯತೆಯ ಸಮಿತಿಯಲ್ಲಿರುವ ಒಬ್ಬ ವ್ಯಕ್ತಿಯನ್ನು ಕಲ್ಪಿಸಿಕೊಳ್ಳಿ. ಅವನು ಮಾತಾಡಲು ಷುರುಮಾಡುವುದೇ ತಡ ಕಮ್ಯುನಿಸ್ಟ್ ಪಕ್ಷದ ವಿರುದ್ಧ ಅಥವಾ ಆ ಪಕ್ಷ- ಈ ಪಕ್ಷ ಎಂದು ಜರಿಯತೊಡಗುವನು. ಇದು ಎಷ್ಟರ ಮಟ್ಟಿಗೆಯೆಂದರೆ, ನಾವೆಲ್ಲರೂ ದ್ವಿತೀಯ ದರ್ಜೆಯ ನಾಗರೀಕರೇನೋ ಎಂಬ ಭಾವನೆಯುಂಟಾಗುತ್ತದೆ.

ಆದ್ದರಿಂದ ಇಂಥ ವ್ಯಕ್ತಿಗಳನ್ನು ಅಂಥ ಸ್ಥಾನದಲ್ಲಿಡಲೇಬಾರದು. ಜನ-ಮನವನ್ನು ಬೆಸೆದು ಐಕ್ಯತೆಯನ್ನು ಸಾಧಿಸುವ ಜವಾಬ್ದಾರಿಯನ್ನು ಹೊತ್ತು ಯಾವುದೇ ಸಂಸ್ಥೆಯ ನಿಕಾಯಗಳಲ್ಲಿ ಇಂಥ ಸಂಕುಚಿತ ಮನೋಭಾವದ, ಕಂದಾಚಾರಿ ಸಂಪ್ರದಾಯಸ್ಥರನ್ನು ಇಡಬೇಕೆ ? ಎಂದು ನಾನು ಶಿಕ್ಷಣ ಮಂತ್ರಿಗಳನ್ನು ಕೇಳಬಯಸುತ್ತೇನೆ. ಈ ಕುರಿತು ಅವರು ಮತ್ತೊಮ್ಮೆ ಪರಿಶೀಲಿಸುವುದು ಉಚಿತ. ಇದನ್ನು ನಾನು ಯಾಕೆ ಹೇಳುತ್ತಿದ್ದೇನೆಂದರೆ, ಈ ಕುರಿತು ನಮಗೆ ಸಾಕಷ್ಟು ಅನುಭವವಾಗಿದೆ.

ಹಿಂದಿ ಭಾಷೆಗೆ ಉತ್ತೇಜನ ನೀಡಬೇಕೆಂಬುದಲ್ಲಿ ನನಗೆ ಎಳ್ಳಷ್ಟು ಭಿನ್ನಾಭಿಪ್ರಾಯವಿಲ್ಲ. ನಾನು ಆಗಾಗ ಹಿಂದಿಯನ್ನು ವಿರೋಧಿಸುವವರ ಪೈಕಿ ಅಲ್ಲ. ಆದರೆ ಅದೇ ವೇಳೆಗೆ ಈ ಉತ್ತೇಜನ ವಿಧಿ-ವಿಧಾನಗಳನ್ನು ಅನೇಕ ರೀತಿಯಿಂದ ಬದಲಿಸಬೇಕೆಂದು ಬಯಸುತ್ತೇನೆ. ಈ ಬಗ್ಗೆ ಮಾತನಾಡುವಾಗ ನನ್ನ ಮನಸ್ಸಿನಲ್ಲಿ ಯಾವುದೇ ಒಬ್ಬ ವ್ಯಕ್ತಿಯಿಲ್ಲ. ಬದಲಾಗಿ, ಒಂದು ಚಿಂತನಧಾರೆಯ ಬಗ್ಗೆ ನಾನು ಒಂದಿಷ್ಟು ಚರ್ಚಿಸಬಯಸುತ್ತಿದ್ದೇನೆ. ಹೌದು ಹಿಂದಿ ಉತ್ತೇಜನಕ್ಕೆ ಸರ್ವವಿಧದಿಂದಲೂ ನನ್ನ ಬೆಂಬಲವಿದೆ. ಅಷ್ಟೇ ಅಲ್ಲ, ಹಿಂದಿ ಭಾಷೆ ಉತ್ತರೋತ್ತರವಾಗಿ ದೇಶದ ಮೂಲೆ ಮೂಲೆಗೂ ಪಸರಿಸಬೇಕು. ಬೆಂಗಾಲಿ ಮತ್ತು ಹಿಂದಿ ಮಾತನಾಡುವವರ ಅಥವಾ ಮಲೆಯಾಳಿ ಮತ್ತು ಹಿಂದಿ ಮಾತನಾಡುವವರ ಮಧ್ಯೆ ಗಟ್ಟಿಯಾದ ಸಂಬಂಧಗಳು ಕುದುರಬೇಕು. ಆ ಮೂಲಕ ದಕ್ಷಿಣೋತ್ತರಾದಿ ಇಡೀ ದೇಶದಾದ್ಯಂತ ಸಂವಹನದ ಸಾಧನವಾಗಬಲ್ಲ ಭಾಷೆಯಾಗಿ ಅದು ಹೊರಹೊಮ್ಮಬೇಕು ಎಂಬ ಬಯಕೆ ನನ್ನದು. ಬೆಂಗಾಲಿ ಮತ್ತು ಮಲೆಯಾಳಿಗಳು ಹಿಂದಿಯಂತ ಭಾಷೆಯ ಮೂಲಕ ಸಂಪರ್ಕ ಸಾಧಿಸಲು ಸಾಧ್ಯವಾಗಬೇಕು. ಕೆಲವು ಸಮಯದಲ್ಲಿಯೇ ಇದು ನಿಜವಾಗುವ ದಿನ ಬಂದೇ ಬರುತ್ತದೆ. ಆಗ ಮಾತ್ರ ನಾವು ಇಂಗ್ಲೀಷ್‌ನ ತಂಟೆ ಕಡೆದುಕೊಳ್ಳಬಹುದು. ಈ ಎಲ್ಲ ಮಾತಿನ ಬಗ್ಗೆ ನನಗೆ ಸಂಪೂರ್ಣ ಸಮ್ಮತಿ ಇದೆ. ಆದರೆ ಇದನ್ನು ಸಾಧಿಸುವ ಬಗೆ ಎಂತು ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈ ಕುರಿತು ನಾನು ನನ್ನ ಚಿಂತನೆಯನ್ನು ಮಂಡಿಸುತ್ತಿಲ್ಲ ಮೇಲಾಗಿ ಅದರ ಬಗ್ಗೆ ಅಷ್ಟಾಗಿಯೇನೂ ಗೊತ್ತೂ ಇಲ್ಲ. ಆದರೆ ಇಂಥ ಸಂಸ್ಥೆಗಳು ಕೆಲವು ಗುಂಪುಗಳ ನಿಯಂತ್ರಣಕ್ಕೊಳಗಾದರೆ ಅವು ಅನುಸರಿಸುವ ಮಾರ್ಗದ ದೃಷ್ಟಿಯಿಂದ ಸಂಪ್ರದಾಯಸ್ಥವಾಗಿ ಬಿಡುವ ಸಂಭವವಿದೆ. ಭಾವಾವೇಶದ ಭರದಲ್ಲಿ ಅವು ಇತರ ಸಂಗತಿಗಳನ್ನು ಮರೆತು ಬಿಡುತ್ತವೆ. ಅಂದರೆ ಹಿಂದಿ ಭಾಷೆಯೂ ದೇಶದ ತುಂಬೆಲ್ಲಾ ಪಸರಿಸುವಂತಾಗಲು ಇತರ ಭಾಷಾ ಸಮೂಹಗಳನ್ನು ಅಪ್ಪಿಕೊಳ್ಳಬೇಕೆಂಬ ಗೋಜಿಗೇ ಹೋಗುವುದಿಲ್ಲ. ಅಲ್ಲದೇ, ದೇಶದ ಇತರ ಭಾಗಗಳಲ್ಲಿ ಮಾತನಾಡಲ್ಪಡುವ ಭಾಷೆಗಳ ಜೊತೆ ಸಾಧ್ಯವಿದ್ದ ಮಟ್ಟಿಗೆ ಹೊಂದಾಣಿಕೆ ಮಾಡಿಕೊಳ್ಳುವ ಮನೋಭಾವವನ್ನು ತೋರಿಸುವುದಿಲ್ಲ. ಒಂದು ಬಂಗಾಲಿಯೇ ಅಥವಾ ಮಲೆಯಾಳಿಯೇ ಶಬ್ದದ ವಿರುದ್ಧ, ಅಥವಾ ಇಂಗ್ಲೀಷ್ ಶಬ್ದವೊಂದರ ವಿರುದ್ಧ ನೀವು ಯುದ್ಧ ಘೋಷಿಸಿಬಿಟ್ಟರೆ

ಆ ಶಬ್ದ ಹಿಂದಿ ಭಾಷೆಯ ಸಂದರ್ಭದಲ್ಲಿ ಸರಿಯಾಗಿ ಹೊಂದಿಕೊಳ್ಳುವಂತಿದ್ದರೂ - ನೀವ್ರೂ ಖಚಿತವಾಗಿಯೂ ಕಷ್ಟಗಳ ಸರಮಾಲೆ ಸೃಷ್ಟಿಸುತ್ತೀರಿ. ಮೊದಲನೆಯದಾಗಿ, ಬಹು ಸಂಖ್ಯಾತ ಜನರಲ್ಲಿ ಪೂರ್ವಾಗ್ರಹಕ್ಕೆ ದಾರಿಮಾಡಿಕೊಟ್ಟು ಒಂದು ವಿಧಧ ಪ್ರತಿಭಟನೆ ಆವಿಷ್ಕರಿಸುವಂತೆ ಮಾಡಿ, ಆ ಮೂಲಕ ಹಿಂದಿ ಭಾಷೆಯ ತ್ವರಿತ ಪ್ರಸಾರಕ್ಕೆ ಅಡಚಣೆಗಳನ್ನುಂಟು ಮಾಡುತ್ತೀರಿ. ಇಂಥ ಪ್ರವೃತ್ತಿಗಳು ಸ್ಪಷ್ಟವಾಗಿ ಕಾಣಿಸುತ್ತಿರುವುದರಿಂದ ಅವುಗಳ ಬಗ್ಗೆ ನಾನು ಭೀತನಾಗಿದ್ದೇನೆ. ಯಾಕೆಂದರೆ, ಇಂಥ ಪ್ರವೃತ್ತಿಗಳು ಬಹು ಬೇಗನೆ ಎಲ್ಲೆಡೆಗೆ ಹರಡಿ, ಬಹುಬೇಗನೆ ಹಬ್ಬಬಲ್ಲವು. ಇದಕ್ಕೆ ಬದಲಾಗಿ, ನೀವು ಉದಾರವಾಗಿ ಮಾರ್ಗವನ್ನು ಅನುಸರಿಸಬಹುದು. ಅಥವಾ ಅದೇ ವೇಳೆಗೆ ತೀರಾ ಕಟ್ಟುನಿಟ್ಟಿನ ಸಾಂಪ್ರದಾಯಕ ಮಾರ್ಗವನ್ನು ಅನುಸರಿಸಬಹುದು. ಒಮ್ಮೆ ಸಾಂಪ್ರದಾಯಕ ಮಾರ್ಗದಲ್ಲಿ ಹೆಜ್ಜೆ ಇಟ್ಟರೋ ಅದರ ಕಥೆ ಮುಗಿಯಿತು. ಇಡೀಕೆಲಸ ಕಷ್ಟಕರವಾಗಿ ಪರಿಣಮಿಸುತ್ತದೆ. ಅದೊಂದು ಸ್ವಯಂ ಸೋಲಿನ ಪ್ರಕ್ರಿಯೆಯಾಗಿ ಪರ್ಯಾವಸನ ಹೊಂದುತ್ತದೆ. ಯಾಕೆಂದರೆ, ಜನತೆ ಅದರ ವಿರುದ್ಧ ಒಂದು ವಿಧದ ಪ್ರತಿರೋಧವನ್ನು ಒಡ್ಡ ತೊಡಗುತ್ತಾರೆ. ಭವಿಷತ್ತಿನಲ್ಲಿ ಏನೇ ಸಂಭವಿಸಿದ್ದರೂ ಹೀಗಾಗುವುದು ಮಾತ್ರ ಖಚಿತ. ಆದ್ದರಿಂದ ಈಗಾಗಲೇ ನಾವು ಅದನ್ನು ಗಮನದಲ್ಲಿ ಇರಿಸಿಕೊಳ್ಳುವುದು ಉಚಿತ. ಇಲ್ಲಿ ನಾನೇನೂ ಒಬ್ಬ ಪಂಡಿತನಲ್ಲ. ಇತರ, ಅನೇಕ ಜನ ಪಂಡಿತರಿದ್ದಾರೆ. ಆದರೆ ನನ್ನ ಪ್ರಕಾರ ಕೆಲವು ಪಂಡಿತರು ಸಂಪ್ರದಾಯವಾದಿಗಳು- ಅವರ ವ್ಯಕ್ತಿತ್ವಕ್ಕೆ ಗೌರವಿಸುವುದರ ಜೊತೆಗೆ ನಾನು ಹೀಗೆ ಹೇಳಬಹುದಾದರೆ, ನಾನು ದೇಶದ ಉದ್ದಗಲಕ್ಕೂ ಅಡ್ಡಾಡಿದ್ದೇನೆ. ಹಿಂದಿ ಭಾಷೆಗೆ ಈ ರೀತಿಯ ಉತ್ತೇಜನ ಕೊಡುವುದಕ್ಕೆ ಇರುವ ವಿರೋಧಕ್ಕೆ ಕಾರಣಗಳು ಹಲವಾರು. ಅವುಗಳಲ್ಲಿ ಮುಖ್ಯವಾದುದ್ದೇನೆಂದರೇ ಜನತೆಗೆ ಬೇಡವಾದದ್ದೇನೋ ತಮ್ಮ ಮೇಲೆ ಹೇರಲಾಗುತ್ತಿದೆ ಎಂಬ ಭಾವನೆ. ಹೀಗೆ ಹೇರುವ ಕ್ರಿಯೆಯಲ್ಲಿ ತೊಡಗಿದವರಿಗೆ ಅದರ ಅರಿವು ಇರಲಿಕ್ಕಿಲ್ಲ. ಆದರೆ ತೊಂದರೆಯೆಂದರೆ ಯಾರ ಮೇಲೆ ಪ್ರಭಾವ ಬೀರಲು ಉದ್ದೇಶಿಸಲಾಗುತ್ತಿದೆಯೋ ಅವರು ತಮ್ಮ ಮೇಲೆ ಏನನ್ನು ಹೇರಲಾಗುತ್ತಿದೆ ಎಂದು ತಿಳಿಯುತ್ತಿರುವರು. ನಿಜವಾದ ತೊಂದರೆಯೇ ಇದು. ಈಗ ಇದರ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ನಾವು ತಿಳಿಯುವ ನಿಲುವು ವಸ್ತುನಿಷ್ಠವಾಗಿರಬೇಕೇ ವಿನಃ ವ್ಯಕ್ತಿನಿಷ್ಠವಲ್ಲ. ಅಂದರೆ, ಹಿಂದಿ ಭಾಷೆಗೆ ಉತ್ತೇಜನ ಕೊಡುವ ದಿಸೆಯಲ್ಲಿ ನಾವೆಷ್ಟು ಚೆನ್ನಾಗಿ ಕೆಲಸ ಮಾಡುತ್ತಿದ್ದೇವೆ ಎಂಬುದು ಮುಖ್ಯವಲ್ಲ, ಅದಕ್ಕೆ ಪ್ರತಿಯಾಗಿ ನಾನು ದಕ್ಷಿಣ ಭಾರತದಲ್ಲಿ ಹಿಂದಿ ಭಾಷೆಯ ಉತ್ತೇಜನಕ್ಕೆ ವಾಸ್ತವವಾಗಿ ದುಡಿಯುತ್ತಿದ್ದೇನೆಯೋ ನಾನು ಅದಕ್ಕಾಗಿ ಬಳಸುವ ವಿಧಿ-ವಿಧಾನಗಳಿಗೆ, ಅನುಸರಿಸುವ ಮಾರ್ಗಗಳಿಗೆ ತಮಿಳುನಾಡು, ಆಂಧ್ರಪ್ರದೇಶ ಅಥವಾ ಕೇರಳದ ಜನತೆಯ ಪ್ರತಿಕ್ರಿಯೆ ಎಂಥದ್ದು ಎಂಬ ಇತ್ಯಾದಿ ಸಂಗತಿಗಳು ನನ್ನ ಉತ್ತೇಜನ ಕ್ರಿಯೆಯ ನಿರ್ದಿಷ್ಟತೆಗೆ ನಿಜವಾದ ಒರೆಗಲ್ಲುಗಳಾಗಬೇಕು. ಮಾನ್ಯರೆ, ಈ ಸಂದರ್ಭದಲ್ಲಿ ಒಂದು ಮಾತನ್ನು ಸ್ಪಷ್ಟಪಡಿಸಬಯಸುತ್ತೇನೆ. ಈ ದಿಸೆಯಲ್ಲಿ ಕೆಲವು ಹಿಂದಿ ಭಾಷಾ ಬೆಂಬಲಿಗರು, ಅದರ ಪ್ರವರ್ತಕರು ಸರಿಯಾದ ನಿಲುವು ತೆಗೆದುಕೊಳ್ಳುತ್ತಿಲ್ಲ.

ಈ ದಾರಿಯಲ್ಲಿ ಅವರ ಕೊರತೆಗಳು ಎದ್ದುಕಾಣುತ್ತವೆ. ಒಂದಿಲ್ಲೊಂದು ವಿಧದಲ್ಲಿ ಅವರು ವಸ್ತುನಿಷ್ಠ ನಿಲುವಿನಿಂದ ದೂರವೇ ಉಳಿಯುತ್ತಿದ್ದಾರೆ. ಆ ಕುರಿತು ಅವರು ಸಾಕಷ್ಟು ಗಮನ ಹರಿಸುತ್ತಿಲ್ಲ. ಈಗ ನಾವು ಈ ಎಲ್ಲ ಮಾರ್ಗಗಳನ್ನು ಮರೆಯಬಾರದೆಂಬುದು ನನ್ನ ಅನಿಸಿಕೆ.

ನಮ್ಮ ಸಂವಿಧಾನದಲ್ಲಿ ಹಿಂದಿ ಭಾಷೆಯ ಬಗ್ಗೆ ವಿಶೇಷ ಪ್ರಸ್ತಾಪವಿದೆ. ಆದರೆ ಉತ್ತೇಜನಕ್ಕೆ ಬೇಕಾಗುವ ಕಾಲವಾದರೂ ಎಷ್ಟು ? ಅದನ್ನು ಒತ್ತಾಯದಿಂದ ಹೇರುವುದಕ್ಕೆ ಲವಲೇಶವು ನನ್ನ ಒಪ್ಪಿಗೆಯಿಲ್ಲ. ಆದರೆ ಉತ್ತೇಜನದ ಪ್ರಕ್ರಿಯೆ ತೀವ್ರಗೊಳ್ಳಲೆಬೇಕೆಂಬುದು ವಿವಾದವಾದ, ಆದರೆ ಹೇರುವಿಕೆಯಲ್ಲಿ ಉತ್ತೇಜಕರ ಪ್ರಕ್ರಿಯೆಯನ್ನು ನಾವು ಕೇವಲ ಇಂಥ ಸಂಸ್ಥೆಗಳಿಗೆ ಬಿಟ್ಟುಕೊಟ್ಟರೆ - ಹೀಗೆ ಬಿಡಮಾಡುತ್ತಿದ್ದೇವೆಂದು ನನ್ನ ಅಭಿಪ್ರಾಯದಲ್ಲಿ - ಹೆಚ್ಚಿನ ಸಾಧನೆ ಸಾಧ್ಯವಿಲ್ಲ. ಹಿಂದಿ ಭಾಷೆಯ ಉತ್ತೇಜನಕ್ಕೆ ಒಂದು ಕೇಂದ್ರಿಕೃತ ಅಖಂಡ ಶಿಲೆಯಂತಹ ರಚನೆಯಿಂದ ಎಲ್ಲವನ್ನು ಸಾಧಿಸಲು ಸಾಧ್ಯವಿಲ್ಲ. ಅಂದರೆ, ಯಾವುದೋ ಒಂದು ಕೇಂದ್ರ ಸಂಸ್ಥೆಯಿಂದ ಹಿಂದಿ ಭಾಷೆಯ ಉತ್ತೇಜನಕ್ಕೆ ಬೇಕಾಗುವ ಬುದ್ಧಿ, ಜ್ಞಾನ ಮತ್ತು ಪಾಂಡಿತ್ಯವನ್ನು ದೇಶದ ವಿವಿಧೆಡೆ ವ್ಯಾಪಿಸುವಂತೆ ಮಾಡುವುದು ಸಾಧ್ಯವಿಲ್ಲ. ಅದು ತೀರಾ ಸಂಭವನೀಯವಾದ ಮಾತು. ಹಿಂದಿ ಭಾಷೆಯ ಉತ್ತೇಜನಕ್ಕೆ ಒಂದು ಕೇಂದ್ರ ಸಂಸ್ಥೆ ಬೇಕೆನ್ನುವುದೇನೋ ಸರಿ. ಅದು ತುಂಬಾ ಮಹತ್ವದ ಪಾತ್ರ ನಿರ್ವಹಿಸಬೇಕಾಗುತ್ತದೆ ಎಂಬುದು ನಿಸ್ಸಂಶಯ. ಆದರೆ ಇಷ್ಟರಿಂದಲೇ ಎಲ್ಲವನ್ನು ಸಾಧಿಸಲು ಸಾಧ್ಯವಿಲ್ಲ. ದೇಶದ ವಿವಿಧ ಭಾಗಗಳಲ್ಲಿ ಇಂಥ ಕೇಂದ್ರಗಳನ್ನು ಸೃಷ್ಟಿಸಿ, ಅವು ಅಲ್ಲಿಯ ಪರಿಸರ, ಪರಿಸ್ಥಿತಿಗಳಿಗನುಗುಣವಾಗಿ, ಕಾಲದೇಶೋಚಿತವಾದ ಕ್ರಿಯೆಗಳ ಮೂಲಕ ಉತ್ತೇಜನದ ಕೆಲಸ ಸಾರ್ಥಕಗೊಳಿಸಬಲ್ಲವು. ಇದು ತೀರಾ ಮಹತ್ವದ್ದಾಗಿದೆ. ಯಾವುದೋ ಒಂದು ಕೇಂದ್ರ ಸ್ಥಳದಲ್ಲಿರುವ ಮಂದಿರಕ್ಕೆ ದೇಶದ ವಿವಿಧೆಡೆಯಿಂದ ತೀರ್ಥಯಾತ್ರಿಕರು, ಭಕ್ತಾದಿಗಳು ಹರಿದು ಬರಬಹುದು. ಆದರೆ ಹಿಂದಿ ಭಾಷೆಯ ಉತ್ತೇಜನಕ್ಕಾಗಿ ಆವಿಷ್ಕರಿಸುವ ಸಂಸ್ಥೆ ಅಲಹಾಬಾದಿನ ಯಮುನಾ ನದಿಯ ತೀರದ ಮೇಲೋ ಅಥವಾ ಇನ್ನಾವುದೋ ಸ್ಥಳದಲ್ಲಿ - ಎಲ್ಲಿಯೇ ಒಂದಾಣೆ ಒಂದು ಕಡೆ ಸಂಸ್ಥಾಪಿಸಿದರೆ, ಹಿಂದಿ ಭಾಷಾ ಪ್ರೇಮಿಗಳು ಅದರಿಂದ ಆಕರ್ಷಿತರಾಗಿ ಆ ಕಡೆಗೆ ಹಂಬಲಿಸಿ ಬರಲಾರರು. ಹೀಗಾಗಲು ಸಾಧ್ಯವಿಲ್ಲ. ವಾಸ್ತವ ಬದುಕು ಇಂಥದ್ದಾವುದಕ್ಕೂ ಅವಕಾಶ ಮಾಡಿಕೊಡದು. ಯಾಕೆಂದರೆ, ಎಲ್ಲರಿಗೂ ತಮ್ಮ ತಮ್ಮದೇ ಆದ ವೃತ್ತಿ ಉದ್ಯಮಗಳಿರುತ್ತವೆ ಮತ್ತು ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಕ್ಷೇತ್ರದಲ್ಲಿಯೇ ಕೆಲಸ ಮಾಡಬಯಸುತ್ತಾನೆ. ಆದ್ದರಿಂದ ಹಿಂದಿ ಭಾಷೆಯ ಉತ್ತೇಜನ ಮಹಾಮಣಿಯ ಜೊತ್ತ ಒಂದಲ್ಲ ಅನೇಕ ಕೇಂದ್ರಗಳನ್ನು ದೇಶದ ಹಲವಾರು ಭಾಗಗಳಲ್ಲಿ ಸ್ಥಾಪನೆಗೊಳ್ಳುವಂತೆ ಮಾಡುವುದು ಬಹಳ ಮಹತ್ವದ ವಿಷಯವಾಗಿದೆ. ಆದರೆ ಹೀಗೆ ಮಾಡಲಾಗುತ್ತಿದೆ ಎಂದು ನನಗನಿಸುವುದಿಲ್ಲ. ಸರ್ಕಾರ ಇದಕ್ಕಾಗಿ ಒಂದಿಷ್ಟು ಹಣ ಖರ್ಚು ಮಾಡಲೇಬೇಕು

: ಮತ್ತು ಈಗ ಖರ್ಚು ಮಾಡಲಾಗುತ್ತಿದೆ ಎಂಬುದೂ ನನಗೆ ಗೊತ್ತು. ನಮ್ಮ ಭಾಗದಲ್ಲಿ "ಹಿಂದಿ ಪ್ರಚಾರ ಸಮಿತಿ" ಎಂದು ಕರೆಯಲ್ಪಡುವ ಒಂದು ಸಂಸ್ಥೆ ಇದೆ. ಅದು ಅಂಥದ್ದೇನು ಪ್ರಚಾರ ಮಾಡುತ್ತಿದೆಯೋ ನನಗೆ ಗೊತ್ತಿಲ್ಲ. ಆದರೆ ಜನರು ಮಾತ್ರ ಒಂದಿಲ್ಲೊಂದು ವಿಧದಲ್ಲಿ ಅದರ ಬಗ್ಗೆ ತಿರಸ್ಕಾರದ ಭಾವನೆಯೇ ಹೊಂದಿದ್ದಾರೆ. ಯಾವುದು ಸರಿ, ಯಾವುದು ತಪ್ಪೆಂದು ನಾನೇನೂ ಹೇಳುತ್ತಿಲ್ಲ. ಆದರೆ ಹಿಂದಿ ಉತ್ತೇಜನಕ್ಕೆ ಟೊಂಕ ಕಟ್ಟಿ ನಿಂತಿರುವವರು ಒಂದಿಷ್ಟು ಆಳವಾಗಿ ಚಿಂತಿಸಬೇಕಿದೆ. ವಿವಿಧ ರಾಜ್ಯಗಳಲ್ಲಿಯ ಜನತೆ ತಮ್ಮ ಸಂಸ್ಥೆಯ ಬಗ್ಗೆ ಯಾಕೆ ಸಹಾನುಭೂತಿ ಹೊಂದಿಲ್ಲ? ಹಿಂದಿ ಭಾಷಾ ಪ್ರವರ್ತಕರು ಮತ್ತು ದೇಶದ ಇತರ ಭಾಷಿಕರ ನಡುವೆ ಒಂದು ಸೌಹಾರ್ದದ ಸ್ನೇಹಸೇತು ಸ್ಥಾಪಿಸಲು ಏಕೆ ಸಾಧ್ಯವಾಗಿಲ್ಲ ? ಈ ಕುರಿತು ಕೂಲಂಕುಷವಾಗಿ ಅಧ್ಯಯನಿಸಬೇಕಾಗಿದೆ. ತನ್ನಷ್ಟಕ್ಕೆ ತಾನೇ ಎಲ್ಲವೂ ಸರಿಹೋಗುತ್ತದೆಯೆಂಬ ಉದಾಸೀನತೆಯ ನಿಲುವು ಯಾರಿಗೂ ಒಳ್ಳೆಯದನ್ನು ಮಾಡಲಾರದು. ಇಂಥ ಸಮಸ್ಯೆಗಳಿಗೆ ಸಂಬಂಧಿಸಿದ ಮಾರ್ಗ ಧೋರಣೆಗಳ ಸಾಧಕ ಬಾಧಕಗಳಾವುವು ? ಎಂಬ ಕುರಿತು ತಲಸ್ಪರ್ಶಿಯಾದ ಚಿಂತನೆ ನಡೆಯುತ್ತಿಲ್ಲ.

ಮಾನ್ಯರೆ, ಜನತೆಯ ಲಕ್ಷ್ಯವನ್ನು ಅವರವರ ಭಾಷೆಯಿಂದ ಹಿಂದಿ ಭಾಷೆಯಲ್ಲಿ ಆಕರ್ಷಿಸಬೇಕಾದರೆ ಆಯಾ ಜನತೆಯ ಭಾಷಾ ಸಾಹಿತ್ಯದೊಂದಿಗೆ ಒಂದು ವಿಧದ ಸಂಸರ್ಗ ಸ್ಥಾಪಿಸುವುದು ಅವಶ್ಯವಿದೆ. ಉದಾಹರಣೆ : ಪಶ್ಚಿಮ ಬಂಗಾಳದಲ್ಲಿ ಹಿಂದಿ ಪಸರಿಸುವಂತೆ ಮಾಡಬೇಕಾಗಿದೆ ಎಂದಿಟ್ಟುಕೊಳ್ಳಿ. ಆಗ ಸಹಜವಾಗಿಯೇ ನೀವು ಹಿಂದಿ ಸಾಹಿತ್ಯ ಅಷ್ಟೇ ಏಕೆ. ಇನ್ನಿತರ ಭಾಷೆಗಳ ಸಾಹಿತ್ಯದ ಅನೇಕ ಸಂಗತಿಗಳನ್ನು ಬಂಗಾಳೀ ಭಾಷೆಗೆ ಕೊಡುಗೆಯಾಗಿ ನೀಡುವುದರ ಜೊತೆಗೆ ಪ್ರತಿಯಾಗಿ, ಬಂಗಾಲಿ ಭಾಷೆಯಿಂದಲೂ ಸಾಕಷ್ಟು ಪಡೆದುಕೊಳ್ಳಬೇಕಾಗುತ್ತದೆ. ಅಲ್ಲಿಯೂ ಅನೇಕ ಗ್ರಂಥಗಳಿವೆ : ಹಲವಾರು ಜನ ಸಾಹಿತ್ಯದ ದಿಗ್ಗಜರುಗಳು ಇದ್ದಾರೆ. ಅವರೆಲ್ಲರನ್ನು ದೈಹಿಕವಾಗಿ ತೊಡಗಿಸಿಕೊಳ್ಳುವುದು ಅಷ್ಟೇ ಅಲ್ಲ, ಸಾಧ್ಯವಿದ್ದ ಮಟ್ಟಿಗೆ ಬಂಗಾಳಿ ಕಲಾ ಸೃಷ್ಟಿ ಈ ಸಂಸ್ಥೆಗಳು ತಮ್ಮ ವ್ಯಾಪ್ತಿಯ ಜೀವಾಳದಲ್ಲಿ ಕರಗಿಸಿಕೊಳ್ಳಬೇಕು. ಆ ಭಾಷಾ ಸಾಹಿತ್ಯದ ಸತ್ವ - ಸಾರವನ್ನು ಹೃದ್ಗತಮಾಡಿಕೊಳ್ಳಬೇಕು. ಇದು ಅತ್ಯಂತ ಮುಖ್ಯವಾದದ್ದು. ಉದಾಹರಣೆ : ಈ ಸಂಸ್ಥೆ ಕೆಲವು ಬೆಂಗಾಲಿ ಪುಸ್ತಕಗಳನ್ನು ಹಿಂದಿ ಭಾಷೆಗೆ ಅನುವಾದಿಸಬಯಸುತ್ತದೆ ಎಂದಿಟ್ಟುಕೊಳ್ಳಿ. ಆಗ ಮೊದಲನೆಯದಾಗಿ, ಪಶ್ಚಿಮ ಬಂಗಾಳದಲ್ಲಿ ಹಿಂದಿ ಭಾಷೆಯ ಉತ್ತೇಜನ ಸುಗಮಗೊಳಿಸಲು ಮತ್ತು ಎರಡನೆಯದಾಗಿ, ಭಾವೈಕ್ಯತೆಯನ್ನು ಸಾಧಿಸಲು ಅವರು ಈ ಗ್ರಂಥಗಳನ್ನು ಹಿಂದಿ ಮಾತನಾಡುವ ಇತರ ಭಾಗಗಳಿಗೆ ಕಳುಹಿಸಬೇಕು. ಇದಕ್ಕೆ ಪರ್ಯಾಯವಾಗಿ, ಆ ಎಲ್ಲ ಭಾಗಗಳ ಗ್ರಂಥಗಳು ಬೆಂಗಾಳಿ ಭಾಷೆಗೆ ತರ್ಜುಮೆ ಆಗಬೇಕು. ಈಗ ಗ್ರಂಥಗಳ ಆಯ್ಕೆಯ ಪ್ರಶ್ನೆ. ಬಂಗಾಳಿ, ಮಹಾರಾಷ್ಟ್ರ, ತೆಲಗು, ತಮಿಳು, ಮಲೆಯಾಳಂ ಮುಂತಾದ ಭಾಷಾ ಸಾಹಿತ್ಯಗಳ ಎಂಥಾ ಗ್ರಂಥಗಳನ್ನು ಆಯ್ಕೆ ಮಾಡಿಕೊಳ್ಳಬೇಕು ?

ಇದು ತುಂಬಾ ಮಹತ್ವದ್ದು. ಈ ಕುರಿತು ಅಷ್ಟೇನು ಸಂಪ್ರದಾಯವಾದಿಗಳಲ್ಲದ - ಹಾಗೆ ನಾನು ಹೇಳಬಹುದಾದರೆ - ಕೆಲವು ಹಿಂದಿ ಪಂಡಿತರೊಂದಿಗೆ ನಾನು ಮಾತಾಡಿದ್ದೇನೆ. ಅವರು ನನಗೆ ಹೇಳಿದ ಪ್ರಕಾರ ಭಾಷಾಂತರಕ್ಕೆ ಎತ್ತಿಕೊಳ್ಳಲಾಗುವ ಗ್ರಂಥಗಳು ಹೆಚ್ಚಾಗಿ ಸಂಪ್ರದಾಯವಾದಿ ನಿಲುವಿನದವು ಆಗಿರುತ್ತದೆ. ಇಂಥ ಪ್ರವೃತ್ತಿ ಹೆಚ್ಚಾಗಿ ಕಂಡುಬರುತ್ತಿದೆ ಮತ್ತು ನಿಮಗೆ ಗೊತ್ತಿದೆ - ಎಲ್ಲಾ ಸಂಪ್ರದಾಯವಾದಿಗಳು ಒಂದೇ ಸ್ವಭಾವದವರಾಗಿರುತ್ತಾರೆ. ಹಿಂದಿ ಪ್ರಚಾರ ಸಂಸ್ಥೆಗಳಲ್ಲಿಯೂ ಕಂದಾಚಾರಿಗಳು ಬೆಂಗಾಳಿ ಸಾಹಿತ್ಯದ ಸಾಂಪ್ರದಾಯಿಕ ನಿಲುವಿನ ಕೃತಿಗಳನ್ನೇ ಆಯ್ದುಕೊಳ್ಳುವ ಪ್ರವೃತ್ತಿ ಕಂಡುಬರುತ್ತದೆ. ಹೀಗಾಗಿ, ಇಂಥ ಕೃತಿಗಳು ಬಹು ಸಂಖ್ಯಾತರ ಮನಸೂರೆಗೊಳ್ಳುವಲ್ಲಿ ವಿಫಲವಾಗುತ್ತವೆ. [illegible] ಹೆಚ್ಚಿನ ಪ್ರಭಾವ ಬೀರಲು ಸಾಧ್ಯವಾಗುವುದಿಲ್ಲ. ಹೇರಳ ಹಣ ಬೆಂಬಲ [illegible] ಕೈಗೆ ಸಿಕ್ಕ ಕೃತಿಯನ್ನು ಎತ್ತಿಕೊಂಡು ಭಾಷಾಂತರಿಸಿ, ಸಾಕಷ್ಟು ಪ್ರತಿಗಳನ್ನು [illegible]. ಆದರೆ ಜನತೆಯ ಮೇಲೆ ಅದರಿಂದೇನೂ ಪರಿಣಾಮವಾಗುವುದಿಲ್ಲ. [illegible] ದೂರುಗಳಲ್ಲಿ ಒಂದು ಈ ಹಿಂದಿ ಭಾಷೆಯಲ್ಲಿ ಪ್ರಕಟವಾಗುವ ಸಾಹಿತ್ಯ [illegible] ತಳಹದಿ ಇರುವಂತೆ ನೋಡಿಕೊಳ್ಳತಕ್ಕುದು. ಅದು ಸಾಧ್ಯವಿದ್ದಷ್ಟು ಇತರ ಸಾಹಿತ್ಯಗಳ ಸಮೀಪವಾಗಿರಬೇಕು. ಅಷ್ಟೇ ಏಕೆ, ಇತರ ಸಾಹಿತ್ಯಗಳನ್ನು ಅದು ಅಪ್ಪಿಕೊಳ್ಳುವಂತಿರಬೇಕು. ಅಂದರೆ, ಅದು ತನ್ನ ಕೂಪಮಂಡೂಕ ಪ್ರವೃತ್ತಿಯನ್ನು ತ್ಯಜಿಸಬೇಕು. ಯಾಕೆಂದರೆ, ಹಿಂದಿ ಭಾಷೆಗೆ ಉತ್ತೇಜನ ನೀಡುವುದೆಂದರೆ ಹಿಂದಿಯೇತರ ಪ್ರದೇಶದ ಜನತೆ ಹಿಂದಿಯನ್ನು ಅರಿಯುವಂತಾಗಬೇಕು. ಉದಾ : ಮಲೆಯಾಳಂ ಜನತೆ ಹಿಂದಿ ಭಾಷೆಯ ಬಗ್ಗೆ ಏನೂ ತಿಳಿಯದು. ಆದರೆ ಅವರಿಗೆ ತಮ್ಮದೆ ಆದ ಸಮೃದ್ಧ ಭಾಷೆಯಿದೆ: ಹೆಚ್ಚು ಕಡಿಮೆ ಅಷ್ಟೇ ಸಮೃದ್ಧವಾದ ಸಾಹಿತ್ಯವು ಇದೆ. ಈಗ ಅವರ ಭಾಷಾ ಸಾಹಿತ್ಯದ ವಿಸ್ತಾರಗೊಂಡ ಹಿಂದಿಯವರೆಗೂ ತಲುಪುವಂತಾಗಬೇಕು. ಹಿಂದಿ ಭಾಷಾ ಉತ್ತೇಜನ ದೃಷ್ಟಿಯಿಂದ ಇದು ಬಹುಮುಖ್ಯವಾದದ್ದು. ಇಲ್ಲದಿದ್ದರೆ, ಹಿಂದಿ ಭಾಷೆಯ ಉತ್ತೇಜನಕ್ಕಾಗಿ ಕೈಗೊಳ್ಳುವ ಯಾವುದೇ ಕ್ರಮವು ಹಿಂದಿಯನ್ನು ಅವರ ಮೇಲೆ ಹೇರುವ ಹುನ್ನಾರ ಎಂಬ ಸಂಶಯ ಬಾರದೇ ಇರದು - ಹಿಂದಿ ಭಾಷಾ ಪ್ರವರ್ತಕರಿಗೆ ನಿಜವಾಗಿಯೂ ಆ ಉದ್ದೇಶವಿರಲಿಕ್ಕಿಲ್ಲ. ಆ ಮಾತು ಬೇರೆ. ಆದ್ದರಿಂದ ಈ ದಾರಿಯಲ್ಲಿ ಮಾಡಬೇಕಾದದ್ದು ಸಾಕಷ್ಟಿದೆ ಎಂದು ನನ್ನ ಭಾವನೆ.

ಇದಾದ ಮೇಲೆ, ನೀವು ಹೊರತರಬಯಸುವ ಸಾಹಿತ್ಯದ ಸ್ವರೂಪ ಎಂತಹದ್ದಿರಬೇಕೆಂಬ ಪ್ರಶ್ನೆ ಏಳುತ್ತದೆ. ಈಗ ಪ್ರಪಂಚ ತುಂಬಾ ಕ್ರಾಂತಿಶೀಲವಾಗಿದೆ. ಜನಮಾನಸ ನಿಜವಾಗಿಯೂ ಹೊಸ-ಹೊಸ ವಿಚಾರಗಳಿಗಾಗಿ ಹಂಬಲಿಸುತ್ತಿದೆ. ಜನರು ತೀವ್ರಗತಿಯಿಂದ ಬದಲಾಗುತ್ತಿದ್ದಾರೆ. ಅಂದರೆ ಯುವ ಜನತೆ ಹೊಸ ಪರಿಸರದಲ್ಲಿ ಬದುಕುತ್ತಿದ್ದಾರೆ. ಅಂದರೆ ನಮ್ಮ ಗಣ್ಯ ಗೆಳೆಯರು - ಅವರಲ್ಲಿ ಕೆಲವರು ಹಿಂದಿ

ಭಾಷೆಯ ಮಾನವೀಯ ಪ್ರವರ್ತಕರೂ ಇದ್ದಾರೆ - ಬಾಳಿ ಬದುಕಿದ ಪರಿಸರಕ್ಕಿಂತ ಭಿನ್ನವಾದ ಪರಿಸರದಲ್ಲಿ ಇಂದಿನ ಯುವ ಜನತೆ ಜೀವಿಸುತ್ತಿದ್ದಾರೆ. 14 ರಿಂದ 16 ರ ಹರೆಯದ ಯುವ ಜನತೆ ತುಂಬಾ ಆಧುನಿಕ ಜಗತ್ತಿನಲ್ಲಿ ಬದುಕು ಸಾಗಿಸುತ್ತಿದ್ದಾರೆ. ಅವರು ತಮಗೆ ಅಪ್ಯಾಯಮಾನವಾದುದ್ದನ್ನು ಓದ ಬಯಸುತ್ತಾರೆ - ನಾವು ಅಶ್ಲೀಲ ಸಾಹಿತ್ಯದ ಬಗ್ಗೆ ಮಾತನಾಡುತ್ತಿಲ್ಲ. ಯುವಕರು ತಮ್ಮ ಅಭಿರುಚಿಗೆ ಯುಕ್ತವಾದುದ್ದನ್ನು ಓದಬಯಸುತ್ತಿದ್ದಾರೆ. ಅಂದರೆ ಅವರು ಬಯಸುವ ಸಾಹಿತ್ಯದ ಉತ್ತಮ ಆಯಾಮದ ಬಗ್ಗೆ ನಾವಿಲ್ಲಿ ಸೂಚಿಸುತ್ತಿದ್ದೇನೆ. ಇದನ್ನೇ ಬೇರೆ ಮಾತಿನಲ್ಲಿ ಹೇಳುವುದಾದರೆ, ಯುವಕರು ತಮ್ಮ ವಾಸ್ತವ ಬದುಕಿನ ಪುಸ್ತಕದ ಮತ್ತು ಭವಿಷತ್ತಿನ ಅವಶ್ಯಕತೆಗಳನ್ನು ಪೂರೈಸಬಲ್ಲ ಸಾಹಿತ್ಯವನ್ನು ಮಾತ್ರ ನೀವು ಪ್ರಕಟಿಸಬೇಕೆಂದು ಬಯಸುತ್ತಾರೆ. ಇದು ಕೂಡಾ ಬಹಳ ಮಹತ್ವವಿದ್ದು, ನಮ್ಮ ಯುವ ಜನತೆ ಬಾಹ್ಯಾಕಾಶದಲ್ಲಿ ಹಾರಾಡಬಯಸುತ್ತಾರೆ. ಅವರು ಪುರಾಣದ ಇಂದ್ರ ಚಂದ್ರರ ಕಡೆಯಿಂದ ಸಂತೃಪ್ತರಾಗುವುದಿಲ್ಲ. ಮೋಡಗಳೆಡೆಯಿಂದ ಇಂದ್ರ ಗರ್ಜಿಸಿದ್ದು - ಮುಂತಾದ ಪುರಾಣದ ಸಂಗತಿಗಳು ಅವರಿಗೆ ಅಷ್ಟಾಗಿ ರುಚಿಸಲಾರವು. ತಮ್ಮ ಸಾಹಿತ್ಯಗಳಲ್ಲಿರುವ ಇಂತ ಸಂಗತಿಗಳಡಣೆ ಅವರ ಗಮನ ಅಷ್ಟಾಗಿ ಹರಿಯದು. ಪುರಾಣ-ಪುಣ್ಯಕಥೆಗಳು ತಪ್ಪೆಂದು ನಾನು ಹೇಳುತ್ತಿಲ್ಲ. ಅವೂ ಬೇಕು, ಸರಿ, ಆದರೆ ನಾನು ಪ್ರಸಕ್ತ ಯುವಕರ ಮನೋಧರ್ಮದ ಬಗ್ಗೆ ಪ್ರಸ್ತಾಪಿಸುತ್ತಿದ್ದೇನೆ. ಕ್ರಮೇಣ ಅವರ ಮನಸ್ಸು ವೈಜ್ಞಾನಿಕ ವಿಚಾರಗಳೊಂದಿಗೆ ಶೃತಿಗೊಂಡಿದೆ ಎಂದು ಹೇಳಬಯಸುತ್ತಿದ್ದೇನೆ. ಆದ್ದರಿಂದ ನೀವು ಏನೇ ಉತ್ಪಾದಿಸಿದ್ದರೂ ನಿಮ್ಮ ದೃಷ್ಟಿ ಯಾವಾಗಲೂ ಬದಲಾಗುತ್ತಿರುವ ನಿತ್ಯ ಪರಿವರ್ತನೆಗೊಳ್ಳುತ್ತಿರುವ ಮನೋಧರ್ಮ. ಅದಕ್ಕನುಗುಣವಾಗಿ ಬದಲಾಗುತ್ತಿರುವ ಯುವಕರ ಅವಶ್ಯಕತೆ, ಮುಂತಾದವುಗಳ ಮೇಲೆ ನೆಟ್ಟಿರಬೇಕು. ಇಲ್ಲಿಯೂ ಒಂದು ವಿಧದ ದೋಷ ಎದ್ದು ಕಾಣುತ್ತದೆ - ಸಂಪ್ರದಾಯವಾದಿ ನಿಲುವು ಅಡ್ಡಗಾಲು ಹಾಕುತ್ತಿದೆ. ಬಹುಶಃ ಈ ಕಾರಣಕ್ಕಾಗಿಯೇ ನಾವು ಹಿಂದಿ ಭಾಷೆಯ ಉತ್ತೇಜನದ ಸಂದರ್ಭದಲ್ಲಿ ಅನೇಕ ತೊಂದರೆಗಳನ್ನು ಎದುರಿಸುತ್ತಿದ್ದೇವೆ. ತಾತ್ವಿಕವಾಗಿ ಹೇಳುವುದಾದರೆ, "ಸಂಪ್ರದಾಯದ" ಈ ದಾರಿಯಲ್ಲಿ ದೊಡ್ಡ ಬಂಡೆಗಲ್ಲಾಗಿದೆ. ಆದ್ದರಿಂದ ಹಿಂದಿ ಭಾಷಾ ಪ್ರವರ್ತಕರು ಈ ಸಂಪ್ರದಾಯದ ಕಂದರವನ್ನು ದಾಪುಗಾಲಿಕ್ಕಿ ದಾಟಬೇಕಿದೆ. ಅವರು ಅನುಸರಿಸುವ ಮಾರ್ಗದಲ್ಲಷ್ಟೇ ಅಲ್ಲ ಅವರು ಪುರಸ್ಕರಿಸುವ ವಿಚಾರಗಳಲ್ಲಿಯೂ ಸಂಪ್ರದಾಯವಾದದಿಂದ ದೂರ ಸರಿಯಬೇಕಿದೆ. ನಾನಿಲ್ಲಿ ಯಾವುದೇ ದುರುದ್ದೇಶದಿಂದ ಈ ಮಾತನಾಡುತ್ತಿಲ್ಲ. ಆದರೂ ಕೆಲವು ಜನರು ಈ ವಿಷಯದಲ್ಲಿ - ಅವರ ಗುರಿ ಸಾಧನೆಯ ಹಿತ ದೃಷ್ಟಿಯಿಂದ - ಒಂದಿಷ್ಟು ಆತ್ಮಶೋಧನೆ ಮಾಡಿಕೊಳ್ಳಬೇಕಾದದ್ದು ಅತ್ಯಂತ ಅವಶ್ಯವಿದೆ.

ಇಲ್ಲಿ ಈ ವಿಧೇಯಕದ 6 ನೇ ಪರಿಚ್ಛೇದದಡಿಯಲ್ಲಿ ಧ್ಯೇಯ ಧೋರಣೆಗಳ ಕುರಿತು, ಸಾಧಿಸಬೇಕಾದ ಕಾರ್ಯ ಮಾಡಬೇಕಾದ ಕರ್ತವ್ಯಗಳ ಕುರಿತು, ಪ್ರಸ್ತಾಪಿಸಲಾಗಿದೆ.

ಹಿಂದಿ ಭಾಷೆಗೆ ಉತ್ತೇಜನ ನೀಡಿ ಅದನ್ನು ಪ್ರಚಾರ ಮಾಡುವ ಕಾರ್ಯಕ್ಕೆ ಭಗೀರಥ ಪ್ರಯತ್ನವೇ ಬೇಕೆಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಹಾಗಾಗಿ, ಈ ಕ್ಷೇತ್ರದಲ್ಲಿ ಎದುರಾಗುವ ಎಲ್ಲ ಕಠಿಣ ಸಮಸ್ಯೆಗಳನ್ನು ಎದುರಿಸಿ ಈ ಕಾರ್ಯಗಳನ್ನು ಸಾಂಗಗೊಳಿಸುವುದು ಇದೊಂದೇ ಸಂಸ್ಥೆಯಿಂದ ಸಾಧ್ಯವಿಲ್ಲ. ಈ ಸಂಸ್ಥೆ ತನಗೆ ಸಾಧ್ಯವಿದ್ದ ಒಂದಿಷ್ಟನ್ನು ಮಾಡಬಹುದು. ಅದು ನಿಸ್ಸಂಶಯ. ಆದರೆ, ಸರ್ಕಾರವು ಈ ದಾರಿಯಲ್ಲಿ ಚಿಂತಿಸಬೇಕು. ಅದರ ತಳಹದಿಯನ್ನು ಸರಿಪಡಿಸುವ ಕೆಲಸ ಸರ್ಕಾರದ ಹೆಗಲ ಮೇಲಿದೆ. ಆದ್ದರಿಂದ ವಿವಿಧ ರಾಜ್ಯಗಳಲ್ಲಿ ಹಿಂದಿ ಭಾಷೆ ಉತ್ತೇಜನ ಪಡೆದು ವ್ಯಾಪಕವಾಗಿ ಪಸರಿಸುವಂತಾಗಲು ಸರ್ಕಾರ ಸಾಕಷ್ಟು ಸಹಾಯ ಮಾಡಬೇಕು. ಮುಖ್ಯವಾಗಿ ಹಣಕಾಸಿನ ಸಹಾಯದ ಸಮಸ್ಯೆ ಎದುರಾಗುತ್ತದೆ. ಆಯಾ ರಾಜ್ಯ ಸರ್ಕಾರಗಳು ಸೂಚಿಸುವುದೇ ತಡ ಅವು ತಕ್ಷಣವೇ ತಮ್ಮ ಹಣಕಾಸಿನ ತೊಂದರೆಯ ಕಥೆ ಬಿಚ್ಚುತ್ತದೆ ಮತ್ತು ಕೇಂದ್ರದ ತೆರಿಗೆಯ ಹೆಚ್ಚಿನ ಭಾಗ ತಮಗೆ ದೊರೆಯಬೇಕೆಂದು ವಾದಿಸುತ್ತವೆ. ಆದ್ದರಿಂದ ಸ್ವತಃ ಕೇಂದ್ರ ಸರ್ಕಾರವೇ ಈ ಸಂಕೀರ್ಣ ಸಮಸ್ಯೆಯನ್ನು ಬಗೆಹರಿಸುವ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕಾಗಿದೆ. ನಮ್ಮ ಸಂವಿಧಾನದಲ್ಲಿ ಹಿಂದಿ ಭಾಷೆಗೆ ವಿಶೇಷ ಸ್ಥಾನ ಕೊಟ್ಟಿರುವುದರಿಂದ ಸಂವಿಧಾನಿತ ಜವಾಬ್ದಾರಿಯನ್ನು ನಿರ್ವಹಿಸಲು ಕೇಂದ್ರ ಸರ್ಕಾರವೇ ಒಂದಿಷ್ಟು ಹೆಚ್ಚಿನ ಹಣ ಖರ್ಚು ಮಾಡಿ, ಒಂದಿಷ್ಟು ಹೆಚ್ಚಿನ ಸಂಪನ್ಮೂಲಗಳನ್ನು ಬಳಸಿ, ರಾಜ್ಯ ಮಟ್ಟದಲ್ಲಿ ಹಿಂದಿ ಭಾಷೆಗೆ ಸೂಕ್ತ ಬೆಂಬಲ ನೀಡಿ ಅದಕ್ಕೆ ಸಮುಚಿತ ಸ್ಥಾನ ಕಲ್ಪಿಸಿ ಕೊಡಬೇಕು. ಇದು ಆಗಲೇ ಬೇಕಾದ ಕೆಲಸ. ಕೇಂದ್ರ ಸರ್ಕಾರ ಈ ಸಂಸ್ಥೆಯನ್ನು ಒಂದು ರಾಷ್ಟ್ರೀಯ ಮಹತ್ವದ ಸಂಸ್ಥೆಯೆಂದು ಮನ್ನಿಸಿ, ಅದು ತನ್ನ ಬಹು ಮುಖ್ಯ ಕೆಲಸವನ್ನು ನಿರ್ವಹಿಸುತ್ತಿದೆ ಎಂದು ಭಾವಿಸಿದರೆ ಈ ಬಗ್ಗೆ ಸರ್ಕಾರ ತಾನಾಗಿ ಕಲ್ಪಿಸಿಕೊಂಡಿದೆ ಎಂದೇ ಅರ್ಥ. ಈಗ ಕೇಂದ್ರ ಸರ್ಕಾರ ಮಾಡಬೇಕಾಗಿರುವುದೇನೆಂದರೆ, ನಾನು ಈಗಾಗಲೇ ಹೇಳಿದಂತೆ ವಿವಿಧ ರಾಜ್ಯಗಳಲ್ಲಿ ಹಿಂದಿ ಭಾಷಾ ಪ್ರಚಾರ ಕೇಂದ್ರಗಳನ್ನು ಸ್ಥಾಪಿಸಿ ಅಭಿವೃದ್ಧಿ ಪಡಿಸುವುದು ಮತ್ತು ರಾಜ್ಯ ಸರ್ಕಾರಗಳನ್ನೊಳಗೊಂಡಂತೆ ಈ ದಾರಿಯಲ್ಲಿ ಕೆಲಸ ಮಾಡುತ್ತಿರುವ ಎಲ್ಲರಿಗೂ ಸಹಾಯದ ಹಸ್ತ ಚಾಚುವುದು. ಇದು ತುಂಬಾ ಮುಖ್ಯವಾದುದ್ದು. ಅನೇಕ ರಾಜ್ಯಗಳಲ್ಲಿ ಕೆಲಸ ಮಾಡುತ್ತಿರುವ ಹಿಂದಿ ಅಸಕ್ತರು ಕೇಂದ್ರ ಸರ್ಕಾರದಿಂದ ಸಾಕಷ್ಟು ಸಹಾಯ ಒದಗಿ ಬರುತ್ತಿಲ್ಲವೆಂದು ನನಗೆ ಹೇಳಿದ್ದಾರೆ. ಅಷ್ಟೇ ಅಲ್ಲ, ಈ ಬಗ್ಗೆ ಸರ್ಕಾರ ಅನುಸರಿಸುತ್ತಿರುವ ಮಾರ್ಗವೂ ಸರಿಯಾದುದಲ್ಲ ಎಂಬುದನ್ನು ನನ್ನ ಗಮನಕ್ಕೆ ತಂದಿದ್ದಾರೆ. ಮಾರ್ಗದ ಕುರಿತು ಹೇಳುವುದಾದರೆ, ಅದು ಅವರವರ ಅಭಿಪ್ರಾಯಕ್ಕೆ ಸಂಬಂಧಿಸಿದ ಸಂಗತಿ. ಆದರೆ, ಇದಕ್ಕಾಗಿ ಬಳಸಲಾಗುತ್ತಿರುವ ಸಂಪನ್ಮೂಲಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ರಾಜ್ಯ ಸರ್ಕಾರಗಳಿಗೆ ಅಥವಾ ಆಯಾ ರಾಜ್ಯದಲ್ಲಿರುವ ಹಿಂದಿ ಪ್ರಚಾರ ಸಂಸ್ಥೆಗಳಿಗೆ ಸಾಕಷ್ಟು ಸಂಪನ್ಮೂಲ ದೊರೆಯುತ್ತಿಲ್ಲ ಹೀಗಾಗಿ, ಅವರು ತಮ್ಮ ಮುಂದೆ ಇಟ್ಟುಕೊಂಡಿರುವ ಧ್ಯೇಯವನ್ನು - ಹಿಂದಿ ಭಾಷಾ ಪ್ರಚಾರ ಮತ್ತು ಪ್ರಸಾರವನ್ನು - ಸಾಧಿಸಲು ಸಾಧ್ಯವಾಗುತ್ತಿಲ್ಲ.

ನನ್ನ ಈ ಮಾತಿಗೆ ಕೇಂದ್ರ ಸರ್ಕಾರದ ಸಮ್ಮತಿಯಿದೆ ಎಂದು ನಾನು ಭಾವಿಸುತ್ತೇನೆ ಅಷ್ಟೇ ಅಲ್ಲ, ಸ್ವತಃ ಡಾ: ಶ್ರೀಮಾಲಿಯವರು ನನ್ನ ಮಾತನ್ನು ಒಪ್ಪುತ್ತಾರೆ ಎಂಬ ಭರವಸೆಯೂ ನನಗಿದೆ. ಈ ಎಲ್ಲ ಸಂಗತಿಗಳನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ.

ಇನ್ನು ಶಾಲಾ ಕಾಲೇಜುಗಳಲ್ಲಿ ಹಿಂದಿ ಭಾಷೆಯ ಪ್ರಸಾರದ ಪ್ರಶ್ನೆಯ ಕುರಿತು ಒಂದೆರಡು ಮಾತು: ಆಗಾಗ, ಕೆಲವು ಜನರನ್ನು ಭೇಟಿ ಮಾಡಿದಾಗ, ಅದರಲ್ಲಿ ವಿಶೇಷವಾಗಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳನ್ನು ಕಂಡಾಗ, ನಾನು ಈ ಪ್ರಶ್ನೆ ಕೇಳುತ್ತೇನೆ. ಈಗ ನಮ್ಮ ಶಾಲಾ ಕಾಲೇಜುಗಳಲ್ಲಿ ಅನೇಕ ಜನರು ಹಿಂದಿಯನ್ನು ಓದುತ್ತಿದ್ದಾರೆ-ಪಶ್ಚಿಮ ಬಂಗಾಳದ ಶಾಲೆಯಲ್ಲಿಯೂ ಅದನ್ನು ಕಲಿಸಲಾಗುತ್ತಿದೆ. ಹಿಂದೊಮ್ಮೆ ಅದಕ್ಕೆ ಒಂದಿಷ್ಟು ಪ್ರತಿರೋಧವಿತ್ತು. ಈಗ ಎಲ್ಲರೂ ಅದನ್ನು ಕಲಿಯಲು ಹಾತೊರೆಯುತ್ತಿದ್ದಾರೆ. ಆದರೆ ಅಲ್ಲಿಯೂ ಕೂಡಾ ಸಾಕಷ್ಟು ಗಮನ ನೀಡುತ್ತಿಲ್ಲ. ಮೊದಲನೆಯದಾಗಿ, ಸಮರ್ಥ ಶಿಕ್ಷಕರನ್ನು ಒದಗಿಸುವುದಿಲ್ಲ. ಎರಡನೆಯದಾಗಿ, ಹಾಗೋ ಹೀಗೋ ಒಟ್ಟಿನಲ್ಲಿ ಮುಂದುವರಿಸಿಕೊಂಡು ಹೋಗಲಾಗುತ್ತದೆ. ಆದರೆ ಇದು ಬಹಳ ದಿನ ನಡೆಯುವುದಿಲ್ಲ. ಯಾಕೆಂದರೆ, ಸಾರ್ವಜನಿಕ ಸೇವಾ ಆಯೋಗದ ಮತ್ತು ಇತರೇ ಪರೀಕ್ಷೆಗಳಿಗೆ ಕೊಡುವ ಜನರಿಗೆ ಹಿಂದಿ ಕಡ್ಡಾಯ ಗೊಳಿಸಿದ್ದಲ್ಲಿ ಈ "ಹಾಗೋ ಹೀಗೋ ನಡೆಯುವುದಿಲ್ಲ. ಹಿಂದಿ ಇರಲಿ ಬಿಡಲಿ ಅವರು ಅದನ್ನು, ನಾನು ಲ್ಯಾಟಿನ್ ಕಲಿತಂತೆಯೇ, ಕಲಿಯುತ್ತಾರೆ. ನಾನು ಇಂಗ್ಲೆಂಡ್‌ನಲ್ಲಿದ್ದಾಗ ಲ್ಯಾಟಿನ್ ಭಾಷೆ ಅಧ್ಯಯನ ಮಾಡಿದೆ. ಯಾಕೆಂದರೆ ನಾನು ತೆಗೆದುಕೊಂಡ ವಿಷಯಗಳಲ್ಲಿ ಅದು ಕಡ್ಡಾಯವಾಗಿತ್ತು. ಈ ಸಂಗತಿ ಶ್ರೀ ಅಕ್ಬರ್‌ಖಾನ್ ಅವರಿಗೆ ಗೊತ್ತಿದೆ. ಲ್ಯಾಟಿನ್ ಕಡ್ಡಾಯವಾಗಿದ್ದುದ್ದರಿಂದ ಅಭ್ಯಾಸಮಾಡಿದೆ. ಫಲಿತಾಂಶಗಳು ಹೊರಬಿದ್ದ ತಕ್ಷಣವೇ ಎಲ್ಲವನ್ನೂ ಮರೆತಿದ್ದೆ. ಲ್ಯಾಟಿನ್ ಪರೀಕ್ಷೆಯಲ್ಲೇನೋ ಪಾಸಾಗಿದ್ದೆ, ಸರಿ. ಆದರೆ ತಕ್ಷಣವೇ ಎಲ್ಲವೂ ನನ್ನ ಮನಸ್ಸಿಂದ ಮರೆಯಾಗಿತ್ತು. ಈಗ ಲ್ಯಾಟಿನ್ ಭಾಷೆಯ ಒಂದೇ ಒಂದು ಶಬ್ದವು ನನಗೆ ನೆನಪಿಲ್ಲ. ಈಗ ಲ್ಯಾಟಿನ್ ಭಾಷೆಯ ತಲೆಬಾಲ ಗೊತ್ತಿಲ್ಲದ ಸ್ಥಿತಿ ನನ್ನದು. ಡಾ:ಕೆ.ಎಲ್. ಶ್ರೀಮಾಲಿ, ಆಗಿನ ಶಿಕ್ಷಣ ಮಂತ್ರಿಯಾಗಿದ್ದರು. ಒಂದು ಭಾಷೆಗೆ ಉತ್ತೇಜನ ಕೊಡುವ ಪದ್ಧತಿ ಇದಲ್ಲ ಬದಲಾಗಿ, ಇದು ಭಾಷೆಯನ್ನು ಜನಮನದ ಪ್ರಪಾತಕ್ಕೆ ತಳ್ಳುವ ವಿಧಾನವಾಗಿದೆ ಎಂದು ನಾನು ಹೇಳ ಬಯಸುತ್ತೇನೆ. ಹಿಂದಿ ಭಾಷೆಯ ವಿಷಯವನ್ನು ನೀವು ಮಾಡುತ್ತಿರುವುದು ಇದನ್ನೇ.

ಮಾನ್ಯರೆ, ಇತ್ತೀಚಿಗೆ ಇನ್ನೊಂದು ಅಪಾಯಕಾರಿ ಪ್ರವೃತ್ತಿ ಕಾಣಿಸಿಕೊಳ್ಳುತ್ತಿದೆ. ಮತ್ತು ಅದಕ್ಕೆ ಸಂಬಂಧಪಟ್ಟವರೇ ಇದರ ಜವಾಬ್ದಾರಿಯನ್ನು ಹೊರಬೇಕಾಗಿದೆ. ಒಂದೆಡೆ ಇಂಗ್ಲೀಷ್ ಮತ್ತು ಪ್ರಾಂತೀಯ ಭಾಷೆಗಳ ನಡುವೆ ಒಂದು ವಿಧದ ಸಂಘರ್ಷ ಕಾಣಬರುತ್ತಿದೆ. ಇಂಗ್ಲೀಷ್ ಭಾಷೆಯಿಂದ ಪ್ರಾಂತೀಯ ಭಾಷೆಗಳ ಕಡೆಗೆ ಒಲವು ಹೆಚ್ಚಾಗುತ್ತಿದೆ, ಇನ್ನೊಂದೆಡೆ

ಇಂಗ್ಲೀಷ್ ಭಾಷೆಯಿಂದ ಸ್ಥಾನ ಹಿಂದಿ ಆವರಿಸಿಕೊಳ್ಳಲು ಹವಣಿಸುತ್ತಿದೆ. ಕೆಲವು ರಾಜ್ಯಗಳಲ್ಲಿ ಎಲ್ಲಾ ರಾಜ್ಯಗಳೆಂದು ನಾನು ಹೇಳುತ್ತಿಲ್ಲ. ಮೇಲಾಗಿ, ಕೇಂದ್ರ ಭಾರತ ಅಥವಾ ಹಿಂದಿ ಮಾತನಾಡುವ ರಾಜ್ಯಗಳಲ್ಲಿ ಇದು ಸಾಧ್ಯವೂ ಇಲ್ಲ - ಅದರಲ್ಲಿಯೂ ವಿಶೇಷವಾಗಿ, ಉನ್ನತ ಶಿಕ್ಷಣದಲ್ಲಿ ಇಂಗ್ಲೀಷ್‌ನಿಂದ ಪ್ರಾಂತೀಯ ಭಾಷೆಗೆ (ಉದಾ: ಬೆಂಗಾಳ ಭಾಷೆಯಿಂದ ಎಂದು ಇಟ್ಟುಕೊಳ್ಳಿ) ಸ್ಥಿತ್ಯಂತರವಾಗುತ್ತಿರುವುದು ಕಂಡು ಬರುತ್ತಿದೆ. ಇಂಥ ಸಂದರ್ಭದಲ್ಲಿ ತಾಕಲಾಟ ಉದ್ಭವಿಸುತ್ತಿರುವುದನ್ನು ಕಾಣಬಹುದು. ಕೆಲವು ಇಂಗ್ಲೀಷ್ ಪ್ರಿಯರು ಅಂದರೆ, ಇಂಗ್ಲೀಷ್ ಭಾಷೆ ಮಾತ್ರ ನಮ್ಮ ದೇಶವನ್ನು ಒಗ್ಗೂಡಿಸುವ ಭಾಷೆಯಾಗಿದೆ ಎಂದು ಒಪ್ಪುವವರು ಅದು ಈ ದೇಶಗಳಲ್ಲಿ ಸದ್ಯದ ಸ್ಥಿತಿಯಲ್ಲಿಯೇ ನಿರಂತರ ಮುಂದುವರಿಯಬೇಕೆಂದು ಬಯಸುತ್ತಾರೆ. ಇದು ನನಗೆ ಗೊತ್ತಿದೆ. ಇಂಗ್ಲೀಷ್ ಭಾಷೆ ವಿಶೇಷವಾಗಿ ವಿಜ್ಞಾನ ತಂತ್ರಜ್ಞಾನವನ್ನು ತಿಳಿದುಕೊಳ್ಳಲು, ಹೊರ ಜಗತ್ತಿನೊಂದಿಗೆ ಸಂಪರ್ಕ ಸಾಧಿಸಲು ನಮ್ಮ ದೇಶದಲ್ಲಿ ನಿರಂತರವಾಗಿ ಮುಂದುವರಿಯಲೇಬೇಕೆಂಬುದನ್ನು ನಾನು ಒಪ್ಪುವುದಿಲ್ಲ. ಯಾಕೆಂದರೆ, ಜಗತ್ತು ಕೂಡಾ ಭಾಷೆಯ ಆಧಾರದ ಮೇಲೆ ಇಂದು ವಿಭಜನೆಗೊಳ್ಳುತ್ತಿದೆ. ನೀವು ಇಂದು ಪ್ರಪಂಚದ ಒಂದು ಭಾಗಕ್ಕೆ ಹೋದರೆ ಅಲ್ಲಿ ಇಂಗ್ಲೀಷ್ ನಡೆಯುವುದಿಲ್ಲ. ನೀವು ಕಮ್ಯುನಿಸ್ಟರನ್ನು ಇಷ್ಟಪಡಬಹುದು ಅಥವಾ ಪಡಲಿಕ್ಕಿಲ್ಲ. ಆದರೆ ರಷ್ಯಾದಲ್ಲಿ ನೀವು ರಷ್ಯನ್ ಭಾಷೆ ಕಲಿಯಲೇಬೇಕು. ಜಗತ್ತಿನ ಕೆಲವು ಭಾಗಗಳಲ್ಲಿ ಕಮ್ಯುನಿಸಂ ಬಂದರೆ ರಷ್ಯ ದೇಶ ಕೂಡಾ ಉತ್ತಮೋತ್ತಮ ವಿಜ್ಞಾನ, ತಂತ್ರಜ್ಞಾನಿಗಳನ್ನು ಉತ್ಪಾದಿಸಿದರೆ ನೀವು ಏನೂ ಮಾಡುವಂತಿಲ್ಲ. ಇದು ನಿಜ ಸ್ಥಿತಿ ಆದರೂ ಕೆಲವು ಜನಗಳ ವಿಚಾರ ಇಂಗ್ಲೀಷ್ ಇಲ್ಲಿ ಮುಂದುವರಿಯಬೇಕೆಂಬುದು. ಸ್ವತಃ ನನಗೇ ಹಿಂದಿ ಮಾತನಾಡಲು ಬರುವುದಿಲ್ಲ. ನನ್ನ ಚುನಾವಣಾ ಪ್ರಚಾರ ಭಾಷಣಗಳಲ್ಲಿಯೂ ನಾನು ಅನಿವಾರ್ಯವಾಗಿ ಇಂಗ್ಲೀಷನಲ್ಲಿಯೇ ಮಾತನಾಡುತ್ತೇನೆ. ಆಮೇಲೆ ಅದನ್ನು ಪ್ರಾಂತಿಯ ಭಾಷೆಗಳಿಗೆ ಅನುವಾದಿಸಲಾಗುತ್ತದೆ. ಯಾಕೆಂದರೆ, ನನಗೆ ಚೆನ್ನಾಗಿ ಗೊತ್ತು - ನಾನು ಹಿಂದಿ ಮಾತನಾಡಿದರೆ ನಮಗೆ ಬರುವ ಮತಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಅದಕ್ಕಾಗಿ ನಾನು ಎಂದೂ ಹಿಂದಿಯಲ್ಲಿ ಭಾಷಣ ಮಾಡಿಲ್ಲ. ಆದರೂ ನಮ್ಮ ದೇಶದಲ್ಲಿ ತುಂಬಾ ಸೀಮಿತ ಕ್ಷೇತ್ರದಲ್ಲಾದರೂ ಸರಿ, ಹಿಂದಿ ಭಾಷೆ ಮಾತ್ರ ಒಂದು ವಿಧದ ಸಂಪರ್ಕ ಭಾಷೆಯಾಗಿ ಇರಬೇಕೆಂಬುದು ಇವತ್ತಿಗೂ ನನ್ನ ನಿಲುವಾಗಿದೆ. ಹಿಂದಿಯ ಹೊರತು ಬೇರೆ ಯಾವುದೇ ಭಾಷೆ ಈ ಕೆಲಸ ಮಾಡಬಾರದು: ಬೇರೆ ಯಾವುದೇ ಭಾಷೆ ಈ ಉದ್ದೇಶವನ್ನು ಸಾಧಿಸಲಾರದು. ಒಂದು ಸ್ವತಂತ್ರ ದೇಶದ ಜನಗಳಾದ ನಾವು ನಮ್ಮದೇ ಆದ ಶ್ರೀಮಂತ ಸಾಂಸ್ಕೃತಿಕ ಚಳುವಳಿ, ಸಮೃದ್ಧ ಸಾಹಿತ್ಯ ಹಾಗೂ ಭಾಷಾ ಸಂಪತ್ತನ್ನು ಇಟ್ಟುಕೊಂಡು ಯಾವುದೋ ಒಂದು ಪರಭಾಷೆಯು ನಮ್ಮ ದೇಶದ ಸಂಪರ್ಕ ಭಾಷೆ ಆಗಬೇಕೆಂಬುದಾಗಲಿ, ವಿವಿಧ ಭಾಷಿಕ ಜನ ಸಮುದಾಯಗಳನ್ನು ಬೆಳೆಯುವ, ಆ ಮೂಲಕ ರಾಷ್ಟ್ರವನ್ನು ಒಗ್ಗೂಡಿಸುವ ಭಾಷೆಯಾಗಬೇಕೆಂಬುದಾಗಲಿ, ಸರಿಯಲ್ಲ. ನಾವೇಕೆ ವಿದೇಶಿ ಭಾಷೆಯೊಂದಕ್ಕೆ ಜೋತು ಬೀಳಬೇಕು? ಅದು ನಮ್ಮಿಂದ

ಶೀಘ್ರ ತೊಲಗಿದಷ್ಟು ಸರ್ವೋತ್ತಮ. ಇಂಗ್ಲೀಷ್ ಭಾಷೆ ಪದಚ್ಯುತಿಗೊಂಡು ತನ್ನ ಸಿಂಹಾಸನ ತೊರೆಯಬೇಕೆಂದು ನಾನು ಬಯಸುತ್ತೇನೆ.

ಮಾನ್ಯರೆ, ದಕ್ಷಿಣದಲ್ಲಿಯ ನನ್ನ ಗೆಳೆಯರು ನನ್ನನ್ನು ತಪ್ಪಾಗಿ ಅಧ್ಯಯಿಸಲಾರರೆಂದು ಆಶಿಸುತ್ತೇನೆ. ಹಾಗೆಯೇ ನಾನು ಹಿಂದಿ ಭಾಷೆಯ ಕಟ್ಟಾ-ಪಕ್ಷಪಾತಿಯೆಂದೂ ಹಿಂದಿ ಭಾಷಾ ಪ್ರವರ್ತಕರು ಭಾವಿಸದಿರಲಿ; ನನ್ನನ್ನು ಇಬ್ಬರೂ ತಪ್ಪಾಗಿ ತಿಳಿಯುವ ಸಾಧ್ಯತೆ ಇದೆ. ಅದೇ ನನ್ನ ಭಯ. ಮಾನ್ಯರೆ, ಹಿಂದಿ ಉಳಿಯಬೇಕು, ಬೆಳೆಯಬೇಕು. ಆದ್ದರಿಂದ ಸರ್ಕಾರ ಅದರ ಪ್ರಚಾರ ಮತ್ತು ಪ್ರಸಾರಕ್ಕೆ ಅವಶ್ಯವಿರುವ ಎಲ್ಲಾ ಪ್ರಯತ್ನಗಳನ್ನು ಮಾಡಬೇಕು. ಆದರೆ ಅದನ್ನು ನಾವು ಮಾಡುವುದಿಲ್ಲ. ಯಾಕೆ ಗೊತ್ತೆ? ಇಂಗ್ಲೀಷ್‌ನ ಬಗ್ಗೆ ನಮಗೆ ಮೋಹವಿದೆ; ವ್ಯಾಮೋಹವಿದೆ. ಭಾಷೆ ಅಷ್ಟು ಸರಳವಾಗಿ ಸಾಯುವುದಿಲ್ಲವೆಂಬುದು ನನಗೆ ಗೊತ್ತು. ಅಂತೆಯೇ ಅದರ ಬಗ್ಗೆ ಇರುವ ಪ್ರತಿಷ್ಠೆ ಅಷ್ಟು ಬೇಗನೆ ಮರೆಯಾಗುವುದಿಲ್ಲ. ಆದರೆ ಒಂದು ವೇಳೆ ನಾವು ಪ್ಲಾಸಿ ಕದನದಲ್ಲಿ ಗೆದ್ದಿದ್ದೆ ಆದರೆ ನಮ್ಮ ದೇಶದಲ್ಲಿ ಇಂದು ಇಂಗ್ಲೀಷಿಗಿರುವ ಸ್ಥಾನಮಾನ ಇರುತ್ತಿರಲಿಲ್ಲ. ಚಾರಿತ್ರಿಕ ಪರಿಸ್ಥಿತಿಗಳೇ ಇಂಗ್ಲೀಷನ್ನು ಈಗಿನ ಸ್ಥಾನದಲ್ಲಿ ಪ್ರತಿಸ್ಥಾಪಿಸಿವೆ. ಈಗ ನಾವು ಸ್ವತಂತ್ರರಾಗಿದ್ದೇವೆ. ಹಾಗಾಗಿ, ಸಹಜವಾಗಿಯೇ ಇಂಗ್ಲೀಷ್‌ಗೆ ತನ್ನದೇ ಆದ ಸ್ಥಾನ, ಅಂದರೆ, ನಾವು ಅದಕ್ಕೆ ಕೊಡುವ ಸ್ಥಾನ ದೊರೆಯಬೇಕೆ ವಿನಃ ಅದು ಈಗಾಗಲೇ ಪಡೆದುಕೊಂಡಿರುವ ಸ್ಥಾನದಲ್ಲಿ ವಿಜೃಂಭಿಸಬಾರದು. ಹೊರ ಜಗತ್ತಿನೊಡನೆ ಸಂಪರ್ಕ ಸಾಧಿಸಲು, ವಿಜ್ಞಾನ, ತಂತ್ರಜ್ಞಾನದ ಪರಿಣತಿಯನ್ನು ಕರಗತ ಮಾಡಿಕೊಳ್ಳಲು ಹಾಗೂ ಅದನ್ನೊಂದು ಸಾಹಿತ್ಯವಾಗಿ ಅಧ್ಯಯನ ಮಾಡಲು, ಇಂಗ್ಲೀಷ್ ಭಾಷೆ ನಮಗೆ ಬೇಕು. ಹಾಗೆಯೇ ಜರ್ಮನ್ ಭಾಷೆಯನ್ನು ನಾವು ಕಲಿಯಬೇಕು: ರಷ್ಯಿಯನ್ ಭಾಷೆ ಕುರಿತು ಅಧ್ಯಯನ ನಡೆಸಬೇಕು. ಜಗತ್ತಿನಲ್ಲಿ ಅನೇಕ ಸಮರ್ಥ ಭಾಷೆಗಳಿವೆ. ಆದರೆ ಇಂಗ್ಲೀಷ್ ಭಾಷೆ ಎಲ್ಲವುಗಳಿಗಿಂತಲೂ ಹೆಚ್ಚು ವ್ಯಾಪಕವಾಗಿ ಹರಡಿದೆ. ಮೇಲಾಗಿ, ಅದು ನಮ್ಮ ದೇಶದಲ್ಲಿ ಈಗಾಗಲೇ ಮುಂಚೂಣಿಯ ಸ್ಥಾನದಲ್ಲಿದೆ. ಆದ್ದರಿಂದ ಇಂಗ್ಲೀಷ್ ಬಹು ಸರಳವಾಗಿ ನಮಗೆ ಎಟಕುತ್ತದೆ. ಆ ಕಾರಣಕ್ಕಾಗಿಯೇ ಸದ್ಯ ನಾವು ಅದನ್ನು ಉಳಿಸಿಕೊಳ್ಳಬೇಕಾಗಿದೆ. ಅಂದ ಮಾತ್ರಕ್ಕೆ, ಅದು ಸಾರ್ವಕಾಲಿಕ ಭಾಷೆಯಾಗಿ ಉಳಿಯಬೇಕೆಂದೇನೂ ಅಲ್ಲ.

ಮಾನ್ಯರೆ, ಇಂಗ್ಲೀಷ್ ಭಾಷೆ ಅಂತರ್ ಭಾಷೆಯ ವಿಚಾರ ವಿನಿಯಮದ, ಅಂದರೆ ತಮಿಳು ಮತ್ತು ಬೆಂಗಾಲಿಯ ಜನತೆಗಳ ನಡುವೆ ವಿಚಾರ ವಿನಿಮಯ ಮತ್ತು ಪರಸ್ಪರ ತಿಳುವಳಿಕೆಗಾಗಿ ಒಂದು ವಾದದಂತೆ ಬಳಕೆಯಾಗಬೇಕೆಂಬ ವಿಚಾರ ಶುದ್ಧ ತಪ್ಪು. ಆಶ್ಚರ್ಯದ ಸಂಗತಿಯೆಂದರೆ ಆನೇಕ ಜನ ಬಂಗಾಳಿ ಗಣ್ಯರೆಂತೋ ಅಂತೆಯೇ, ತಮಿಳುನಾಡಿನ ಗಣ್ಯರೂ ಇನ್ನೂ ಇಂಥ ಅಭಿಪ್ರಾಯ ಇಟ್ಟುಕೊಂಡಿದ್ದಾರೆ. ಅನತಿ ಕಾಲದಲ್ಲೇ ನೈಜ ತಮಿಳರು ಇಲ್ಲಿ

ರಾಜ್ಯ ಸಭೆಯ ಹೆಸರಿನ ಪಟ್ಟಿಯಲ್ಲಿ ಕಾಣಿಸಿಕೊಳ್ಳಲಿದ್ದಾರೆ. ಅವರಲ್ಲಿ ಶ್ರೀಯುತ ಅಣ್ಣಾದೊರೈ ಒಬ್ಬರು. ಪರಸ್ಪರ ತಿಳುವಳಿಕೆ ಹುಟ್ಟಿಸುವುದು ಇಂಗ್ಲೀಷ್ ಭಾಷೆಯಿಂದ ಮಾತ್ರ ಸಾಧ್ಯ ಎಂಬ ವಿಚಾರ ಸರ್ವಥಾ ತಪ್ಪು. ಇಂಥ ವಿಚಾರವನ್ನು ನಾವು ಹೋಗಲಾಡಿಸಬೇಕಿದೆ: ಇಂಥ ವಿಚಾರದ ವಿರುದ್ಧ ನಾವು ಸಮರ ಸಾರಬೇಕಿದೆ. ಆದರೆ ಈ ಸಮರ ಸಂಘರ್ಷಕ್ಕೆ ದಾರಿ ಮಾಡಿಕೊಡುವ ಬದಲು, ಒಡಂಬಡಿಕೆಯ ಮೂಲಕ ಮನವೊಲಿಸುವ ಮೂಲಕ ಸಾಮರಸ್ಯಕ್ಕೆ ನಾಂದಿ ಹಾಡಬೇಕು. ಹಾಗೆಯೇ ಹಿಂದಿಯ ಪ್ರಸಾರಕ್ಕಾಗಿ ಹೋರಾಡುವಾಗ ನಾವು ಬಳಸುವ ವಿಧಿ ವಿಧಾನಗಳೂ ವಿರೋಧಿಗಳನ್ನು ನಿಶ್ಶಸ್ತ್ರಗೊಳಿಸುವ, ಜನಮನವನ್ನು ಸೂರೆಗೊಳ್ಳುವ, ಸ್ವರೂಪದವುಗಳಾಗಿರಬೇಕು. ಇಂಗ್ಲೀಷ್ ಭಾಷೆಯನ್ನು ಸದ್ಯದ ಸ್ಥಿತಿಯಲ್ಲಿ ಉಳಿಸಿಕೊಂಡು ಭಾರತೀಯ ಭಾಷೆಗಳ ಬೆಳವಣಿಗೆಗೆ ಅದರಲ್ಲಿಯೂ ವಿಶೇಷವಾಗಿ, ಹಿಂದಿಯಂತಹ ಭಾಷೆಯ ಪ್ರಸಾರಕ್ಕೆ ಹಾನಿಯುಂಟು ಮಾಡುವವರ ವಿರುದ್ಧ ನಾವು ತುಂಬಾ ಜಾಗರುಕತೆಯಿಂದ ಶ್ರಮಿಸಬೇಕು. ನಮ್ಮ ಹೋರಾಟ ಯುಕ್ತಾಯುಕ್ತತೆಯ ಪ್ರಜ್ಞೆಯಿಂದ, ವಿವೇಚನೆಯಿಂದ, ಕೂಡಿರಬೇಕು. ಆದ್ದರಿಂದ ಈ ದಿಶೆಯಲ್ಲಿ ನಾವು ತೆಗೆದುಕೊಳ್ಳುವ ನಿಲುವು ಅತ್ಯಂತ ಮಹತ್ವದ್ದು. ಇದು ಕೇವಲ ಒಂದು ಸಂಸ್ಥೆಗೆ ಸಂಬಂಧಿಸಿದ - ಸರ್ಕಾರಿ ಪಾರುಪತ್ತೆದಾರನ ಕೈಯಲ್ಲಿ ಜೀವಿಸುತ್ತಿರುವ ಒಂದು ಸಂಸ್ಥೆಗೆ ಸಂಬಂಧಿಸಿದ ಪ್ರಶ್ನೆಯಲ್ಲ. ಸರಿ, ಈಗೇನೋ ಅದನ್ನು ನೋಡಿಕೊಳ್ಳಲು ಒಂದು ಮಂಡಳಿಯನ್ನು ರಚಿಸಲಾಗಿದೆ. ಹೀಗೆ ಮಾಡುವುದರ ಮೂಲಕ ಪಾರುಪತ್ತೆಗಾರ ಒಳ್ಳೆಯ ಕೆಲಸವನ್ನೇ ಮಾಡಿದ್ದಾನೆ. ಸರ್ಕಾರವು ಈ ಸಂಸ್ಥೆಗೆ ಸಲ್ಲುವ ಎಲ್ಲಾ ಪ್ರೋತ್ಸಾಹ ನೀಡುವುದು ಉಚಿತ. ಆದರೆ ಇಷ್ಟು ಮಾಡಿ ಕೈತೊಳೆದುಕೊಂಡು ಬಿಟ್ಟರೆ ಸಾಲದು. ಡಾ: ಶ್ರೀ ಮಾಲಿಯವರು ಈ ವಿಷಯ ಕುರಿತು ರಾಜ್ಯಮಟ್ಟದಲ್ಲಿಯೂ ಪರಿಶೀಲಿಸಬೇಕೆಂದು ನಾನು, ಅರಿಕೆ ಮಾಡಬಯಸುತ್ತೇನೆ. ಉದಾ: ವಿವಿಧ ರಾಜ್ಯಗಳಿಂದ ಶಿಕ್ಷಣ ತಜ್ಞರನ್ನು ಕರೆಸಿ, ಒಂದು ಸಮಾವೇಶ ನಡೆಸಬೇಕು. ಅದರಲ್ಲಿ ಎಲ್ಲಾ ಭಾಷಾ ಸಮೂಹಗಳ ಪ್ರತಿನಿಧಿಗಳಿದ್ದು ವಿಭಿನ್ನ ವಿಚಾರಧಾರೆಯ ತಜ್ಞರಿಗೂ ಅವಕಾಶ ಮಾಡಿಕೊಡಬೇಕು. ಈ ಎಲ್ಲ ಪರಿಣಿತರ ಸಮ್ಮುಖದಲ್ಲಿ ಹಿಂದಿ ಭಾಷೆಯ ಉತ್ತೇಜನ ಕುರಿತು ಚರ್ಚೆ ಜಿಜ್ಞಾಸೆ ನಡೆಯಬೇಕು. ಮತ್ತು ಆ ಮೂಲಕ ಹೊರಹೊಮ್ಮುವ ಸರ್ವಸಮ್ಮತವಾದ ಕಾರ್ಯಕ್ರಮದ ನೆಲೆಯ ಮೇಲೆ ಹಿಂದಿ ಭಾಷೆ ಉತ್ತರೋತ್ತರವಾಗಿ ಪ್ರಸಾರಗೊಳ್ಳುವಂತೆ ಆಗಬೇಕು. ಹಿಂದಿ ಭಾಷಾವಲಯದೊಳಗೆ ನಾವು ತರಬಯಸುವ ಜನರ ಮನವನ್ನು ಗೆಲ್ಲುವ ಮೂಲಕ ಈ ಕೆಲಸವನ್ನು ಸುಸೂತ್ರವಾಗಿ ಸಾಂಗಗೊಳಿಸಬಹುದು. ಮತ್ತು ಅದಕ್ಕಿರುವ ದಾರಿಯೂ ಇದೊಂದೆ. ಆದರೆ ಇಂಥ ಯಾವುದೇ ಸಭೆ ಸಮ್ಮೇಳನ ಅಥವಾ ಪರಸ್ಪರ ವಿಚಾರ ವಿನಿಮಯದ ಸಮಾವೇಶ ಯಾವಾಗಲಾದರೂ ನಡೆದಿದೆ ಎಂದು ನನಗನಿಸುವುದೇ ಇಲ್ಲ.

ಮಾನ್ಯರೆ, ಹಿಂದಿ ಭಾಷೆಗೆ ಉತ್ತೇಜನ ನೀಡಲು ಅನೇಕ ಶಿಷ್ಯವೇತನಗಳನ್ನು, ಪಾರಿತೋಷಕ ಮುಂತಾದವುಗಳನ್ನು ಸ್ಥಾಪಿಸಲಾಗಿದೆ. ಅಷ್ಟೇ, ಆದರೆ ಹಿಂದಿ ಭಾಷೆಯ ಉತ್ತೇಜನಕ್ಕಾಗಿ ತಮ್ಮದೆ ಆದ ಸಣ್ಣ ರೀತಿಯಲ್ಲಿ ಅಹರ್ನಿಶಿ ದುಡಿಯುತ್ತಿರುವ ಬಹು ಸಂಖ್ಯಾತರ ಬಗ್ಗೆ ಏನು ಹೇಳುವಿರಿ? ಉನ್ನತ ಮಟ್ಟದಲ್ಲಿರುವ ಕೆಲವೇ ಜನರಿಗೆ ಪಾರಿತೋಷಕ ಇತ್ಯಾದಿ ಪ್ರೋತ್ಸಾಹ ನೀಡಿದರೆ ಅದರಿಂದ ಹಿಂದಿಯ ಉದ್ಧಾರವಾಗುವುದಿಲ್ಲ. ಕೆಳಹಂತದಲ್ಲಿ ಹಿಂದಿ ಭಾಷಾ ಮುನ್ನಡೆಗೆ ದುಡಿಯುತ್ತಿರುವ ಹಲವಾರು ಜನರನ್ನು ಗಮನಿಸಿದೆ. ಅವರಿಗೆ ಸೂಕ್ತ ಮನ್ನಣೆ ನೀಡದೆ, ಕೇವಲ ಮೇಲಿನವರ ಮನರಂಜಿಸುತ್ತ ಪದ್ಮಭೂಷಣ ಇತ್ಯಾದಿ ವ್ಯವಹಾರಕ್ಕೇ ಸೀಮಿತಗೊಂಡರೆ ಅದರಿಂದ ಹಿಂದಿ ಭಾಷೆಯ ಕಲ್ಯಾಣವಾಗದು. ಯೋಗ್ಯರಿಗೆ ಪಾರಿತೋಷಕ ನೀಡಬಾರದೆಂದು ನನ್ನ ಅಭಿಪ್ರಾಯವಲ್ಲ. ನಿಸ್ಸಂಶಯವಾಗಿಯೂ ಅದು ನಡೆಯಬೇಕಾದ ಕೆಲಸವೇ. ಆದರೆ ಶಾಲಾ ಕಾಲೇಜುಗಳ ಮಟ್ಟದಲ್ಲಿ ಸಾಹಿತ್ಯ ಬೋಧಿಸುವ, ಭಾಷಾಂತರ ಮೂಲಕ ಭಾಷೆಯ ನೆಲೆಯನ್ನು ಕತ್ತರಿಸುವ-ತಮ್ಮದೇ ಆದ ರೀತಿಯಲ್ಲಿ ಹಿಂದಿ ಭಾಷೆಯ ಉತ್ತೇಜನಕ್ಕಾಗಿ ಶ್ರಮಿಸುತ್ತಿರುವವರ ಬಗ್ಗೆ ನಿಮ್ಮ ನಿಲುವೇನು? ಇಂಥವರನ್ನು ಪ್ರೋತ್ಸಾಹಿಸಿ ಅವರಿಗೆ ಸೂಕ್ತ ಸಂಭಾವನೆ ನೀಡುವುದು, ಸಕಾಲದಲ್ಲಿ ಬಡ್ತಿ ನೀಡುವುದು ನಮ್ಮ ಕರ್ತವ್ಯವಲ್ಲವೆ? ಇಂಥ ಕೆಲಸಗಳಲ್ಲಿ ತೊಡಗಿದವರಿಗೆ ಒಂದಿಷ್ಟು ಸಹಾಯ ಮಾಡುವ ಪ್ರಶ್ನೆ ಇದಲ್ಲ. ವಾಸ್ತವವಾಗಿ ಇದು ಅವರ ಪ್ರತಿಭೆಯನ್ನು ಮನ್ನಿಸಿ ಪುರಸ್ಕರಿಸುವ, ಅವರ ಸಾಧನೆಗಳನ್ನು ಪರಿಗಣಿಸಿ, ರಾಷ್ಟ್ರೀಯ ಮನ್ನಣೆ ನೀಡುವ ಮೂಲಕ ದೇಶ ತಮ್ಮನ್ನು ಸೂಕ್ತವಾಗಿ ಗೌರವಿಸುತ್ತಿದೆ ಎಂಬ ಭಾವನೆ ಅವರಲ್ಲಿ ಬರುವಂತೆ ಮಾಡಬೇಕು. ಇದು ಅತ್ಯಂತ ಮಹತ್ವದ ಕೆಲಸ. ಆದರೆ ದುರ್ದೈವವಶಾತ್ ಸಂಪ್ರದಾಯವಾದಿ ಕಂದಾಚಾರ ಇಲ್ಲಿಯೂ ತನ್ನ ಕೈಹಾಕುತ್ತಿದೆ. ಗೊಡ್ಡು ಸಂಪ್ರದಾಯದ ಕಂದಾಚಾರ ನಮ್ಮ ಜನತೆಯ ಪ್ರಮುಖ ಶತ್ರುವಾಗಿದೆ. ಯೋಗ್ಯರಿಗೆ ಬಡ್ತಿ ನೀಡುವ, ಅವರ ಪ್ರತಿಭೆಯನ್ನು ಮನ್ನಿಸಿ, ಪುರಸ್ಕಾರ ನೀಡಿ ಪ್ರೋತ್ಸಾಹಿಸುವ, ವಿಷಯದಲ್ಲಿಯೂ ಸಂಪ್ರದಾಯವಾದಿ ಕಂದಾಚಾರ ಒಳನುಸುಳಿ ಇಲ್ಲಿಯೂ ತನ್ನದೆ ಆದ ಒಂದು ಸಣ್ಣ ವೃತ್ತವನ್ನು ಸೃಷ್ಟಿಸಿಕೊಳ್ಳುತ್ತಿದೆ. ನಾನು ಹೀಗೇಕೆ ಕೇಳುತ್ತಿದ್ದೇನೆಂದು ನೀವು ಕೇಳಬಹುದು. ಸರಿ, ನಾನು ಹೇಳುವ ಮಾತು ನಿಜವಲ್ಲದಿದ್ದರೆ ನಾನು ತಕ್ಷಣವೇ ನನ್ನ ತಪ್ಪಿಗೆ ಕ್ಷಮೆ ಯಾಚಿಸುತ್ತೇನೆ. ಆದರೆ ಕಲ್ಕತ್ತಾ, ತಮಿಳುನಾಡಿನಂತಹ ಪ್ರದೇಶಗಳಿಗೆ ಹೋಗಿ ನೋಡಿ. ಅದರಲ್ಲಿಯೂ ವಿಶೇಷವಾಗಿ ಮದ್ರಾಸಿನಲ್ಲಿಯ ಪರಿಸ್ಥಿತಿಯನ್ನು ಗಮನಿಸಿ: ಅಲ್ಲಿ ಜನರಿಗೆ ಮಾತನಾಡಿಸಿ ನೋಡಿ: ಆ ಜನರಿಗೆ ತಮ್ಮದೇ ಆದ ಭಾವನೆಗಳಿಗೆ ಕಷ್ಟಕಾರ್ಪಣ್ಯಗಳೂ ಇವೆ. ಇದಕ್ಕೆ ಕಾರಣವೇನು? ಇದೆಲ್ಲವನ್ನು ನಾವು ಬಿಚ್ಚಿಬಗೆದು ನೋಡಬೇಕಾಗಿದೆ.

ಮಾನ್ಯರೆ, ನಮಗಿಂದು ಅಸಂಖ್ಯಾತ ಹಿಂದಿ ಪ್ರವರ್ತಕರು ಬೇಕಾಗಿದ್ದಾರೆ. ಪ್ರಾಂತೀಯ ಭಾಷೆಗಳ ಸಮೃದ್ಧ ಬೆಳವಣಿಗೆಯೊಂದಿಗೆ ಹಿಂದಿ ಭಾಷೆಯ ಪ್ರಚಾರ ಪ್ರಸಾರವನ್ನು

ಬೆಸೆಯಬಲ್ಲ, ಸಮನ್ವಯಗೊಳಿಸಬಲ್ಲ ಪ್ರಗತಿಶೀಲ, ಪ್ರಗತಿಪರ ಮನೋಧರ್ಮದ ಹಿಂದಿ ಪ್ರವರ್ತಕರು ನಮಗಿಂದು ಬೇಕಾಗಿದ್ದಾರೆ. ವಿವಿಧ ರಾಜ್ಯಗಳಲ್ಲಿ, ಅಲ್ಲಿಯ ಭಾಷೆಗಳ ಬೆಳವಣಿಗೆಯೊಂದಿಗೆ ಹಿಂದಿ ಭಾಷಾ ಪ್ರಸರಣವನ್ನು ಶೃತಿಗೊಳಿಸಬಲ್ಲ, ಸರ್ವಭಾಷಾ ಹಿತಕಾರಿ ಸ್ವರಮೇಳ ಹೊರಡಿಸಬಲ್ಲ, ಸಮರ್ಥರು ಈ ಕ್ಷಣದ-ಅವಶ್ಯಕತೆಯಾಗಿದ್ದಾರೆ ಆಗ ಮಾತ್ರ ವಿವಿಧ ರಾಜ್ಯಗಳಲ್ಲಿ ಹಿಂದಿ ಭಾಷೆ ಉತ್ತೇಜನ ಪಡೆಯಲು ಆಶಿಸಬಹುದು. ಅಲ್ಲಿ ಇಲ್ಲಿ. ಕೆಲವು ಸಂಸ್ಥೆಗಳು, ಕೆಲವು ಶಿಕ್ಷಕರು, ಈ ಕೆಲಸ ಕೈಗೆತ್ತಿಕೊಂಡರೆ ಹಿಂದಿ ಭಾಷೆಯ ಉತ್ತೇಜನಕ್ಕೆ ಏನೇನೂ ಸಾಲದು. ಹಾಗೇ ನೋಡಿದರೆ ಇದನ್ನು ಉತ್ತೇಜನ ಕ್ರಿಯೆ ಎಂದು ಹೇಳಲಾಗದು.

ಆದ್ದರಿಂದ ದೇಶದ ಕೆಲವು ನಿರ್ದಿಷ್ಟ ಭಾಗಗಳಲ್ಲಿ ಹಿಂದಿ ಭಾಷೆಯ ಉತ್ತೇಜನಕ್ಕೆ ಎದುರಾಗಬಹುದಾದ ಎದುರಾಗಿರುವ, ಅಡ್ಡಿ-ಅಡಚಣೆಗಳನ್ನು ನಿರಾಕರಿಸುವ ಅವಶ್ಯಕತೆ ಇದೆ. ಆ ದಾರಿಯಲ್ಲಿ ಉದ್ಭವಿಸಬಹುದಾದ ಸಂಘರ್ಷಗಳನ್ನು ತೊಡೆದು ಹಾಕುತ್ತಾ ಇಂಗ್ಲೀಷ್ ಮಾಧ್ಯಮದಿಂದ ಪ್ರಾಂತೀಯ ಭಾಷಾ ಮಾಧ್ಯಮಗಳಿಗೆ ಬದಲಾಗುತ್ತಿರುವ ಪ್ರಕ್ರಿಯೆಗೆ ನಾವು ಪುಷ್ಟಿ ನೀಡಬೇಕು. ನಾವು ಈಗಾಗಲೇ ಹೇಳಿದಂತೆ, ಮತ್ತು ನಾನದನ್ನು ಮತ್ತೊಮ್ಮೆ ಪುನರುಚ್ಚರಿಸಬಯಸುವಂತೆ, ರಾಜ್ಯ ಮಟ್ಟದಲ್ಲಿಯ ಮಾಧ್ಯಮ ಬದಲಾವಣೆಯ ಪ್ರಕ್ರಿಯೆಯನ್ನು ಸಾಧ್ಯವಿದ್ದ ಮಟ್ಟಿಗೆ ತೀವ್ರಗೊಳಿಸಬೇಕು. ನಾವು ಇದನ್ನು ಎಷ್ಟು ತೀವ್ರಗೊಳಿಸುತ್ತೇವೆಯೋ ಅಷ್ಟು ಇದರಿಂದ ಹಿಂದಿ ಭಾಷೆಯ ಉತ್ತೇಜನಕ್ಕೆ ಹೆಚ್ಚಿನ ಸಹಾಯವಾಗುತ್ತದೆ. ಮೇಲಾಗಿ, ಸರ್ಕಾರ ತನ್ನ ಜವಾಬ್ದಾರಿಗಳನ್ನು ಈಚೆಗಿಂತಲೂ ಹೆಚ್ಚು ಪರಿಣಾಮಕಾರಿಯಾಗಿ ನಿರ್ವಹಿಸಲು ಸಾಧ್ಯವಾಗುತ್ತದೆ. ಹಿಂದಿ ಭಾಷೆಯ ಪ್ರಸಾರ ಹಾಗೂ ಪ್ರಾಂತೀಯ ಭಾಷೆಗಳ ಅಭಿವೃದ್ಧಿ ಇವುಗಳ ನಡುವೆ ಯಾವುದೇ ದ್ವಂದ್ವವಿಲ್ಲ. ನಮ್ಮ ದಾರಿ ನಿರ್ದಿಷ್ಟವಾಗಿದ್ದರೆ, ನಾವು ಎರಡನ್ನೂ ಏಕಕಾಲದಲ್ಲಿಯೇ ಸಾಧಿಸಬಹುದು. ಆದ್ದರಿಂದ ಈ ಸಂಗತಿಯನ್ನು ನಾವು ನೆನಪಿಡುವುದು ಒಳ್ಳೆಯದು. ಇನ್ನು ಈ ಕಾರ್ಯವನ್ನು ಜಾರಿಗೊಳಿಸಬಲ್ಲ ಸಿಬ್ಬಂದಿ ಬಳಗದ ಬಗ್ಗೆ ಹೇಳುವುದಾದರೆ, ನನಗೆ ಈ ಕುರಿತು ಹೆಚ್ಚೇನೂ ಗೊತ್ತಿಲ್ಲ. ಈ ಸದನದಲ್ಲಿ ಕೆಲವರಾದರೂ ಆ ಕೆಲಸವನ್ನು ಸಮರ್ಥವಾಗಿ ಮಾಡಬಲ್ಲವರಿದ್ದಾರೆ ಎಂಬುವುದು ಮಾತ್ರ ನನಗೆ ಗೊತ್ತಿದೆ. ಅವರಲ್ಲಿ ಒಂದಿಷ್ಟು ಸಾಂಪ್ರದಾಯಕ ಮನೋಧರ್ಮದ ಛಾಯೆ ಇರಬಹುದು. ಆದರೆ ಕ್ರಮೇಣ ನಮ್ಮ ಪ್ರೀತಿ-ವಿಶ್ವಾಸಗಳಿಂದ, ಒಡಗೂಡಿದ ಸಂಪರ್ಕದ ಮೂಲಕ ಅವರು ಅದನ್ನು ಮಟ್ಟ ಮೀರಿ ನಿಲ್ಲಬಲ್ಲರೆಂಬ ನಂಬುಗೆ ನನ್ನದು. ಆದರೆ ಕಟ್ಟಾ ಸಂಪ್ರದಾಯವಾದಿಗಳು ಕೇವಲ ರಾಜಕಾರಣದಲ್ಲಿ ಅಥವಾ ಇಂಗ್ಲೆಂಡಿನ ರಾಜಕಾರಣದಲ್ಲಿ ಮಾತ್ರ ಇದ್ದಾರೆಂದು ನಾನು ಹೇಳುತ್ತಿಲ್ಲ.

ಸಾಹಿತ್ಯ, ಭಾಷೆಗಳ ಕ್ಷೇತ್ರಗಳಲ್ಲೂ ಕಟ್ಟಾ ಕಂದಾಚಾರಿ, ಸಂಪ್ರದಾಯವಾದಿಗಳನ್ನು ಕಾಣಬಹುದು. ಭಾಷೆ ಮತ್ತು ಸಂಸ್ಕೃತಿಯ ಅಭಿವೃದ್ಧಿ ದೃಷ್ಟಿಯಿಂದ ಇಂಥ ಸಂಪ್ರದಾಯವಾದಿಗಳು_ಮೇಲುಗೈ ಪಡೆಯುವುದು ತುಂಬಾ ಅಪಾಯಕಾರಿಯಾದದ್ದು. ಆದ್ದರಿಂದ ಇಂಥ ಕ್ಷೇತ್ರಗಳಲ್ಲಿ ವಿಶಾಲ ಹೃದಯದ ಉದಾರವಾದಿ ನಿಲುವಿನ ಜನರಿರಬೇಕೆಂಬುದು ನನ್ನ ಅಭಿಮತ. ಹೊಸ ಹೊಸ ವಿಚಾರಗಳಿಗೆ ಮುಕ್ತವಾಗಿ ತೆರೆದುಕೊಳ್ಳುವ, ಭೂತಕ್ಕೆ ಜೋತು ಬೀಳದೆ, ಭವಿಷ್ಯತ್ತಿನೆಡೆಗೆ ದೃಷ್ಟಿ ಚಾಚುವ ವಿಮುಕ್ತ ಮನಸ್ಸುಗಳು ಈ ಕ್ಷೇತ್ರದಲ್ಲಿರುವುದು ಉಚಿತ. ಆದ್ದರಿಂದ ನಾನು ಡಾ. ಶ್ರೀಮಾಲಿಯವರಿಗೆ ಕೇಳಿಕೊಳ್ಳುವುದೇನೆಂದರೆ, ಇಂಥ ಸಂಸ್ಥೆಗಳಿಗೆ ಕಾರ್ಯದರ್ಶಿ ಇತ್ಯಾದಿಗಳನ್ನು ನೇಮಿಸುವಾಗ ಈ ಎಲ್ಲ ಸಂಗತಿಗಳನ್ನು ಗಮನದಲ್ಲಿರಿಸಬೇಕು. ಯಾಕೆಂದರೆ, ಕೆಲವು 'ಹಿಂದಿ ಭಾಷಾ ಉದ್ಧಾರದುರಂಧರ ಹೆಸರು ಕೇಳಿದರೆ ಸಾಕು. ದೇಶದ ಇತರ ಭಾಗದ ಜನರಲ್ಲಿ ಭೀತಿ ಅಂಕುರಿಸುತ್ತದೆ. ಇದನ್ನು ನಾನೇ ಗಮನಿಸಿದ್ದೇನೆ. ಇಂಥ ವ್ಯಕ್ತಿಗಳು ತುಂಬಾ ಗೌರವಾರ್ಹರಾಗಿರಬಹುದು. ಅಷ್ಟೇ ಏಕೆ, ದೈವಾಂಶ ಸಂಭೂತರಂತೆ ಪೂಜ್ಯರೂ ಆಗಿರಬಹುದು. ಆದರೆ ಹಿಂದಿ ಮಾತನಾಡದ ಕೆಲವು ಭಾಗಗಳಲ್ಲಿ ಇವರ ಹೆಸರು ಉಚ್ಚರಿಸಿದರೂ ಸಾಕು, ಜನ ಜಿಗುಪ್ಸೆಗೊಳ್ಳುವರು: ಭಯ-ಭೀತಿಯಿಂದ ವಿಹ್ವಲಗೊಳ್ಳುವರು. ಹೀಗೆಂದ ಮಾತ್ರಕ್ಕೆ, ಜನರ ವರ್ತನೆ ಯಾವಾಗಲೂ ಸರಿಯಾಗಿಯೇ ಇರುತ್ತದೆಂದು ನಾನು ಹೇಳುತ್ತಿಲ್ಲ. ಆದರೆ ಜನತೆಯ ಪ್ರತಿಕ್ರಿಯೆ ಮಾತ್ರ ಹೀಗಿದೆ ಎಂದು ನಿಮ್ಮ ಗಮನಕ್ಕೆ ತರಬಯಸುತ್ತಿದ್ದೇನೆ. ಬಹುಸಂಖ್ಯಾತ ಜನತೆಯನ್ನು ತಮ್ಮೆಡೆಗೆ ಸೆಳೆಯಬೇಕಾಗಿರುವ ಅವರ ವಿಶ್ವಾಸಕ್ಕೆ ಪಾತ್ರರಾಗಿ ಅವರ ಮನಗೆಲ್ಲಬೇಕಾಗಿರುವ ಹಿಂದಿ ಉತ್ತೇಜನಕಾರರು ಅವರಲ್ಲಿ ಭಾರೀ ಭೀತಿ ಹುಟ್ಟಿಸುವ ಮೂಲಕ, ಜಿಗುಪ್ಸೆ ಚಿಮ್ಮಿಸುವ ಮೂಲಕ, ತಮ್ಮ ಕೆಲಸದಲ್ಲಿ ಮುನ್ನಡೆ ಸಾಧಿಸಲಾರರು. ನಾನು ಇಲ್ಲಿ ಅಂಥವರ ಹೆಸರನ್ನು ಹೇಳಬಯಸುವುದಿಲ್ಲವಾದ್ದರಿಂದ ಈ ವಿಷಯವನ್ನು ಹೆಚ್ಚಿಗೆ ಬೆಳೆಸದೆ ಇಲ್ಲಿಗೆ ಮುಗಿಸಬಯಸುತ್ತೇನೆ. ಆದರೆ ನಾನು ಯಾರನ್ನು ಸೂಚಿಸುತ್ತಿದ್ದೇನೆ ಎನ್ನುವುದು ಸ್ಪಷ್ಟವಾಗಿಯೇ ಇದೆ. ಪ್ರಾಯಶಃ ಶಿಕ್ಷಣ ಮಂತ್ರಿಗಳು ಹಾಗೂ ಇತರ ಕೆಲವರು ತಿಳಿದುಕೊಂಡಿರಲೂಬಹುದು.

ದಿವಾನ್ ಚಮನ್‌ಲಾಲರು ಇಲ್ಲಿದ್ದಾರೆ. ಅವರು ಆಕ್ಸ್‌ಫರ್ಡ್‌ನಲ್ಲಿ ಇಂಗ್ಲೀಷ್ ಕಲಿತವರು. ಅಂತೆಯೇ ಹಿಂದಿಯಲ್ಲಿ ಸಮಾನ ಪರಿಣತಿ ಸಾಧಿಸಿದವರು. ಇವರು ಇಂಥ ವಿಷಯದಲ್ಲಿ ಸಂಪ್ರದಾಯವಾದಿಗಳಾಗಿರಲಾರರೆಂದು ನನ್ನ ಭಾವನೆ. ಹಾಗೆಯೇ ಹಿಂದಿ ಅಥವಾ ಇಂಗ್ಲೀಷ್‌ನಲ್ಲಿ ಅವರ ಪಾಂಡಿತ್ಯಕ್ಕೆ ಏನೂ ಕಡಿಮೆಯಿಲ್ಲ. ಇಂಥ ಕೆಲಸದಲ್ಲಿ ಇನ್ನು ಎಷ್ಟು ಜನ ತೊಡಗಿಸಿಕೊಂಡಿದ್ದಾರೆ ಎನ್ನುವುದು ನನಗೆ ಗೊತ್ತಿದೆ. ದಿವಾನ್ ಚಮನ್ ಲಾಲರು ರಾಜಕೀಯವಾಗಿ ನನ್ನ ಮಾರ್ಗದವರಲ್ಲ. ಆದರೂ ಈ ವಿಷಯ ಕುರಿತು ಅವರಲ್ಲಿ ನನಗೆ ಅಪಾರ ನಂಬುಗೆ ಇದೆ. ನಾನು ಅದರಲ್ಲಿ ಇರಬಯಸುವುದಿಲ್ಲ.

ಯಾಕೆಂದರೆ ದಿವಾನ್ ಚಮನ್‌ಲಾಲರು ಅವರ ವ್ಯಕ್ತಿತ್ವದಲ್ಲಿ ಗತದ ಉತ್ತಮಾಂಶಗಳು, ಅರ್ಥಪೂರ್ಣ ವರ್ತಮಾನದ ಸಂಗತಿಗಳು ಮತ್ತು ಉಜ್ವಲ ಭವಿಷ್ಯತ್ತಿನ ಅವಶ್ಯಕತೆಗಳು-ಈ ಎಲ್ಲವೂ ಸಮುಚಿತವಾಗಿ ಸಮಾವೇಶಗೊಂಡಿವೆ. ಪಶ್ಚಿಮ ಬಂಗಾಳದಲ್ಲಿ ಬಂಗಾಳಿ ಭಾಷೆಯ ಕೆಲವು ಪ್ರವರ್ತಕರು ನನಗೆ ಗೊತ್ತಿದ್ದಾರೆ. ಅವರು ಸಂಸ್ಕೃತಿ ಭೂಯಿಷ್ಠವಾದ ಬಂಗಾಳಿ ಭಾಷೆಯನ್ನು ಬೆಳೆಸಲು ಪ್ರಯತ್ನಿಸಿದರು. ಇದು ಯಾವ ಮಟ್ಟಿಗೆ ಹೋಯಿತೆಂದರೆ, ಎಲ್ಲರೂ ಅದನ್ನು ಸಾರಾಸಗಟಾಗಿ ತಿರಸ್ಕರಿಸಿದರು. ಆಮೇಲೆ ಇಂಥ 'ನಖಶಿಖಾಂತ ಸಂಸ್ಕೃತಿ ಪ್ರಿಯ' ಪ್ರಾಧ್ಯಾಪಕರು ಏನೂ ಒಳ್ಳೆಯದನ್ನು ಸಾಧಿಸಲಾರರೆಂಬುದು ಮನದಟ್ಟಾಯಿತು. ಹಳೆಯ ಸಂಸ್ಕೃತಿ 'ಕಾಲ'ದಿಂದ ಹೊರಬಂದ ಇವರು ಅರ್ಥಪೂರ್ಣವಾದದ್ದು ಏನನ್ನೂ ಸಾಧಿಸಲಾರರೆಂಬುದು ಕ್ರಮೇಣ ಸ್ಪಷ್ಟವಾಗತೊಡಗಿತು. ಸರಿ, ನಮಗೆ ಸಂಸ್ಕೃತ ಬೇಕು, ಮತ್ತು ಅದಕ್ಕೆ ಅವರದೇ ಆದ ಸ್ಥಾನ ಸಲ್ಲಬೇಕು. ಆದರೆ ಆಧುನಿಕ ಭಾಷೆಯನ್ನು ಬೆಳೆಸುವ ಮಾರ್ಗ ಅದಲ್ಲ. ನೀವು ಹೊಸ ಹೊಸ ಮಾರ್ಗಗಳ ಮೂಲಕ ಭಾಷಾ ಅಭಿವೃದ್ಧಿಯ ಕೆಲಸ ಕೈಗೆತ್ತಿಕೊಳ್ಳದಿದ್ದರೆ ಜನ ಸಾಮಾನ್ಯರು ಅದರಿಂದ ದೂರ ಸರಿಯುತ್ತಾರೆ. ಅದರಲ್ಲಿಯೂ ವಿಶೇಷವಾಗಿ, ಬೇರೆ ಭಾಷೆಗಳನ್ನಾಡುವ ಜನರು ಇಂಥ ಭಾಷೆಯ ಬಗ್ಗೆ ಆಸಕ್ತಿ ತಾಳಲಾರರು. ಇದನ್ನು ನಾವು ನೆನಪಿಡಬೇಕು.

ನಾನು ಹೆಚ್ಚೇನನ್ನೂ ಹೇಳಬಯಸುವುದಿಲ್ಲ. ನಾನು ಮಾಡಿದ ಈ ಕೆಲವು ಸಲಹೆಗಳನ್ನು ಪರಿಗಣಿಸಲಾಗುತ್ತದೆಂದು ಭಾವಿಸುತ್ತೇನೆ. ಈ ಎಲ್ಲ ವಿಷಯಗಳಲ್ಲಿ ವಿವರಕ್ಕೆ ಸಂಬಂಧಿಸಿದಂತೆ ನನ್ನ ನಿಲುವು ಒಂದಿಷ್ಟು ತಪ್ಪಾಗಿರಬಹುದು. ಆದರೆ ಶ್ರೀ ಸಾಮಾನ್ಯ ದೃಷ್ಟಿಯಿಂದ ನಾನು ಮಂಡಿಸಿದ ಮಾರ್ಗ ನಿರ್ದಿಷ್ಟವಾದುದ್ದು. ನನ್ನ ಭಾಷಾ ಸಮೂಹ ಹಿಂದಿಗೆ ಸಂಬಂಧಿಸಿದ್ದಲ್ಲ ಎಂಬುದು ನಿಮಗೆ ಗೊತ್ತಿದೆ. ನಾನು ಬಂಗಾಳಿಗಳೊಂದಿಗೆ ಇರುತ್ತೇನಾದ್ದರಿಂದ ಸಹಜವಾಗಿಯೇ ಅವರ ಪ್ರತಿಕ್ರಿಯೆಯನ್ನು ಗಮನಿಸುತ್ತೇನೆ. ನಾನು ದೇಶದ ಇತರ ಭಾಗಗಳಿಗೆ ಹೋದಾಗ, ಉದಾ:ದಕ್ಷಿಣಕ್ಕೆ ಹೋದಾಗ ಅಲ್ಲಿ ನನ್ನ ಸಹೋದ್ಯೋಗಿ ಸಂಗಾತಿಗಳಿಂದ ಹಿಂದಿ ಭಾಷೆ ಉತ್ತೇಜನದ ಪ್ರಕ್ರಿಯೆಗೆ ಅಲ್ಲಿಯ ಜನತೆಯ ಪ್ರತಿಕ್ರಿಯೆ ಏನೆಂಬುದನ್ನು ಕೇಳಿ ತಿಳಿದುಕೊಳ್ಳುತ್ತೇನೆ. ಇಂಥ ಸಂದರ್ಭದಲ್ಲಿ ನನಗೆ ಯಾವಾಗಲೂ ತೃಪ್ತಿಕರ ಉತ್ತರ ದೊರೆತಿಲ್ಲ. ಹೀಗಾಗಿ, ಅಲ್ಲಿಯ ಸ್ಥಿತಿ ಪ್ರೋತ್ಸಾಹದಾಯಕವಾಗಿರಲಿಲ್ಲ.

ಆದ್ದರಿಂದ ಇದೆಲ್ಲದನ್ನು ನಾವು ನಿರ್ಮಲ ಭಾವದಿಂದ ದೀರ್ಘವಾಗಿ ಚರ್ಚಿಸಬೇಕಾದ ಅವಶ್ಯಕತೆಯಿದೆ, ಮತ್ತು ಇದಕ್ಕಾಗಿ ಸರ್ಕಾರ ಸಾಕಷ್ಟು ಸಂಪನ್ಮೂಲಗಳನ್ನು ಒದಗಿಸಬೇಕು. ಇದು ಕೇಂದ್ರ ಸರ್ಕಾರದ ಕೆಲಸ. ಯಾಕೆಂದರೆ, ಇದರಲ್ಲಿ ಕೇಂದ್ರ ಸರ್ಕಾರವೇ ಜವಾಬ್ದಾರಿಯಾಗಿದೆ. ಹಿಂದಿ ಭಾಷೆ ಕೆಲಮಟ್ಟಿಗೆ ಭಾರತೀಯ ಒಕ್ಕೂಟದ ಭಾಷೆಯಾಗಿದೆಯೆಂದು ನಮ್ಮ ಸಂವಿಧಾನದಲ್ಲಿ ಸೂಚಿಸಲಾಗಿದೆ. ಆದ್ದರಿಂದ ಕೇಂದ್ರ

ಸರ್ಕಾರ ಹಿಂದಿ ಭಾಷೆಗೆ ಉತ್ತೇಜನದ ವಿಶಿಷ್ಟ ಹಾಗೂ ವಿಶೇಷ ಹೊಣೆಯನ್ನು ಹೊತ್ತುಕೊಳ್ಳಬೇಕಾಗಿದೆ. ಆದ್ದರಿಂದ ಅವರು ಸಹಜವಾಗಿಯೇ ಹಿಂದಿ ಭಾಷೆ ಉತ್ತೇಜನದ ಮಹತ್ಕಾರ್ಯದಲ್ಲಿ ತೊಡಗಿ ಉತ್ತಮೋತ್ತಮ ಕೆಲಸ ಮಾಡುತ್ತಿರುವವರಿಗೆ ಧಾರಾಳವಾಗಿ ಸಹಾಯ ಮಾಡಬೇಕು. ರಾಜ್ಯ ಮತ್ತು ಸ್ಥಳೀಯ ಕೇಂದ್ರಗಳಲ್ಲಿ ಈ ಕಾರ್ಯದ ಜವಾಬ್ದಾರಿಯನ್ನು ಹೊತ್ತುಕೊಂಡಿರುವ ಎಲ್ಲಾ ಸಂಘ ಸಂಸ್ಥೆಗಳಿಗೆ ಸಾಧ್ಯವಿದ್ದ ಮಟ್ಟಿಗೆ ಸಹಾಯದ ಹಸ್ತ ಚಾಚಬೇಕು. ಹಾಗೆಯೇ ಎಲ್ಲಾ ರಾಜ್ಯಗಳಲ್ಲಿ ಇಂಗ್ಲೀಷ್ ಭಾಷೆಯಿಂದ ಪ್ರಾಂತೀಯ ಭಾಷೆಗಳಿಗೆ ಬದಲಾಗುವ ಕ್ರಿಯೆಗೂ ಅಷ್ಟೇ ಮಹತ್ವ ನೀಡಬೇಕು. ಯಾಕೆಂದರೆ, ಇವು ಒಂದೇ ಕಾರ್ಯದ ಎರಡು ಆಯಾಮಗಳಾಗಿವೆ. ಒಂದಿಲ್ಲದೆ ಇನ್ನೊಂದರ ಪ್ರಗತಿ ಅಸಾಧ್ಯ ಇದನ್ನು ನಾವು ಈ ದೃಷ್ಟಿಯಿಂದಲೇ ನೋಡಬೇಕು. ನಮ್ಮ ಪಕ್ಷದ ಪರವಾಗಿ ನೇಮಿಸಲಾದ ಭಾಷಾ ಆಯೋಗದ ಮುಂದೆ ನಾವು ನಮ್ಮ ಈ ಅಭಿಪ್ರಾಯಗಳನ್ನು ಇಟ್ಟಿದ್ದೇವೆ. ನಮ್ಮ ಇಡೀ ಪಕ್ಷದಲ್ಲಿ ಈ ಕುರಿತು ಚರ್ಚೆ ನಡೆಸಿದ್ದೇವೆ. ಸಮಗ್ರ ಕಮ್ಯೂನಿಸ್ಟ್ ಪಕ್ಷ ಈ ವಿಷಯದ ಚರ್ಚೆ ನಡೆಸುವಂತೆ ಎಲ್ಲಾರನ್ನೂ ತೊಡಗಿಸಿದ್ದೇವೆ. ಅನೇಕ ರಾಜ್ಯಗಳಲ್ಲಿ ಈ ಕುರಿತು ಚರ್ಚೆ ನಡೆದಿದೆ.

ನನ್ನ ಪಕ್ಷದ ಪರವಾಗಿ ನಾನು ದೇಶದ ವಿವಿಧ ಭಾಗಗಳಲ್ಲಿ, ಅದರಲ್ಲಿಯೂ ವಿಶೇಷವಾಗಿ, ಬಂಗಾಳದಲ್ಲಿ ಅನೇಕ ಜನರನ್ನು ಭೇಟಿಯಾಗಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿ ಪಕ್ಷದ ಕೇಂದ್ರ ಸಮಿತಿಯ ಚರ್ಚೆಯಲ್ಲಿ ಮಂಡಿಸಿದ್ದೇನೆ. ಆಮೇಲೆ ನಾವು ಅನುಸರಿಸಬೇಕಾದ ಮಾರ್ಗದ ಕುರಿತು ಒಂದು ವಿಜ್ಞಾಪನೆಯನ್ನು ತಯಾರಿಸಿದ್ದೇವೆ. ನನ್ನ ದಿವಂಗತ ಪ್ರಧಾನ ಕಾರ್ಯದರ್ಶಿ ಅಜಯಘೋಷ್ ಅವರು ರಾಷ್ಟ್ರೀಯ ಭಾವೈಕ್ಯತಾ ಸಮಾವೇಶದಲ್ಲಿ ಭಾಷಾ ಪ್ರಶ್ನೆ ಕುರಿತು ಮಾತನಾಡುವಾಗ ಹೆಚ್ಚು ಕಡಿಮೆ ಅವೇ ಅಂಶಗಳನ್ನು ಸೂಚಿಸಿದ್ದಾರೆ.

ಈಗ ಜನತೆಯೊಂದಿಗಿನ ಸಂಪರ್ಕದಿಂದ ನಮ್ಮಂಥ ಶ್ರೀಸಾಮಾನ್ಯರು ಈ ವಿಷಯ ಕುರಿತು ಸಂಗ್ರಹಿಸಿದ ಚೂರು, ಪಾರು ಅನುಭವದ ನೆಲೆಯಿಂದ ಹೇಳುವುದಾದರೆ, ಹಿಂದಿ ಭಾಷೆಯ ಉತ್ತೇಜನಕ್ಕೆ ಈಗ ಬಳಸಲಾಗುತ್ತಿರುವ ಮಾರ್ಗದಲ್ಲಿ ಬದಲಾವಣೆಯಾಗಬೇಕು: ಈ ಕ್ಷೇತ್ರದಲ್ಲಿನ ಈಗಿನ ಪ್ರಯತ್ನಗಳು ಏನನ್ನೂ ಸಾಧಿಸಲಾರವು. ಹಾಗಾಗಿ, ಇನ್ನೂ ಹೆಚ್ಚಿನ ಪ್ರಯತ್ನಗಳು ನಡೆಸಬೇಕು. ಇದೆಲ್ಲಕ್ಕೂ ಮಿಗಿಲಾಗಿ, ಈ ಕಾರ್ಯಕ್ಕೆ ಹೆಚ್ಚಿನ ಸಂಪನ್ಮೂಲಗಳನ್ನು ಒದಗಿಸಬೇಕು. ಅಲ್ಲದೆ ಹಿಂದಿ ಭಾಷೆ ಇತರ ಭಾಷೆಗಳೊಂದಿಗೆ ಹೊಂದಿಕೊಳ್ಳುವ ದಾರಿಯಲ್ಲಿ ಹೆಜ್ಜೆ ಇಡಬೇಕಾದುದು ಅತ್ಯಂತ ಆವಶ್ಯಕವಾದುದೆಂಬುದನ್ನು ಮನಗಾಣಬೇಕು. ಇವು ನಮ್ಮ ಅನುಭವದ ಸಹಜ ತೀರ್ಮಾನಗಳು. ಭಾಷಾ ವಿಷಯದಲ್ಲಿ ಸಂಪ್ರದಾಯಕ ಮನೋಭಾವ ತೊಲಗಿ, ಹೃದಯ ವೈಶಾಲ್ಯ ಪ್ರಾದುರ್ಭವಿಸಬೇಕು. ಮತ್ತು ನಾವು ಇತರ

ಭಾಷೆಗಳನ್ನು ಸ್ವೀಕರಿಸುವ ಔದಾರ್ಯ ಮೈಗೂಡಿಸಿಕೊಳ್ಳಬೇಕು. ಕೆಲವು ರಾಜ್ಯಗಳು ಮತ್ತು ಕೇಂದ್ರದ ಮಟ್ಟಕ್ಕೆ ಸೀಮಿತಗೊಳ್ಳದೆ ವಿಶಾಲದೇಶದ ಎಲ್ಲಾ ಭಾಗಗಳಿಗೂ ಚಾಚಿಕೊಳ್ಳಬಲ್ಲ, ಅನ್ವಯಿಸಬಲ್ಲ, ಒಂದು ಸಮುಚಿತ, ಸಮನ್ವಯಿತ ಮಾರ್ಗವನ್ನು ಅಭಿವೃದ್ಧಿ ಪಡಿಸಬೇಕು. ತತ್ಪರಿಣಾಮವಾಗಿ, ಅನತಿಕಾಲದಲ್ಲಿ ನಮ್ಮ ಬದುಕಿನ ವಾಸ್ತವತೆಗಳಿಗೆ ಸ್ಪಂದಿಸಬಲ್ಲ, ನಮ್ಮ ದೇಶದ ವಿವಿಧ ರಾಜ್ಯಗಳ ಭಾಷಾ ಸಮೂಹಗಳ ಮಧ್ಯೆ ಅಂತರ್ ಸಂಪರ್ಕ ಸಾಧಿಸಬಲ್ಲ, ಒಂದು ಜೀವಂತ ಭಾಷೆಯನ್ನು ಸೃಷ್ಟಿಸಿದ, ಸಂಸ್ಥಾಪಿಸಿದ ಕೀರ್ತಿ ನಮ್ಮದಾಗಬೇಕು. ಇಂಥ ದಿನಕ್ಕಾಗಿ ನಾವು ಹಂಬಲಿಸೋಣ ಮತ್ತು ಅದೊಂದು ಅತ್ಯಂತ ಮಹತ್ವದ ಹಾಗೂ ತುರ್ತಿನ ಕಾರ್ಯಭಾರವಾಗಿದೆ ಎಂಬುದನ್ನು ನೆನಪಿಸೋಣ. ಸರ್ಕಾರ ಈ ಕಾರ್ಯವನ್ನು ಕೈಗೆತ್ತಿಕೊಳ್ಳುತ್ತದೆಂಬ ಭರವಸೆ ನನಗಿದೆ. ಅಂತೆಯೇ ಈ ಕಾರ್ಯಕ್ಕಾಗಿ ಪ್ರಾಂಜಲ ಮನಸ್ಸಿನಿಂದ ಉದಾರವಾದಿ ನಿಲುವಿನಿಂದ ತೊಡಗಿಸಿಕೊಂಡಿರುವ ಎಲ್ಲರಿಗೂ ಆವಶ್ಯಕ ಸಹಾಯ ಸಹಕಾರವನ್ನು ಸರಕಾರ ನೀಡುತ್ತದೆಯೆಂಬ ವಿಶ್ವಾಸ ನನಗಿದೆ.

## 5. ಚುನಾವಣೆಗಳಲ್ಲಿ ಹರಿದು ಬರುವ ಬೃಹತ್ ಮೊತ್ತದ ಹಣ ಹಾಗೂ ಸರ್ಕಾರಿ ಯಂತ್ರದ ಬಳಕೆ-ಇವುಗಳನ್ನು ತಡೆಯುವ ಕುರಿತು.*

ನಾವು ಈಗ ಬಹುತೇಕ ನಾಲ್ಕನೆಯ ಸಾರ್ವತ್ರಿಕ ಚುನಾವಣೆಗಳ ಹೊಸ್ತಿಲಲ್ಲಿ ಇದ್ದೇವೆ, ಮತ್ತು ಈ ಸ್ಥಿತಿಯಲ್ಲಿರುವ ನಾವು ಈ ಸಾರ್ವತ್ರಿಕ ಚುನಾವಣೆಗಳನ್ನು ತುಂಬಾ ಮುಕ್ತವಾದ ಹಾಗೂ ನ್ಯಾಯಯುತವಾದ ರೀತಿಯಲ್ಲಿ ನಡೆಸುವ ನೈಜ ಮನೋಭಾವದಿಂದ ಮುಂದಡಿ ಇಡಬೇಕಾಗಿದೆ. ಆದರೆ ಈ ಸಾರ್ವತ್ರಿಕ ಚುನಾವಣೆಗಳನ್ನು ನ್ಯಾಯಯುತವಾದ ರೀತಿಯಲ್ಲಿ ನಡೆಯುವ ಬಗ್ಗೆ ನನಗೆ ತುಂಬಾ ಸಂಶಯ ಇದೆ. ಹಾಗೂ ಒಂದು ವಿಧದ ಒಳಭೀತಿ ಕಾಡುತ್ತಿದೆ. ಏಕೆಂದರೆ, ಆಳುವ ಪಕ್ಷವಾಗಿರುವ ಕಾಂಗ್ರೆಸ್ ತನ್ನ ರಾಜಕೀಯ ಹಾಗೂ ನೈತಿಕ ದಿವಾಳಿಕೋರತನದಿಂದಾಗಿ ವಿಘಟಿತಗೊಂಡು, ಅವನತಿಯ ಸ್ಥಿತಿಯಲ್ಲಿದೆ. ಹೀಗಾಗಿ, ಅದು ಚುನಾವಣೆಗಳನ್ನು ನಮ್ಮ ಸಂವಿಧಾನ ವಿಧಿಸುವ ನೀತಿ ನಿಯಮಗಳಿಗನುಗುಣವಾಗಿ ನಡೆಸುವ ಸ್ಥಿತಿಯಲ್ಲಿ ಇಲ್ಲ. ವಾಸ್ತವವಾಗಿ ಸಂವಿಧಾನವನ್ನು ಉಲ್ಲಂಘಿಸಲಾಗುವುದು. ಇದುವೇ ನನ್ನ ಭಯ. ಆದ್ದರಿಂದ, ಮಾನ್ಯ ಅಧ್ಯಕ್ಷರೆ, ನಾನು ಈ ಸಲಹೆಯನ್ನು ತಮ್ಮ ಮುಂದೆ ಇಡುತ್ತಿದ್ದೇನೆ.

ಇದಕ್ಕೆ ಸಂಬಂಧಿಸಿ, ನಾನು ಸೂಚಿಸ ಬಯಸುವ ಮೊಟ್ಟ ಮೊದಲ ಅಂಶವೆಂದರೆ, ಚುನಾವಣೆಯಲ್ಲಿ ಬೃಹತ್ ಮೊತ್ತದ ಹಣ ಹರಿದು ಬರುವುದನ್ನು ತಡೆಗಟ್ಟಬೇಕು. ಅದು ಭಾರತೀಯ ಮೂಲದಿಂದಿರಲಿ ಅಥವಾ ವಿದೇಶಿ ಮೂಲದ್ದಾಗಿರಲಿ, ಅಥವಾ ದೇಶಿ-ವಿದೇಶಿ-ಮೂಲದ್ದಾಗಿರಲಿ, ಚುನಾವಣೆಗಳಲ್ಲಿ ಹೀಗೆ ಹರಿದು ಬರುವ ಬೃಹತ್ ಮೊತ್ತವನ್ನು ತಡೆಯಬೇಕು. ಈ ವಿಷಯ ಕುರಿತು ನಾವು ಈಗಾಗಲೇ ಸದನದಲ್ಲಿ ಅನೇಕ ಬಾರಿ ಚರ್ಚಿಸಿದ್ದೇವೆ. ಮತ್ತೆ ಈಗ ಅದೇ ಚರ್ಚೆಗೆ ತೊಡಗಿದ್ದೇವೆ. ಆದರೆ ಮೊದಲನೇ, ಎರಡನೇ ಅಥವಾ ಮೂರನೇ ಮಹಾ ಚುನಾವಣೆಗಳ ಸಂದರ್ಭಗಳಿಗಿಂತಲೂ ಈಗ ಪರಿಸ್ಥಿತಿ ತೀರಾ ಕೆಟ್ಟಿದೆ. ಇಂದು ಬೃಹತ್ ಮೊತ್ತದ ಹಣ ಹರಿಯುವುದನ್ನು ಹಾಗೂ ಸರ್ಕಾರಿ ಯಂತ್ರದ ದುರ್ಬಳಕೆಯನ್ನು-ತಡೆಗಟ್ಟುವ ಕುರಿತು ಮಂಡಿಸಲಾಗಿದ್ದ ಖಾಸಗಿ ಸದಸ್ಯನ ಗೊತ್ತುವಳಿ ಮೇಲಿನ ಚರ್ಚೆಯಿಂದ, ಚುನಾವಣೆಯ ದಿಶೆ-ದಿಕ್ಕುಗಳ ಮೇಲೆ ಮಹತ್ತರ ಪ್ರಭಾವ ಬೀರುತ್ತದೆ. ದೊಡ್ಡ ದೊಡ್ಡ ಧನಿಕರ ರಾಜಕೀಯ ಬಾಲಂಗೋಸಿಗಳು ಒಳ್ಳೆಯ ಅಧಿಕಾರ ಮತ್ತು ಸ್ಥಾನಮಾನಗಳನ್ನು ಗಿಟ್ಟಿಸುವಂತಾಗಬೇಕೆಂಬುದೇ ಈ ಎಲ್ಲ ಜನಬಲದ ಮುಖ್ಯ ಉದ್ದೇಶವಾಗಿದೆ. ರಾಜ್ಯದ ವಿಧಾನಸಭೆಗಳಿಗೋ ಅಥವಾ ವಿಶೇಷವಾಗಿ ಪಾರ್ಲಿಮೆಂಟಿಗೋ-ಒಟ್ಟಿನಲ್ಲಿ ಹೆಚ್ಚುಹೆಚ್ಚಿನ ಸಂಖ್ಯೆಯ ಅಭ್ಯರ್ಥಿಗಳು ತಮ್ಮ ಜನಬಲದ ಮೇಲೆ ಚುನಾಯಿತರಾಗಿ, ವಿಧಾನ ಸೌಧ, ಸಂಸತ್ತುಗಳಲ್ಲಿ ಅಧಿಕಾರದ ಗದ್ದುಗೆಯ ಮೇಲೆ

* ರಾಜ್ಯಸಭಾ 2 ಡಿಸೆಂಬರ್, 1996 ಸಿ.ಸಿ. 3721-3738.

ಪವಡಿಸುವಂತಾಗಬೇಕು. ಇದು ಮಹಾಧನಪತಿಗಳ ಹುನ್ನಾರ. ಹೀಗೆ ಚುನಾಯಿತರಾದ ಬಹುಸಂಖ್ಯಾತ ಸಂಸದರು ಲೋಕ ಸಭೆಯಲ್ಲಿ ಆಳುವ ಪಕ್ಷದ ಮೂಲಕ ತಮ್ಮ ಹಿತಾಸಕ್ತಿ ಕಾಯುವ ಸಾಧನಗಳಾಗುವರು ಎಂಬುದು ಧನಪತಿಗಳ ಲೆಕ್ಕಾಚಾರ ತಮ್ಮ ಬೆಂಬಲದಿಂದ ಚುನಾಯಿತರಾದ ಸಂಸದರಲ್ಲಿ ಯಾರು ಯಾರು ಮಂತ್ರಿಗಳಾಗಬೇಕು. ಯಾರು ಪ್ರಧಾನ ಮಂತ್ರಿಗಳಾಗಬೇಕು-ಎಂಬ ಇತ್ಯಾದಿ ಸಂಗತಿಗಳಲ್ಲದೆ, ಇಡೀ ಸರಕಾರವೇ ಏನು ಮಾಡಬೇಕು, ಯಾವ ದಿಕ್ಕಿನಲ್ಲಿ ನಡೆಯಬೇಕು ಎಂಬುದನ್ನು ನಿರ್ಧರಿಸುವ ಸ್ಥಿತಿಯಲ್ಲಿರುತ್ತಾರೆ. ಇದು ಈ ಎಲ್ಲ ಭಾರಿ ಭಾರಿ ಸಿರಿವಂತ ಕುಳಗಳ ಹವಣಿಕೆ. ಆದ್ದರಿಂದಲೇ ಅವರು ಇತ್ತೀಚೆಗೆ ಚುನಾವಣೆಯಲ್ಲಿ ಹೆಚ್ಚಿನ ಆಸಕ್ತಿ ತೋರುತ್ತಿದ್ದಾರೆ. ನಮ್ಮ ಚರಿತ್ರೆಯಲ್ಲಿ ಪ್ರಪ್ರಥಮ ಬಾರಿಗೆ ಬೃಹತ್ ಮೊತ್ತದ ಹಣ ಚುನಾವಣೆಯೊಳಗೆ ನುಸುಳಿ ಬರುತ್ತಿದೆ. ಅಥವಾ ಇಡೀ ರಾಜಕೀಯ ಪ್ರಕ್ರಿಯೆಯ ಮೇಲೆ ತನ್ನ ಆಕ್ರಮಣ ಸಾರುತ್ತಿದೆ. ಹಿಂದೆಂದೂ ಕಂಡರಿಯದ ಧನಪತಿಗಳ ಧಾಂದಲೆ ಇಂದೆದ್ದು ಕಾಣುತ್ತಿದೆ. ನಾವು ಒಂದು ಪಕ್ಷಕ್ಕೆ ಸಂಬಂಧಪಟ್ಟವರು: ಅಂತೆಯೇ ಬೇರೆ ಪಕ್ಷದ ಜನರೂ ಇಲ್ಲಿದ್ದಾರೆ. ಎಲ್ಲೆಲ್ಲೂ ಈ ಬೃಹತ್ ಮೊತ್ತದ ಹಣದ ಬಗ್ಗೆ ಎಲ್ಲರೂ ಮಾತಾಡುತ್ತಿದ್ದಾರೆ. ಸದನದ ಹೊರಗೆ, ಪತ್ರಿಕೆಗಳಲ್ಲಿ, ಎಲ್ಲ ಕಡೆಗಳಲ್ಲೂ ಅದರ ಬಗ್ಗೆಯೇ ಮಾತು. ಇದು ಎಲ್ಲರಿಗೂ ಗೊತ್ತಿದೆ. ಮೊದಲ ಬಾರಿಗೆ ಕೆಲವು ದೊಡ್ಡ ಬಂಡವಾಳಶಾಹಿ ಮನೆತನಗಳು ತಮ್ಮ ಅಭ್ಯರ್ಥಿಗಳನ್ನು ನೇರವಾಗಿ ಚುನಾವಣೆಗೆ ಇಳಿಸಲು ಬಯಸುತ್ತಿದ್ದು, ಕಾಂಗ್ರೆಸ್ ಪಕ್ಷ ತನ್ನ ಹಿರಿಯ ಹಾಗೂ ನುರಿತ ಕಾಂಗ್ರೆಸ್ಸಿಗರನ್ನು ಹೊರಗಿಟ್ಟು, ಅವರ ಸ್ಥಾನದಲ್ಲಿ ತಮ್ಮ ಅಭ್ಯರ್ಥಿಗಳನ್ನು ಅಂಗೀಕರಿಸಬೇಕೆಂದು ಈ ಬೃಹತ್ ಬಂಡವಾಳಿಗರು ಹೇಳುತ್ತಿದ್ದಾರೆ. ರಾಜ್ಯಮಟ್ಟದಲ್ಲಿ ಇಂದು ಅನೇಕ ಕಂಟ್ರಾಕ್ಟರರು, ಬಂಡವಾಳಿಗರು ಮತ್ತು ಇತರ ಧನಪತಿಗಳನ್ನು- ಕಾಂಗ್ರೆಸ್‌ನ ಯಾವುದೇ ಹಿನ್ನೆಲೆಯಿಲ್ಲದವರನ್ನು-ಬೇರೆ, ಬೇರೆ ಸ್ಥಾನಮಾನಗಳಿಗೆ ನಾಮಕರಣ ಮಾಡಲಾಗುತ್ತಿರುವುದು ಇಂದು ಜಗಜ್ಜಾಹಿರವಾಗಿದೆ. ಅಷ್ಟೇ ಅಲ್ಲ, ಪಕ್ಷದ ಅಧಿಕಾರದ ಕೇಂದ್ರದ ಸುತ್ತಮುತ್ತ ಇಂಥವರ ಹೆಸರನ್ನು ಹೆಚ್ಚುಹೆಚ್ಚಾಗಿ ಪ್ರಚಾರಕ್ಕೆ ತರಲಾಗುತ್ತಿದ್ದು ಅವರಿಗೆ ಸ್ಥಾನ-ಮಾನಗಳು ಸಿಗಲೇಬೇಕೆಂದು ಒತ್ತಾಯಿಸಲಾಗುತ್ತದೆ. ಯಾಕೆಂದರೆ, ಅವರ ಪ್ರಕಾರ ಕಾಂಗ್ರೆಸ್ ಚುನಾವಣಾ ನಿಧಿಗೆ ಹಣ ಕೊಡಿಸುವವರು ಈ ಧನಪತಿಗಳೇ ಅಲ್ಲವೇ? ಬರುಬರುತ್ತಾ ಹಣ ಮತ್ತು ಅಭ್ಯರ್ಥಿಗಳು ಬೆರೆತು ಬೇರಿಲ್ಲದಂತೆ ಒಂದೇಯಾಗುತ್ತಿದ್ದಾರೆ. ಅಂದರೆ, ಹಣವಿದ್ದವನೇ ಅಭ್ಯರ್ಥಿ. ಅಭ್ಯರ್ಥಿಯೆಂದರೆ, ಹಣವಿದ್ದವನು ಮಾತ್ರ. ಇದು ಯಾವ ಮಟ್ಟಕ್ಕೆ ಹೋಗಿದೆಯೆಂದರೆ, ಈ ಅಥವಾ ಅಭ್ಯರ್ಥಿಗೆ ಉಮೇದುವಾರಿಕೆ ನೀಡದಿದ್ದರೆ ನಿಮಗೆ ಹಣ ದೊರೆಯುವುದಿಲ್ಲ. ಇಂಥ ಕಠಿಣ ಹಾಗೂ ಸಂದಿಗ್ದ ಪರಿಸ್ಥಿತಿಯಲ್ಲಿ ಸಿಕ್ಕುಬಿದ್ದುದರಿಂದ ವಿರೋಧಿಗಳ ಮೇಲೆ ಮೇಲುಗೈ ಸಾಧಿಸಿ ನಮ್ಮ ಬಹುಮತವನ್ನುಳಿಸಿಕೊಳ್ಳಲು ನಮಗೆ ಹೆಚ್ಚಿನ ಹಣ ಬೇಕೇ ಬೇಕು. ಎಂಬುದು ಕಾಂಗ್ರೆಸ್ಸಿನ ವಾದ. ಇದು ಈಗಿನ ನಿಜ ಸ್ಥಿತಿ. ಇದು ಈಗಾಗಲೇ ಭಯಾನಕ ಪ್ರಮಾಣವನ್ನು ತಲುಪಿದೆ. ಈಗ ಬಿಹಾರ ಒಂದೇ ರಾಜ್ಯದಲ್ಲಿ ಬಿರ್ಲಾ ಅವರ ಏಳು

ಅಭ್ಯರ್ಥಿಗಳು-ಕಾಂಗ್ರೆಸ್ಸಿಗೆ ಟಿಕೇಟ್ ಕೇಳಿದ್ದಾರೆ. ಶ್ರೀ ಕೆ.ಪಿ. ಮೋದಿ, ಜನರಲ್ ಮ್ಯಾನೇಜರ್, ರೂಬಿ ಜನರಲ್ ಇನ್ಸೂರೆನ್ಸ್ ಕಂಪನಿ: ಹಿಮ್ಮತ್‌ಸಿಂಗ್‌ಕಾ ಅವರು ಈಗಾಗಲೇ ಪಟ್ಟಿಯಲ್ಲಿದ್ದಾರೆ, ಅವರ ಸಹೋದರ ಕೂಡ ಟಿಕೆಟ್ ಕೇಳುತ್ತಿದ್ದಾರೆ. ಆಮೇಲೆ, ಶ್ರೀಖೈತಾನ್, ಬಿರ್ಲಾ ಅವರ ಇನ್ನೊಬ್ಬ ಅಭ್ಯರ್ಥಿಯಾಗಿದ್ದಾರೆ. ಅಲ್ಲದೆ, ಶ್ರೀ ಖೇಮ್ಕಾ, ಶ್ರೀ ಚಂದ್ರಮಾಧವಸಿಂಗ್ ಹಾಗೂ ಶ್ರೀ ಶಿವನಾಥ್ ಪ್ರಸಾದ್, ಮುಂತಾದವರೇ ಬಿರ್ಲಾ ಪ್ರಾಯೋಜಿತ ಅಭ್ಯರ್ಥಿಗಳಾಗಿದ್ದಾರೆ. ಇನ್ನು ಕೆಲವು ಒಂಬತ್ತು ಪ್ರಖ್ಯಾತ ಉದ್ಯಮಿಗಳು ನಾಚಿಕೆಬಿಟ್ಟು ಎಗ್ಗಿಲ್ಲದೆ ಕಾಂಗ್ರೆಸ್ ಟಿಕೇಟ್‌ಗಳನ್ನು ಬೇಡುತ್ತಿದ್ದಾರೆ, ಮತ್ತು ಪಕ್ಷದ ಉನ್ನತ ಕೇಂದ್ರದಲ್ಲಿ ಇಂಥವರ ಬೇಡಿಕೆಗೆ ಮನ್ನಣೆಯೂ ದೊರೆಯುತ್ತಿದೆ. ಟಿಸ್ಕೋದ ರೆಸಿಡೆಂಟ್ ಡೈರೆಕ್ಟರಾಗಿರುವ ಶ್ರೀ ರೂಸ್ಸೀಮೋದಿಯವರೂ ಕಾಂಗ್ರೆಸ್ ಟಿಕೇಟ್ ಕೇಳುತ್ತಿದ್ದಾರೆಂದರೆ ನಿಮಗೆ ಆಶ್ಚರ್ಯವಾಗಬಹುದು. ಬೀರ್ಡ್ ಆ್ಯಂಡ್ ಕಂಪನಿಯ ಶ್ರೀ ಪ್ರಾಣಪ್ರಸಾದ, ರಾಂಚಿ ಡಿಸ್ಟಿಲರಿಯ ಮಾಲೀಕರಾದ ಶ್ರೀ ಶಿವನಾರಾಯಣ ಜಯಪವಾಲ್, ಮೈಕಾ ಆ್ಯಂಡ್ ಕೋಲ್ ಕಂಪನಿಯ ಶ್ರೀ ಶ್ಯಾಮಸುಂದರ ಬರೇರಿಯಾ-ಇವರೆಲ್ಲರೂ ಕಾಂಗ್ರೆಸ್ ಟಿಕೇಟಿಗಾಗಿ ಹಂಬಲಿಸುತ್ತಿದ್ದಾರೆ.

ಇನ್ನೊಬ್ಬ ಮೈಕಾ ಉದ್ಯಮಿಯಾಗಿರುವ ಬಿಂದೇಶ್ವರಿ ಪ್ರಸಾದ್ ಸಿನ್ಹಾ ಕೂಡ ಕಾಂಗ್ರೆಸ್ ನಾಮಕರಣವನ್ನು ಆಶಿಸುತ್ತಿದ್ದಾರೆ. ನನ್ನ ರಾಜ್ಯದ ಬಗ್ಗೆ ಹೇಳುವುದಾದರೆ, ಬಿರ್ಲಾರವರ ವ್ಯಕ್ತಿಯಾಗಿರುವ ಶ್ರೀ ಜೆ.ಎನ್.ಮುಖರ್ಜಿ ಕಲ್ಕತ್ತಾದಿಂದ ಸ್ಪರ್ಧಿಸಲು ಕಾಂಗ್ರೆಸ್ ಟಿಕೇಟ್ ಕೋರುತ್ತಿದ್ದಾರೆ. ಈ ರೀತಿಯಾಗಿ ಇಂಥ ಅನೇಕ ಹೆಸರುಗಳನ್ನು ನಾನು ಎತ್ತಿ ತೋರಿಸಬಲ್ಲೆ. ಆದರೆ, ನನಗೆ ಹೆಸರಿನಲ್ಲಿ ಆಸಕ್ತಿ ಇಲ್ಲ. ಮಾನ್ಯ ಅಧ್ಯಕ್ಷರೆ, ನೀವು ಇಂದು ಕಾಂಗ್ರೆಸ್ ಅಭ್ಯರ್ಥಿಗಳ ಪಟ್ಟಿಯ ಮೇಲೆ ಕಣ್ಣಾಡಿಸಿದರೆ, ನಿಮಗೆ ಆಘಾತವಾಗಬಹುದು. ನಾನು ಕಾಂಗ್ರೆಸ್ ಪಕ್ಷದವನಲ್ಲ: ಆದ್ದರಿಂದ ಕಾಂಗ್ರೆಸ್ ಪಕ್ಷದಿಂದ ಯಾರು ನಾಮಕರಣಗೊಳ್ಳುತ್ತಾರೆ, ಯಾರು ಯಾರಿಗೆ ಟಿಕೇಟ್ ಸಿಗುತ್ತದೆ ಎಂಬುದು ನಿಮಗೇನು ಸಂಬಂಧ ಎಂದು ನೀವು ಕೇಳಬಹುದು, ಸರಿ. ಈ ಪ್ರಶ್ನೆ ಸಹಜವಾದುದೇ, ಆದರೆ, ನಮಗೆ ಪಕ್ಷದ ವಿಷಯಗಳು ಸಂಬಂಧಿಸಿಲ್ಲ. ಇಲ್ಲಿ ನಮ್ಮ ಮುಖ್ಯ ಕಾಳಜಿಯೆಂದರೆ, ಚುನಾವಣೆಯಲ್ಲಿ ಬೃಹತ್ ಮೊತ್ತದ ಹಣ ರಾಜಾರೋಷವಾಗಿ ಹರಿದು ಬರುತ್ತಿದೆ ಎಂಬುದೇ ನಮ್ಮ ಕಳವಳಕ್ಕೆ ಕಾರಣ. ದೊಡ್ಡ ದೊಡ್ಡ ಧನಿಕರು ಈ ಹಿಂದೆಯೂ ಚುನಾವಣೆಗೆ ನಿಧಿ ನೀಡುತ್ತಿದ್ದರು. ಆದರೆ ಅದೆಲ್ಲವು ಪರೋಕ್ಷವಾಗಿ ಪರದೇ ಹಿಂದೆ ಮಾತ್ರ ನಡೆಯುತ್ತಿತ್ತು. ಆದರೆ ಈಗ ಈ ಬಂಡವಾಳಿಗರು ಕೇವಲ ದುಡ್ಡನ್ನು ಮಾತ್ರ ಒದಗಿಸುತ್ತಿಲ್ಲ, ಅದರ ಜೊತೆಗೆ ತಮಗೆ ಬೇಕಾದ ವ್ಯಕ್ತಿಗಳು ಅಭ್ಯರ್ಥಿಗಳಾಗುವಂತೆ, ಚುನಾಯಿತರಾಗಿ ಸಂಸತ್ತು, ಶಾಸನ ಸಭೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಉಪಸ್ಥಿತರಿರುವಂತೆ, ಪುನಃ ಹುನ್ನಾರು ಹೂಡಲಾಗುತ್ತಿದೆ. ಮಾನ್ಯರೆ, ಎಲ್ಲೆಡೆಯೂ ರಾಜ, ರಾಣಿಯರನ್ನು ತಂತಮ್ಮ ನೆಚ್ಚಿನ ಅಭ್ಯರ್ಥಿಗಳನ್ನಾಗಿ ಮಾಡಲು

ಕಾಂಗ್ರೆಸ್ ಮತ್ತು ಸ್ವತಂತ್ರ ಪಕ್ಷಗಳು ಪರಸ್ಪರ ಪೈಪೋಟಿ ನಡೆಸುತ್ತಿರುವುದನ್ನು ನೀವೇ ಕಾಣಬಹುದು. ಈ ಮೇಲಾಟದಲ್ಲಿ ಯಾರು ಗೆಲ್ಲುತ್ತಾರೋ ನನಗೆ ಗೊತ್ತಿಲ್ಲ. ಆದರೆ ಸ್ವತಂತ್ರ ಪಕ್ಷದಲ್ಲಿ ಹೆಚ್ಚು ರಾಣಿಯರು ಇದ್ದರೆ, ಕಾಂಗ್ರೆಸ್ಸಿನಲ್ಲಿ ಹೆಚ್ಚು ರಾಜರಿದ್ದಾರೆ. ಈ ಸಮೀಕರಣ ಬದಲಾಗುವುದೋ ಇಲ್ಲವೋ ನನಗೆ ಗೊತ್ತಿಲ್ಲ. ಆದರೆ ಅದರ ಪರಿಣಾಮ ಮಾತ್ರ ಒಂದೇ ಆಗಿರುತ್ತದೆ. ಇದು ವಸ್ತು ಸ್ಥಿತಿ-ಅಷ್ಟೇ ಗಂಭೀರವಾದ ಪರಿಸ್ಥಿತಿ ಕೂಡ. ಹೇರಳ ರಾಜಧನ ಪಡೆಯುತ್ತಿರುವ ರಾಜಾ ರಾಣಿಯರಲ್ಲಿಯು ಬೃಹತ್ ಮೊತ್ತದ ಹಣವಿದೆ. ಮಹಾರಾಣಿ ಗಾಯಿತ್ರಿದೇವಿ ಅವರಲ್ಲಿರುವ ಕೋಟಿ, ಕೋಟಿ ರೂಪಾಯಿಗಳಲ್ಲದೆ, ಅವರು ಪ್ರತಿವರ್ಷ ರೂ. ಹದಿನೆಂಟು ಲಕ್ಷ ರಾಜಧನ ಪಡೆಯುತ್ತಿದ್ದಾರೆ. ಈ ಎಲ್ಲೂ ಹಣಬಲದ ವ್ಯಕ್ತಿಗಳು ಚುನಾವಣೆಯ ಕಣಕ್ಕಿಳಿದರೆ ಏನಾಗಬಹುದೆಂಬುದನ್ನು ಕಲ್ಪಿಸಿಕೊಂಡರೆ ಮೈನಡುಕಗೊಳ್ಳುತ್ತದೆ. ಇದೊಂದು ಭಯಂಕರ ದಾಳಿ ನಮ್ಮ ಸಂವಿಧಾನಕ್ಕೆ ತತ್ವ, ನಮ್ಮ ಚುನಾವಣಾ ವ್ಯವಸ್ಥೆ ಮತ್ತು ಕೊನೆಯದಾಗಿ, ನಮ್ಮ ಸಂಸದೀಯ ಪ್ರಜಾಪ್ರಭುತ್ವ ಈ ಎಲ್ಲವುಗಳ ಮೇಲೆ ಬೃಹತ್ ಮೊತ್ತದ ಹಣದ ದುರಾಕ್ರಮಯಿದು ಎನ್ನದೆ ವಿಧಿಯಿಲ್ಲ.

ಮಾನ್ಯ ಅಧ್ಯಕ್ಷರೆ, ಒಬ್ಬ ಕವಿ ಹೇಳಿದಂತೆ ಸರ್ವದಿಶೆಯಿಂದಲೂ ನಮ್ಮ ಮೇಲೆ ದಾಳಿ ಆರಂಭವಾಗುತ್ತಿದೆ.

"ಅವರ ಬಲಗಡೆಗೆ ಗುಂಡು
ಅವರ ಎಡಗಡೆಗೆ ಗುಂಡು
ಅವರ ಹಿಂಬದಿಗೆ ಮುಂಬದಿಗೆ ಎಲ್ಲೆಲ್ಲೂ ಗುಂಡು
ಧುಮ್ಮಿಕ್ಕಿ ದಾಳಿಯಿಡುವ ದುರಾಕ್ರಮಣ ದಂಡು"

ಬಲಗಡೆಗೆ ಧನಬಲ, ಎಡಗಡೆಗೆ ಧನಬಲ, ಹಿಂದು ಮುಂದು ಎಲ್ಲೆಲ್ಲೂ ಧನಬಲ-ಎಂದು ನಾನು ಹೇಳಬಯಸುತ್ತೇನೆ. ಈ ರೀತಿಯಾಗಿ ಮುಂಬರುವ ಚುನಾವಣೆಗಳಲ್ಲಿ ಹಣದ ಹೊಳೆ ಎಲ್ಲಾ ದಿಕ್ಕನಿಂದಲೂ ನಮ್ಮನ್ನಾವರಿಸಿಕೊಳ್ಳಲಿದೆ. ಇದು ಅತ್ಯಂತ ಭಯಾನಕವಾದ ಅಪಾಯವನ್ನು ಸೂಚಿಸುತ್ತಿದೆ. ಮಾನ್ಯ ಅಧ್ಯಕ್ಷರೆ, ಈ ಕುರಿತು ಏನನ್ನಾದರೂ ಮಾಡಬೇಕೆಂದು ನಾನು ಕೋರುತ್ತೇನೆ. ಇದೆಲ್ಲಕ್ಕೂ ಕಳಸವಿಟ್ಟಂತೆ ಈ ಸಲ ಅಮೇರಿಕೆಯ ದುಡ್ಡು ಹರಿದು ಬರಲಿದೆ. ಈ ಕುರಿತು ಪತ್ರಿಕೆಗಳು ಈಗಾಗಲೇ ವರದಿ ಮಾಡಿವೆ ಮತ್ತು ಅದನ್ಯಾರೂ ಅಲ್ಲಗಳೆದಿಲ್ಲ.

ಮಾನ್ಯ ಅಧ್ಯಕ್ಷರೆ, ಸಿ.ಐ.ಎ. ಕೂಡ ಈ ಮುಂಬರುವ ಚುನಾವಣೆಯಲ್ಲಿ ಭಾರಿ ಪ್ರಮಾಣದಲ್ಲಿ ಹಸ್ತಕ್ಷೇಪ ಮಾಡಲಿದೆಯೆಂಬ ಸುದ್ದಿ ಪತ್ರಿಕೆಗಳಲ್ಲಿ ಬಂದಿದೆ. ಆಳುವ

ಪಕ್ಷದ ಅವನತಿಯಿಂದಾಗಿ ಉದ್ಭವಿಸಿದ ರಾಜಕೀಯ ಅಸ್ಥಿರತೆ ಹಾಗೂ ಮುಖಂಡತ್ವದಲ್ಲಿ ಕಾಣಿಸಿಕೊಂಡ ಗೊಂದಲ, ಇಂಥ ಪರಿಸ್ಥಿತಿಯಲ್ಲಿ ಸಿ.ಐ.ಎ ಮಾಡುವ ದಾಂಧಲೆಗಳ ಬಗ್ಗೆ ಚೆನ್ನಾಗಿ ಗೊತ್ತಿರುವ ನಾನು ಈ ಸಂಗತಿಯನ್ನು ನಿರ್ಲಕ್ಷಿಸಬಹುದೇ/ ಗೋಹತ್ಯೆಯ ವಿರುದ್ಧದ ಮತ ಪ್ರದರ್ಶನದ ಹಿಂದೆ ಸಿ.ಐ.ಎ. ಕೈವಾಡವಿರಬಹುದು:- ಎಂದು ಕಾಂಗ್ರೆಸ್ ಸದಸ್ಯರೇ ಹೇಳುತ್ತಿಲ್ಲವೇ? ಇದನ್ನು ಕೇವಲ ಕಮ್ಯುನಿಸ್ಟರು ಮಾತ್ರ ಹೇಳುತ್ತಿದ್ದಾರೆಯೇ? ಇಲ್ಲ. ಈ ಕುರಿತು ಇರುವ ಭಯ ನಮ್ಮೆಲ್ಲರಿಗೂ ಸಾಮಾನ್ಯವಾಗಿದೆ. ಆದ್ದರಿಂದ ಈ ಸಮಸ್ಯೆಯನ್ನು ನಾವೆಲ್ಲರೂ ವಿಶಾಲವಾದ ರಾಷ್ಟ್ರೀಯ ಹಾಗೂ ಪ್ರಜಾಪ್ರಭುತ್ವವಾದಿ ದೃಷ್ಟಿಕೋನದಿಂದ ಎದುರಿಸಬೇಕಾಗಿದೆ.

ಮಾನ್ಯ ಅಧ್ಯಕ್ಷರೆ, ನಾನು ನಿಮ್ಮ ಗಮನವನ್ನು ನ್ಯೂಯಾರ್ಕ್ ಟೈಮ್ಸ್ ಪತ್ರಿಕೆಯ ಕೆಲವು ಸಂಚಿಕೆಗಳೆಡೆಗೆ ಸೆಳೆಯಬಯಸುತ್ತೇನೆ. ನಾನು ಆ ಸಂಚಿಕೆಗಳನ್ನು ಒಂದನ್ನು ಬಿಟ್ಟು, ಅದು ನನಗೆ ದೊರೆಯದೆಯಿದ್ದುದರಿಂದ ತಂದಿದ್ದೇನೆ. ಈ ವರ್ಷದ ಏಪ್ರಿಲ್ ತಿಂಗಳ ಕೊನೆಯ ವಾರದಲ್ಲಿ ನ್ಯೂಯಾರ್ಕ್ ಟೈಮ್ಸ್ ಪತ್ರಿಕೆ ಸಿ.ಐ.ಎ. ಚಟುವಟಿಕೆಗಳ ಬಗ್ಗೆ ಸಾಕ್ಷ್ಯಾಧಾರ ಸಹಿತ ಕೆಲವು ಲೇಖನಗಳನ್ನು ಪ್ರಕಟಿಸಿದೆ. ಅದರಲ್ಲಿಯ ಒಂದು ಲೇಖನದಲ್ಲಿ ವಿವಿಧ ರಾಷ್ಟ್ರಗಳಲ್ಲಿ ಸಿ.ಐ.ಎ. ನಡೆಸುವ ಕಾರ್ಯಾಚರಣೆ ಕುರಿತು ಕೆಲವು ಕುತೂಹಲಕಾರಿ ಸಂಗತಿಗಳನ್ನು ಹೊರಹಾಕಿದೆ. ಅದು ಬೇರೆ ಬೇರೆ ರಾಷ್ಟ್ರಗಳ ರಾಜಕಾರಣದಲ್ಲಿ ಹಸ್ತಕ್ಷೇಪ ಮಾಡುವ ವಿಧಾನ, ಸರಕಾರಗಳನ್ನು ಉರುಳಿಸುವಲ್ಲಿ ತೋರಿಸುವ ಆಸಕ್ತಿ, ಒಂದನ್ನುರುಳಿಸಿ ತನ್ನ ಆಯ್ಕೆಯ ಮತ್ತೊಂದನ್ನು ಅಧಿಕಾರಕ್ಕೆ ತರುವುದಕ್ಕೆ ನಡೆಸುವ ಹುನ್ನಾರ ಮುಂತಾದ ವಿಷಯಗಳ ಕುರಿತ ವಿವರಗಳನ್ನು ಪ್ರಕಟಿಸಲಾಗಿದೆ. ನಾನು ಪ್ರಸ್ತಾಪಿಸಿದೆ. ನಾಲ್ಕು ಲೇಖನಗಳ ವಿಷಯ ಇದೇ ಆಗಿದೆ. ಮೂರನೇಯ ಲೇಖನವೊಂದನ್ನು ಬಿಟ್ಟು ಉಳಿದೆಲ್ಲವುಗಳನ್ನು ಇಲ್ಲಿಗೆ ತಂದಿದ್ದೇನೆ. ಈ ಸದನದ ಸನ್ಮಾನ್ಯ ಸದಸ್ಯರು ಅವುಗಳನ್ನು ಓದಬೇಕೆಂದು ನನ್ನ ವಿನಂತಿ. ಅಷ್ಟೇ ಅಲ್ಲ, ನಿಜ ಸಂಗತಿಯನ್ನು ತರಬಲ್ಲರೂ ತಿಳಿಯಬೇಕೆಂಬುವುದು ನಮ್ಮ ಬಯಕೆಯಾಗಿದೆಯಾದ್ದರಿಂದ ಈ ಲೇಖನಗಳನ್ನು ನಮ್ಮ ಸ್ವಂತ ಖರ್ಚಿನಲ್ಲಿ ಪ್ರಕಟಿಸಲು ಯೋಜಿಸುತ್ತಿದ್ದೇವೆ.

ಏಪ್ರಿಲ್ 26ನೇ ದಿನಾಂಕದ ಮೊದಲ ಲೇಖನವನ್ನು ನಾನಿಲ್ಲಿ ಓದಬಯಸುತ್ತೇನೆ. ನಿಮಗೆ ಗೊತ್ತಿರುವಂತೆ ಸಿಂಗಾಪುರ ಸ್ವತಂತ್ರವಾಗುವಾಗ ಸಿ.ಐ.ಎ. ಬ್ರಿಟೀಷ್ ಇಂಟಲಿಜೆನ್ಸಿ ಸರ್ವಿಸ್‌ನ ಮೇಲೆ ಅವಲಂಬಿಸುವಂತೆ ಇರಲಿಲ್ಲ. ಆದ್ದರಿಂದ ಅವರು ತಮ್ಮದೇ ಜನರನ್ನು ನೇಮಕ ಮಾಡಲು ಬಯಸಿದ್ದರು ಆದರ ತತ್ಪರಿಣಾಮವಾಗಿ, ಸಿಂಗಾಪುರನಲ್ಲಿ ಸಿ.ಐ.ಎ. ಚಟುವಟಿಕೆಗಳನ್ನು ನಡೆಸುವ ದೃಷ್ಟಿಯಿಂದ ಅಲ್ಲಿ ತಮ್ಮದೇ ಜನರ ನೇಮಕಾತಿಗಾಗಿ ಟೋಕಿಯೋದಿಂದ ಸಿಂಗಾಪುರಕ್ಕೆ ಒಬ್ಬ ವ್ಯಕ್ತಿ ಪ್ರಯಾಣ ಬೆಳೆಸಿದ ಆಮೇಲೆ ಅಲ್ಲಿ ಒಂದು

ಬಾಂಬ್ ಆಸ್ಫೋಟನೆ ಸಂಭವಿಸಿತು, ಅದಕ್ಕೆ ಸಂಬಂಧಿಸಿ ಆ ವ್ಯಕ್ತಿಯನ್ನು ಬಂಧಿಸಲಾಯಿತು. ಅದಾದ ಮೇಲೆ ಅನೇಕ ಸಂಗತಿಗಳು ಘಟಿಸಿದವು. ಕೆಲವು ವರ್ಷಗಳ ನಂತರ ಈ ಎಲ್ಲ ಕಥೆ ನ್ಯೂಯಾರ್ಕ್ ಟೈಮ್ಸ್ ನಲ್ಲಿ ಪ್ರಕಟವಾಯಿತು. ಅದು ಕಮ್ಯುನಿಷ್ಟ್ ಪತ್ರಿಕೆಯಲ್ಲ, ಇದನ್ನು ಸಾಧಿಸುವ ದೃಷ್ಟಿಯಿಂದ ಅವರು ಎಲ್ಲವನ್ನು ಮುಚ್ಚಿ ಹಾಕಬಯಸಿದರು. ಈ ಕುರಿತು ಪತ್ರಿಕೆ ಹೀಗೆ ಹೇಳುತ್ತದೆ.

"ಇದನ್ನು ಸಾಧಿಸುವ ಉದ್ದೇಶದಿಂದ ಮಿಸ್ಟರ್.ಲೀ. 1960ರಲ್ಲಿ ತನಗಾದ ಅವಮಾನದ ಸಂಗತಿಯ ಬಗ್ಗೆ ಹೇಳಿದ. ಆದರೆ, ಅವನು ಬೇಡಿದ ಮೂವತ್ತು ಮೂರು (33) ಮಿಲಿಯನ್ ಡಾಲರಿಗೆ ಬದಲಾಗಿ 3.3 ಮಿಲಿಯನ್ ಡಾಲರ್ ಜುಜುಬಿ ಲಂಚವನ್ನು ಮಾತ್ರ ಕೊಟ್ಟಿದ್ದರು ಎಂಬ ಸಂಗತಿಯನ್ನು ಬಿಟ್ಟರೆ ಈ ಕುರಿತು ಅವನು ಹೆಚ್ಚಿನ ಯಾವ ವಿವರವನ್ನು ಕೊಡಲಿಲ್ಲ.

ಆಮೇಲೆ ನ್ಯೂಯಾರ್ಕ್ ಪತ್ರಿಕೆ ಮುಂದುವರೆದು:

ರಾಜ್ಯ ಇಲಾಖೆಯು ಸಿ.ಐ.ಎ. ಅಧಿಕಾರಿಗಳ ತಂತ್ರಗಳ ಕುರಿತು ನಿರಂತರವಾಗಿ ತಮಗೆ ದೊರೆತ ತಪ್ಪು ಮಾಹಿತಿಯನ್ನಾಧರಿಸಿ ಈ ಇಡೀ ಪ್ರಕರಣವನ್ನು ಸುಳ್ಳು ಸತ್ಯಕ್ಕೆ ದೂರವಾದುದೆಂದು ವರ್ಣಿಸಿತು ಏತನ್ಮಧ್ಯೆ ರಸ್ಕ್ ಕ್ಷಮಾಪಣೆ ಕೇಳಿದ್ದು ಸಿ.ಐ.ಎ. ಅಧಿಕಾರಿಗಳಿಗೆ ಗೊತ್ತಿರಲಿಲ್ಲ. ಆದ್ದರಿಂದ ಮಿಸ್ಟರ್ ಲೀ 1961ರಲ್ಲಿ ಮಿಸ್ಟರ್ ರಸ್ಕ್ ಬರೆದ ಪತ್ರವನ್ನು ಪ್ರಕಟಿಸುವುದಾಗಿ ಹೇಳಿದ ಅಷ್ಟೇ ಅಲ್ಲ, ಪತ್ರಕರ್ತರ ಮುಂದೆ ಕೆಲವು ಟೇಪ್ ರಿಕಾರ್ಡಿಂಗ್‌ಗಳನ್ನು ಕೇಳಿಸುವುದಾಗಿ ಧಮ್ಕಿ ಹಾಕಿದೆ. ಪ್ರಧಾನ ಮಂತ್ರಿ ಮಿಸ್ಟರ್ ಲಿ ಸಮಗ್ರವಾಗಿ ಈ ಸಂಗತಿಗಳನ್ನು ಹೊರಹಾಕಿದ ಮೇಲೆ ಅಮೇರಿಕೆಯು ಅದನ್ನು ಚಾಲೇಂಜ್ ಮಾಡಲು ಪ್ರಯತ್ನಿಸಿತು. ಆಗ ಮಿಸ್ಟರ್ ಲೀ ಡೀನ್ ರಸ್ಕ್ ಇಡೀ ಘಟನೆಯ ಬಗ್ಗೆ ಕ್ಷಮಾಪಣೆ ಕೇಳಿ ಬರೆದ ಪತ್ರವನ್ನು ಪ್ರಕಟಿಸಿದನು. ಈ ಕುರಿತು ಅಮೇರಿಕನ್ನರು ಗೊಂದಲ ಸೃಷ್ಟಿಸಲು ಬಯಸಿದಾಗ, ಮಿಸ್ಟರ್ ಲೀ ತನ್ನ ಬಳಿ ಈ ಎಲ್ಲಾ ವಿಷಯ ಕುರಿತು ಟೇಪ್ ರೆಕಾರ್ಡಿಂಗ್‌ಗಳಿವೆ. ಅವುಗಳನ್ನು ನಾನು ಜಗಜ್ಜಾಹಿರಗೊಳಿಸುವೆ ಎಂಬುದಾಗಿ ಬೆದರಿಸಿದ ಇದು ಸಿ.ಐ.ಎ. ಕಾರ್ಯಾಚರಣೆ ಮಾಡುವ ವಿಧಾನ ಒಂದು ರಾಷ್ಟ್ರ ಸ್ವತಂತ್ರವಾಗುವ ಮುಂಚೆ ಸಿ.ಐ.ಎ. ಅಲ್ಲಿಗೆ ತನ್ನ ಪಾದ ಬೆಳೆಸಿ ಅಲ್ಲಿಯ ಸಂಧಿಗ್ದ ಪರಿಸ್ಥಿತಿಯ ಲಾಭ ಪಡೆದು, ತಮಗೆ ಬೇಕಾದವರನ್ನು ಅಧಿಕಾರದ ಗದ್ದುಗೆಯೇರಿಸಲು ತಂತ್ರ ಹೂಡಿತು. ಪ್ರಮಾದದಿಂದ ಸಿಕ್ಕಿಬಿದ್ದಾಗ ಅಪಾರ ಮೊತ್ತದ ಹಣ ಲಂಚ ಕೊಡುವುದಾಗಿ ಆಮಿಷವೊಡ್ಡಿ ಬಚಾವ್ ಆಗಿತ್ತು. ಅಲ್ಲಿಯ ಪ್ರಧಾನ ಮಂತ್ರಿಗೆ 3.3. ಮಿಲಿಯನ್ ಡಾಲರ್ ಕೊಟ್ಟಿರುವುದಾಗಿ ಸ್ವತಃ ಅಮೇರಿಕನ್ನರೇ ಒಪ್ಪಿದ್ದರು. ಈ ವಿಷಯವನ್ನು ಸ್ವತಃ

ಪ್ರಧಾನಮಂತ್ರಿಯೇ ಪತ್ರಿಕಾ ಗೋಷ್ಟಿಯಲ್ಲಿ ಬಹಿರಂಗಗೊಳಿಸಿದ್ದ. ಇದೆಲ್ಲವೂ ಸಾರಾಸಗಟು ಸುಳ್ಳುಯೆಂದು ಅಮೇರಿಕಾ ಹುಯಿಲೆಬ್ಬಿಸಿದಾಗ, ಪ್ರಧಾನ ಮಂತ್ರಿಯೂ ಈ ವಿಷಯ ಕುರಿತು ಮಿಸ್ಟರ್ ರಸ್ಕ್ ಬರೆದ ಕ್ಷಮಾಪಣೆ ಪತ್ರವನ್ನು ಪತ್ರಕರ್ತರ ಮುಂದೆ ಬಿಚ್ಚಿಟ್ಟ. ಇದು ಸಿ.ಐ.ಎಯ ಕಾರ್ಯವೈಖರಿ ಪ್ರತಿಯೊಂದು ರಾಷ್ಟದಲ್ಲಿಯೂ ತಳವೂರಿ ಎಲ್ಲಕ್ಷೇತ್ರಗಳಿಗೂ ತನ್ನ ಕಬಂಧ ಬಾಹುಗಳನ್ನು ಚಾಚುತ್ತಿರುವ ಸಿ.ಐ.ಎ. ನಮ್ಮ ಚುನಾವಣೆಗಳ ಮೇಲೆ ಪ್ರಭಾವ ಬೀರಿ ತನ್ನ ಆಯ್ಕೆಯ ಶಕ್ತ ವ್ಯಕ್ತಿಗಳನ್ನು ಅಧಿಕಾರದ ಗದ್ದುಗೆಗೇರಿಸಲು, ಪಕ್ಷ ಪಂಗಡ ಮರೆತು ತನಗೆ ಬೇಕಾದ ವ್ಯಕ್ತಿಗೆ ಅಧಿಕಾರ ದೊರೆಯುವಂತೆ ಮಾಡಲು ನಮ್ಮ ಚುನಾವಣೆಗಳಲ್ಲಿ ಅದು ಆಸಕ್ತಿ ತೋರಿಸುವುದಿಲ್ಲವೆಂಬುದಕ್ಕೇನು ಗ್ಯಾರಂಟಿ? ಮತ್ತೆ ನ್ಯೂಯಾರ್ಕ್ ಟೈಮ್ ತನ್ನ ಏಪ್ರಿಲ್ 27ರ ಸಂಚಿಕೆಯ ಲೇಖನದಲ್ಲಿ ಹೀಗೆ ಬರೆದಿದೆ.

ವಿವಿಧ ದೇಶಗಳ ವ್ಯಕ್ತಿ, ಅಥವಾ ಅಲ್ಲಿಯ ಪರಿಸ್ಥಿತಿಯ ಕುರಿತು ಎಲ್ಲಾ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸುವ ಮೌಲ್ಯವಿವೇಚನೆ ನಡೆಯಿಸುವ ಆ ಮೂಲಕ ದೈನಂದಿನ ಗುಪ್ತ ವರದಿಗಳನ್ನು ತಯಾರಿಸುವ ಜವಾಬ್ದಾರಿ ಇಂಟಲಿಜೆನ್ಸಿ ವಿಭಾಗದ್ದಾಗಿದೆ. ಹೀಗೆ ತಯಾರಿಸಲಾಗುವ ವರದಿಗಳನ್ನು ಅಧ್ಯಕ್ಷರಿಗೆ ಹಾಗೂ ರಾಷ್ಟೀಯ ಭದ್ರತಾ ಮಂಡಳಿಗಳಿಗೆ ಅಷ್ಟೇಯಲ್ಲ, ರಾಷ್ಟೀಯ ರಕ್ಷಣೆ ಮತ್ತು ವಿದೇಶಿ ನೀತಿಯ ಕುರಿತು ಅಧ್ಯಕ್ಷರಿಗೆ ಸಲಹೆ ಮಾಡಲಿರುವ ಸಲಹಾಮಂಡಳಿಗೂ ಸಲ್ಲಿಸುವ ಹೊಣೆಗಾರಿಕೆ ಇಂಟಲಿಜೆನ್ಸ್ ವಿಭಾಗದ್ದೇ ಆಗಿದೆ.

ಈ ಎಲ್ಲ ಕೆಲಸವನ್ನು ಸಿ.ಐ.ಎ. ಸುಸೂತ್ರವಾಗಿ ನಡೆಸುತ್ತದೆ. ಇಲ್ಲಿಯ ವರದಿಯೊಂದರಲ್ಲಿ ಅವರು ಅಧ್ಯಕ್ಷ ನಾಸೇರ್‌ನ್ನು ಕೊಲೆಮಾಡಲು ಬಯಸಿದ್ದರೆಂಬುದನ್ನು ನೀವು ಕಾಣಬಹುದು. ಅಧ್ಯಕ್ಷ ನಾಸೇರ್‌ರನ್ನು ಕೊಲೆಗೆ ಸಂಚು ಹೂಡಿದ್ದರು. ಈ ಕುರಿತು ನ್ಯೂಯಾರ್ಕ್ ಟೈಮ್ಸ್ ಲೇಖನವೊಂದನ್ನು ಪ್ರಕಟಿಸಿದೆ.

ಅದು ಬ್ರಿಟೀಷ್ ಗಯಾನಾ, ಕಾಂಗೋ ಮುಂತಾದ ರಾಷ್ಟಗಳಲ್ಲಿ ತನ್ನ ಜನರನ್ನು ಗದ್ದುಗೆಗೇರಿಸುವ ಉದ್ದೇಶದಿಂದ ಮಾಡಿದ ಹಸ್ತಕ್ಷೇಪದ ಕುರಿತು ಇಲ್ಲಿ ಅನೇಕ ಕಥೆಗಳಿಗೆ. ಇಂದು ಭಾರತ ಅವರ ಮುಖ್ಯ ಗುರಿಯಾಗಿದೆ. ಯಾಕೆಂದರೆ, ಅಭಿವೃದ್ಧಿಶೀಲ ರಾಷ್ಟಗಳಿಗೆ ಹರಿದು ಬರುತ್ತಿರುವ ವಿದೇಶಿ ಸಹಾಯದ ಹೆಚ್ಚಿನ ಭಾಗ ಭಾರತ ಪಡೆಯುತ್ತಿದೆ. ಮತ್ತು ಈ ಸಹಾಯ ಹಣದ ರೂಪದಲ್ಲಿ ಬರುತ್ತಿದೆ. ಭಾರತಕ್ಕೆ ತನ್ನದೇಯಾದ ವಿಶೇಷ ಸ್ಥಾನವಿದೆ. ಭಾರತದ ಐಕ್ಯತೆ, ಅದರ ಸ್ವಾತಂತ್ರ್ಯ, ಅದರ ಅಲಿಪ್ತ ನೀತಿ, ಇತ್ಯಾದಿಗಳನ್ನು ಹಾಳುಗೆಡುವ ಬೇಕೆಂಬುದೇ ಅಮೇರಿಕೆಯ ಮುಖ್ಯ ವಿದೇಶ ನೀತಿಯಾಗಿದೆ. ಮತ್ತು ಇದರಿಂದ ಅವರಿಗೆ ರಾಜಕೀಯ ಲಾಭವೂ ಸಾಕಷ್ಟಾಗುತ್ತದೆ. ಈ ಕಾರಣಕ್ಕಾಗಿಯೇ ಇಂದು ಅಮೇರಿಕೆಯೂ

ನಮ್ಮ ಚುನಾವಣೆಗಳಲ್ಲಿ ತನ್ನ ಮೂಗು ತೂರಿಸಲು, ಆಸಕ್ತಿ ತೋರಿಸುತ್ತಿದೆ. ಮುಂಬರುವ ಮಹಾ ಚುನಾವಣೆಯಲ್ಲಿ ಸಿಐಎ, ಸುಮಾರೂ ಒಂದು ಕೋಟಿ ರೂಪಾಯಿಗಳಷ್ಟು ಹಣ ಖರ್ಚು ಮಾಡಲಿದೆಯೆಂಬ ಸುದ್ದಿ ಪತ್ರಿಕೆಗಳಲ್ಲಿ ವರದಿಯಾಗಿದೆ. ಅದು ಒಂದು ಕೋಟಿಯಾಗಿರಬಹುದು ಅಥವಾ 50 ಕೋಟಿಯೂ ಆಗಬಹುದು. ಅಷ್ಟೇ ಯಾಕೆ, 150 ಕೋಟಿಗೂ ತಲುಪಬಹುದು. ಇದಾವುದು ನನಗೆ ನಿಖರವಾಗಿ ಗೊತ್ತಿಲ್ಲ. ಆದರೆ, ಸಿಐಎ ಹಣ ಹರಿದು ಬರುತ್ತಿದೆ ಎಂಬ ಸಂಗತಿ ಮಾತ್ರ ಎಲ್ಲೆಲ್ಲೂ ಎಲ್ಲರ ಬಾಯಿಯಲ್ಲೂ ಎಲೆಯಡಿಕೆಯಾಗಿದೆ. ಜೊತೆಗೆ ಪಿಎಲ್ 480 ನಿಧಿಯ ಕಾರಣದಿಂದಾಗಿ ಈಗಾಗಲೇ ಬೃಹತ್ ಮೊತ್ತದ ಹಣ ಇಲ್ಲಿಯ ಅಮೇರಿಕನ್ನರಲ್ಲಿ ಸಂಗ್ರಹವಾಗುತ್ತಿದೆ ಎಂಬುದು ಎಲ್ಲರ ಮನೆ ಮಾತಾಗಿದೆ. ಮೊನ್ನೆ ಇನ್‌ಫರ್‌ಮೇಶನ್ ಸರ್ವೀಸಸ್ ಮತ್ತು ಎಂಬಸ್ಸಿಗಳು ರೂ. 48 ಕೋಟಿಗಳಷ್ಟು ಬೃಹತ್ ಮೊತ್ತದ ಹಣ ಹೇಗೆ ಖರ್ಚು ಮಾಡಿವೆ ಎಂಬುದನ್ನು ಈ ಸದನದ ಗಮನಕ್ಕೆ ತರಲಾಯಿತು. ಈ ಎಲ್ಲ ಹಣ ಹೋಗುವುದೆಲ್ಲಿಗೋ? ಆದ್ದರಿಂದ ಈ ಬಾರಿ ಸಿಐಎ ಭಾರಿ ಮೊತ್ತದ ಹಣದೊಂದಿಗೆ ಚುನಾವಣೆಯಲ್ಲಿ ಕೈಹಾಕಲಿದೆ ಎಂಬ ನಮ್ಮ ಚಿಂತನೆ ಸಕಾರಣವಾದದ್ದೇ. ನಮಗೆ ದೊರೆತ ಮಾಹಿತಿಯ ಪ್ರಕಾರ, 7ನೇ ನವೆಂಬರ್‌ನ ಮತ ಪ್ರದರ್ಶನದ ಹಿಂದೆ ಸಿಐಎ ಕೈಯಿತ್ತು. ನಮ್ಮ ದೇಶದ ಮರ್ಯಾದೆ ಮಣ್ಣುಗೂಡಿಸಿ, ಮುಖಕ್ಕೆ ಮಸಿ ಬಳಿದು, ಸರ್ಕಾರದಲ್ಲಿ ಅರಾಜಕತೆಯುಂಟು ಮಾಡಬೇಕೆಂಬುದೇ ಇದರ ಉದ್ದೇಶವಾಗಿತ್ತು. ಇದರ ಲಾಭವೆಲ್ಲ ಸಿಐಎ ಏಜೆಂಟರಿಗೆ ಮತ್ತು ಸಿಐಎ ಶೋಷಣೆಗೊಳಗಾಗಿರುವ ದೇಶೀ ಪ್ರತಿಗಾಮೀ ವ್ಯಕ್ತಿಗಳಿಗೆ. ಆದ್ದರಿಂದ, ನಾವು ಎದುರಿಸಬೇಕಾಗಿರುವುದು ನಮ್ಮ ರಾಷ್ಟ್ರದೊಳಗಿನ ಪ್ರತಿಗಾಮಿಗಳ ಮೂಲದಿಂದ ಬರುವ ಬೃಹತ್ ಮೊತ್ತದ ಹಣವನ್ನಷ್ಟೇಯಲ್ಲ, ಸಿಐಎ ಏಜೆಂಟ್‌ಗಳ ಮೂಲಕ ಚುನಾವಣೆಯಲ್ಲಿ ನೇರವಾಗಿ ಬಳಕೆಯಾಗಲಿರುವ ಅಮೇರಿಕೆಯ ಹಣವನ್ನು ಕೂಡ ನಾವು ಎದುರಿಸಬೇಕಾಗಿದೆ. ಇತ್ತೀಚೆಗೆ "ಯು.ಎಸ್" ಎಂಬಸ್ಸಿಯ ರಾಜಕೀಯ ಸಲಹೆಗಾರ ಮಿಸ್ಟರ್ ಲಿಯೋನಾರ್ಡ್ ಬಿಹಾರದ ಮುಖ್ಯಮಂತ್ರಿಯಾಗಿರುವ ಕೆ.ಬಿ. ಸಹಾಯ್ ಅವರಿಗೆ ಭೇಟಿಯಾದದ್ದನ್ನು ನಾವು ನಿರ್ಲಕ್ಷಿಸಬಹುದೇ? ಮಿಸ್ಟರ್ ಲಿಯೋನಾರ್ಡ್ ನಮ್ಮ ಚುನಾವಣೆಗಳಲ್ಲಿ ತುಂಬಾ ಆಸಕ್ತಿ ತೋರುತ್ತಿದ್ದಾನೆ. ಇದಲ್ಲದೆ, ಅಮೇರಿಕದ ಕೆಲವು ಪ್ರತಿನಿಧಿಗಳು ಕಾಂಗ್ರೆಸ್ಸಿನ ರಾಜಕೀಯ ನಾಯಕರನ್ನು ಪಾಟ್ನಾದಲ್ಲಿ ಭೇಟಿಯಾಗಿದ್ದಾರೆ. ಬಿಹಾರಿನ ಬರಪೀಡಿತ ಪ್ರದೇಶದಲ್ಲಿಯೂ ಪರಿಹಾರ ಕಾರ್ಯಕ್ರಮದ ಒಂದು ಭಾಗವನ್ನು ಬಿಹಾರ ಮುಖ್ಯಮಂತ್ರಿಗಳು ಕೇರ್ ಎಂಬ ಅಮೇರಿಕೆಯ ಸಂಘಟನೆಗೆ ವಹಿಸಿಕೊಟ್ಟಿರುವುದು ನಿಮಗೆ ಗೊತ್ತಿರಲು ಸಾಕು. "ಕೇರ್" ಎಂಬುದು ಕೋ ಆಪರೇಟೀವ್ ಅಮೇರಿಕನ್ ರಿಲೀಫ್ ಎವರಿವೇರ್" ಎನ್ನುವುದರ ಸಂಕ್ಷಿಪ್ತ ರೂಪವಾಗಿದೆ. ಅದು ಹೆಸರಿಗೆ ಮಾತ್ರ ಒಂದು ಸಹಕಾರಿ ಸಂಸ್ಥೆ; ಆದರೆ ವಾಸ್ತವವಾಗಿ ಅದು ರಾಜ್ಯ ಇಲಾಖೆಯ ಒಂದು ಅಂಗ ಸಂಸ್ಥೆಯಾಗಿದೆ. ಈ ಕುರಿತು ನಮ್ಮ ಗೃಹ ಸಚಿವಾಲಯ ಏನು ಮಾಡುತ್ತಿದೆಯೋ ನನಗೆ ಗೊತ್ತಿಲ್ಲ. ರಾಷ್ಟ್ರದಲ್ಲಿ ಇಂತಹ ಸಂಗತಿಗಳು

ಘಟಿಸುತ್ತಿರುವುದು ಅವರಿಗೆ ಗೊತ್ತಿರುವಂತೆ ಕಾಣುವುದಿಲ್ಲ. ಆದರೆ ಇದೆಲ್ಲಾ ಪ್ರತಿಯೊಬ್ಬನಿಗೂ ಗೊತ್ತಿದೆ. ಕೆಲವು ಕಾಂಗ್ರೆಸ್ ನಾಯಕರ ಮೇಲೆ ವಿಶೇಷವಾಗಿ, ದೊಡ್ಡ ದೊಡ್ಡ ನಾಯಕರ ಮನೆಗಳ ಮೇಲೆ ತುಸು ಕಣ್ಣಿಟ್ಟರೂ ಸಾಕು, ಇಲ್ಲಿ ನಡೆಯುವುದೆಲ್ಲವೂ ತಮ್ಮ ಅರಿವಿಗೆ ಬರುತ್ತದೆ. ದೊಡ್ಡ ದೊಡ್ಡ ಬಂಡವಾಳಶಾಹಿಗಳು ಚರ್ಚೆ, ಜಿಜ್ಞಾಸೆಗಳ ಗೋಷ್ಠಿ ನಡೆಸಲು ಬಂದು ಹೋಗುತ್ತಾರೆ. ಅಷ್ಟೇ ಅಲ್ಲದೆ, ಅಮೇರಿಕೆಯ ಅಧಿಕಾರಿಗಳೂ ಬಂದು ಹೋಗುವುದನ್ನು ಕಾಣಬಹುದು. ಒಮ್ಮೆ ಅಮೇರಿಕನ್ ಎಂಬಸ್ಸಿಯ ಕಾರ್ಯದರ್ಶಿಯೊಬ್ಬ ಕಾಂಗ್ರೆಸ್ ನಾಯಕನಿಗೆ ಬರೆದ ಪತ್ರವೊಂದು ತಪ್ಪಿ ನನ್ನ ಕೈಸೇರಿತು. ಹೀಗೆ ತಪ್ಪಾಗಿ ಬಟವಾಡೆಯಾದ ಪತ್ರದಲ್ಲಿ ಆ ನಾಯಕರು ಅಮೇರಿಕನ್ ರಾಜದೂತನಿಗೆ ಭೇಟಿಯಾಗಲು ವಿಶೇಷ ವ್ಯವಸ್ಥೆ ಮಾಡಲಾದ ಬಗ್ಗೆ ಸೂಚಿಸಲಾಗಿತ್ತು. ಇವೆಲ್ಲ ರಾಜಾರೋಷವಾಗಿಯೇ ನಡೆಯುತ್ತವೆ. ಅಂಚೆ ಮೂಲಕ ಕೂಡ ಅವರು ಇಂತಹ ಚರ್ಚೆ ಮಾತುಕತೆಗಳನ್ನು ನಡೆಸುತ್ತಿದ್ದಾರೆ. ಆದ್ದರಿಂದ, ಈ ಎಲ್ಲ ಸಂಗತಿಗಳನ್ನು ಗಮನದಲ್ಲಿಡಬೇಕೆಂದು ನಾನು ಹೇಳುತ್ತೇನೆ. ಇಂದು ಸಿಐಎ ಕಾರ್ಯಾಚರಣೆಗೆ ಇಳಿದು ಅಖಾಡದಲ್ಲಿ ಕಾಣಿಸಿಕೊಂಡಿದೆ. ಕಮ್ಯುನಿಸ್ಟರು ಎಷ್ಟೇ ಬಯಸಿದರೂ ಅವರು ನಿಮಗೆ ಹೆಚ್ಚಿನ ತೊಂದರೆ ಕೊಡಲಾರರು. ನಾನು ಕಾಂಗ್ರೆಸ್ಸಿನಷ್ಟೇ ನಿಮಗೆ ತೊಂದರೆ ಕೊಡಲು ಬಯಸುತ್ತೇನೆ. ಅದು ನನ್ನಿಂದ ಸಾಧ್ಯವಿಲ್ಲ. ಆದರೆ ಸರ್ಕಾರದ ಉನ್ನತ ಹಂತದಲ್ಲಿ ತನ್ನ ಜನರನ್ನು ನುಸುಳಿಸಿರುವ ಕಾರ್ಯದರ್ಶಿಗಳ ಮಂಡಳಿ ಹಾಗೂ ಇತರ ಅಧಿಕಾರದ ಸಂಘಟನೆಗಳಲ್ಲಿ ತನ್ನ ಜನರನ್ನು ಒಳಹೊಕ್ಕಿಸಿರುವ ಸಿಐಎ ತನ್ನ ಕೈಯಲ್ಲಿ ಸಾಕಷ್ಟು ಹಣ ಇಟ್ಟುಕೊಂಡು ಭಾರಿ ಭಾರಿ ಉದ್ದಿಮೆದಾರರೊಂದಿಗೆ ಸಖ್ಯ ಬೆಳೆಸಿರುವುದು. ನಾವು ಕಟ್ಟಿ ಬೆಳೆಸಿರುವ ಎಲ್ಲದಕ್ಕೂ ಪ್ರಚ್ಛನ್ನ ಭೀತಿಯಾಗುವ ಅಪಾಯದ ಸಂಕೇತವಾಗಿದೆ. ಈ ನಮ್ಮ ಸಂಸತ್ತಿನ ಸದನವನ್ನು ಸುಟ್ಟು ಭಸ್ಮಮಾಡಲು ಇಲ್ಲಿ ಯಾರೂ ಗೈಫಾಕ್ಸ್ ಪ್ರವೇಶಿಸುವುದಿಲ್ಲ. ಆದರೆ, ಸರ್ಕಾರ ತುಸು ಎಚ್ಚರ ತಪ್ಪಿದರೂ ಸಾಕು ಈ ಸಂಸ್ಥೆ ಸಂಸದೀಯ ಪ್ರಜಾಪ್ರಭುತ್ವ ಎಲ್ಲವೂ ಹಾಳು ಬೀಳುತ್ತವೆ. ಆಳುವ ಪಕ್ಷದ ಕೆಲವು ಸದಸ್ಯರು ಮತ್ತು ಕೆಲವು ಪ್ರತಿಗಾಮಿ ವಿರೋಧ ಪಕ್ಷಗಳ ಸದಸ್ಯರು ಸಿಐಎ ಯ ಜೊತೆ ಕೂಡಿ, ನಡೆಸುತ್ತಿರುವ ಪಿತೂರಿಯ ಪರಿಣಾಮವಾಗಿ ಎಲ್ಲವೂ ಧ್ವಂಸಗೊಳಿಸಲಾಗುತ್ತದೆ. ಇಂದು ಇದೇ ಮುಖ್ಯ ಗಂಡಾಂತರಕಾರಿಯಾಗಿದೆ. ಒಂದೆಡೆ, ಜನತೆಯಲ್ಲಿರುವ ಅತೃಪ್ತಿಯ ಲಾಭ, ಇನ್ನೊಂದೆಡೆ, ನಾಯಕತ್ವದ ಅವನತಿ, ಕಾಂಗ್ರೆಸ್ ಹೈಕಮಾಂಡ್‌ನಲ್ಲಿ ಕಂಡುಬರುತ್ತಿರುವ ನೈತಿಕ ಮತ್ತು ರಾಜಕೀಯ ಅಧಃಪತನ, ಇವುಗಳ ಲಾಭ ಪಡೆಯುತ್ತಿರುವ ಪ್ರತಿಗಾಮಿ ಶಕ್ತಿಗಳು, ಬಲಪಂಥೀಯ ಪ್ರತಿಗಾಮಿಗಳು ಅಮೇರಿಕೆಯವರೊಂದಿಗೆ ಜೊತೆಗೂಡಿ ನಾಲ್ಕನೇ ಸಾರ್ವತ್ರಿಕ ಚುನಾವಣೆಗಳಲ್ಲಿ ಒಂದು ಬೃಹತ್ ಪ್ರಮಾಣದ ಸೆಣಸಾಟವನ್ನು ಸಂಘಟಿಸಲಿದ್ದಾರೆ. ಇದು ನಮ್ಮ ರಾಷ್ಟ್ರದ ಮುಂದಿರುವ ಒಂದು ಪ್ರಮುಖ ಪಂಥಾಹ್ವಾನವಾಗಿದೆ. ಈ ಆಹ್ವಾನ ಕೇವಲ ಗೋಹತ್ಯೆ ನಿಷೇಧಕ್ಕಾಗಿ ನಡೆಸುವ ಪ್ರತಿಭಟನೆಯಷ್ಟೇ ಅಲ್ಲ, ಇನ್ನಿತರ ಅನೇಕ ಚಟುವಟಿಕೆಗಳಲ್ಲಿಯೂ ಇದು

ಧಾರಾಳವಾಗಿ ಕಂಡುಬರುತ್ತಿದೆ. ಆದ್ದರಿಂದ, ಸಿಐಎ ದ "ಮೂಂಮೆ ರಾಮ್ ರಾಮ್, ಬಗಲ್ಮೆ ಚೂರಿ" ಯ ಧೋರಣೆಯೊಂದಿಗೆ ಬೃಹತ್ ಮೊತ್ತದ ಹಣದ ಹೊಳೆ ಹರಿಸುತ್ತಾ, ಮುನ್ನುಗ್ಗಿ ಬರಲಿವೆಯೆಂದು ನಾನು ಹೇಳಬಯಸುತ್ತೇನೆ. ನಮಗೆ ಎಲ್ಲ ಜನರುಗಳ ಹೆಸರುಗಳು ಗೊತ್ತಿವೆ, ಆದರೆ ಅವುಗಳನ್ನು ಬಹಿರಂಗಪಡಿಸಲು ಇಚ್ಛಿಸುವುದಿಲ್ಲ.

ಇತ್ತೀಚೆಗೆ ದೊಡ್ಡ ದೊಡ್ಡ ಕಂಟ್ರಾಕ್ಟರುಗಳು ಹಾಗೂ ಅವರ ಹಸ್ತಕರು ರಾಜಕಾರಣದಲ್ಲಿ ಪ್ರವೇಶಿಸುತ್ತಿದ್ದಾರೆ. ಆದರೆ, ಬಂಡವಾಳಶಾಹಿಗಳಿಗೆ ಇವರ ನಡವಳಿಕೆಗಳ ಬಗ್ಗೆ ಭರವಸೆ ಇಲ್ಲ. ಆದ್ದರಿಂದ ಪರಿಸ್ಥಿತಿಯ ಲಾಭ ಪಡೆದು, ಸ್ವತಃ ಅವರೇ ಸಂಸತ್ತನ್ನು ಪ್ರವೇಶಿಸಲು ಇಚ್ಛಿಸುತ್ತಿದ್ದಾರೆ. ಎಷ್ಟು ಜನ ಚುನಾಯಿತರಾಗಿ, ಲೋಕಸಭೆಯಲ್ಲಿ ಕೂಡುವರೋ ನನಗೆ ಗೊತ್ತಿಲ್ಲ. ಆದರೆ, ಕೆಲವೇ ಕೆಲವು ಜನ ಮಾತ್ರ ಗೆಲ್ಲುವ ಸಾಧ್ಯತೆಯಿರುವುದನ್ನು ನಾವು ನೋಡಬಹುದು. ಈಗ ರಾಜ್ಯದ ಆಡಳಿತ ಯಂತ್ರದ ಬಗ್ಗೆ ಹೇಳುವುದಾದರೆ, ಅದನ್ನು ದುರುಪಯೋಗಿಸಲಾಗುತ್ತದೆ. ನನ್ನ ಗೊತ್ತುವಳಿಯಲ್ಲಿ ಎರಡನೇ ಅಂಶ ಇದನ್ನೇ ಕುರಿತು ಇದೆ. ನಾನು ಈ ಕಡೆ ತಮ್ಮ ಗಮನ ಸೆಳೆಯಲು ಬಯಸುತ್ತೇನೆ. ನಾನು ಮಂಡಿಸುವ ಪ್ರತಿಯೊಂದು ವಿಷಯಕ್ಕೂ ಯಾವಾಗಲೂ ಸಾಕ್ಷ್ಯಾಧಾರದ, ದಾಖಲೆಗಳ ಬೆಂಬಲ ಇಟ್ಟುಕೊಂಡಿರುತ್ತೇನೆ. ಇದು 1966 ಸೆಪ್ಟೆಂಬರ್ 30ರಂದು "ಹೂಗ್ಲಿ ಇಂಟಲಿಜೆನ್ಸ್ ಬ್ರಾಂಚ್" ಹೊರಡಿಸಿದ ಸುತ್ತೋಲೆಯೊಂದರ "ಫೋಟೋಸ್ಟಾಟ್"ಇಲ್ಲಿದೆ. ಈ ಫೋಟೋಸ್ಟಾಟ್ ನಮ್ಮ ಪತ್ರಿಕೆಯಲ್ಲಿ ಅಂತೆಯೇ ಇತರ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಅದು ಅವರು ಚುನಾವಣೆಗಳನ್ನು ಪರಿಭಾವಿಸುವ ದೃಷ್ಟಿಯನ್ನು ತೋರಿಸಿಕೊಡುತ್ತದೆ. ನಾನು ಪ್ರಸ್ತಾಪಿಸಿದ ಸುತ್ತೋಲೆಯೂ ಬರ್ಧ್‌ವಾನ್ ವಲಯದ ಡೆಪ್ಯೂಟಿ ಇನ್ಸ್‌ಪೆಕ್ಟರ್ ಆಫ್ ಪೋಲೀಸ್ ಅವರು ದಿನಾಂಕ:27-09-1966ರಂದು ಶ್ರೀ ಬಿ.ಕೆ. ಬಸು, ಹೂಗ್ಲಿಯ ಸೂಪರಿಂಟೆಂಡೆಂಟ್ ಆಫ್ ಪೋಲೀಸರಿಗೆ ಬರೆದ ಪತ್ರದ ಪ್ರತಿಯಾಗಿದೆ. (ಡಿ.ಓ.ನಂ. 752(6))ಸಿ. ನಾನು ಇಲ್ಲಿ ಅದನ್ನು ಸಮಗ್ರವಾಗಿ ಓದಬಯಸುವುದಿಲ್ಲ. ಕೇವಲ ಚುನಾವಣೆಗಳಿಗಷ್ಟೇ ಸಂಬಂಧಿಸಿದ ಭಾಗವನ್ನು ತಮ್ಮ ಮುಂದೆ ಇಡುತ್ತೇನೆ; ಅದರ ಉದ್ಧರಣೆ ಇಂತಿದೆ.

"ಆರಂಭದಲ್ಲಿಯೇ ಕಠಿಣ ಕ್ರಮಗಳನ್ನು ಕೈಗೊಳ್ಳುವ ಮೂಲಕ ಮುಂದೆ ಉದ್ಭವಿಸಲಿರುವ ಗಂಭೀರ ಪರಿಣಾಮವನ್ನು ತಪ್ಪಿಸಬಹುದೆಂಬುದನ್ನು ಎಂದಿನಿಂದಲೂ ನಾನು ನನ್ನ ಅಧಿಕಾರಿಗಳಿಗೆ ಲಾಗಾಯ್ತಿನಿಂದ ಹೇಳುತ್ತಲೇ ಬಂದಿದ್ದೇನೆ. ವಿರೋಧ ಪಕ್ಷಗಳ ಹುಟ್ಟಡಗಿಸಲು ದೊಡ್ಡ ಸಂಖ್ಯೆಯಲ್ಲಿ ಪೂರ್ವಭಾವಿ ಬಂಧನಗಳನ್ನು ಕೈಗೊಳ್ಳಬೇಕು. ನೀವಿದನ್ನು ನಿಮ್ಮ ಸ್ಥಳೀಯ ಅಧಿಕಾರಿಗಳ ಮಾರ್ಗದರ್ಶನಕ್ಕಾಗಿ ಎಲ್ಲರಿಗೂ ಕಳುಹಿಸಿಕೊಟ್ಟಲ್ಲಿ ಉಪಕೃತನಾಗಿರುತ್ತೇನೆ" ಈ ಸಂದರ್ಭದಲ್ಲಿಯೇ ಅವರು, "ದಯವಿಟ್ಟು ಇದನ್ನು ನಿಮ್ಮ ಎಲ್ಲ ಪೇದೆಗಳಿಗೆ ತಿಳಿಸುವ ಕೃಪೆ ಮಾಡಬೇಕು" ಎಂದು ಬರೆದಿದ್ದಾರೆ.

ವಿರೋಧ ಪಕ್ಷಗಳ ಹೋರಾಟದ ಚೈತನ್ಯವನ್ನು ಬಗ್ಗುಬಡಿಯಬೇಕೆಂದು ತಮ್ಮ ಸುತ್ತೋಲೆಯಲ್ಲಿ ಲಿಖಿತವಾಗಿ ತಿಳಿಸಿರುವ ಬರ್ಧ್‌ವಾನ್ ವಲಯದ ಡಿಐಜಿ ಯವರ ಈ ಕ್ರಮ ಗಮನಾರ್ಹ. ಯಾಕೆಂದರೆ, ಹೀಗೆ ಬರೆಯಲಾದ ಪತ್ರವನ್ನು ಎಲ್ಲ ಪೋಲೀಸ್ ಅಧಿಕಾರಿಗಳಿಗೆ ಕಳುಹಿಸುವ ವ್ಯವಸ್ಥೆ ಮಾಡಲಾಗಿದೆ. ಅಷ್ಟೇ ಅಲ್ಲ, ಎಲ್ಲ ಹಂತದ ವ್ಯಕ್ತಿಗಳಿಗೂ ತಿಳಿಸಬೇಕೆಂದು ಕೋರಲಾಗಿದೆ. ಈಗ ನೋಡಿದರೆ, ಚುನಾವಣೆಗಳೆಲ್ಲಾ ಶಾಂತವಾಗಿ ನಡೆಯುವಂತೆ ಶ್ರೀ ಚವ್ಹಾಣ್ ಅವರು ನೋಡಿಕೊಳ್ಳಲಿರುವರು; ಎಂದು ನಮಗೆ ಹೇಳಲಾಗಿದೆ. ಆದರೆ, ಇದರ ಜೊತೆಗೇ ಡಿಐಜಿ ಯವರು ವಿರೋಧ ಪಕ್ಷಗಳನ್ನು ಬಗ್ಗು ಬಡಿಯಲು ತಮ್ಮ ಕೆಳ ಅಧಿಕಾರಿಗಳಿಗೆ ಕಳುಹಿಸಿದ ಸಂದೇಶದ ಪ್ರತಿಯೂ ನಮ್ಮ ಮುಂದೆಯಿದೆ. ಸರ್ಕಾರ ವಾಸ್ತವವಾಗಿ ಏನು ಮಾಡುತ್ತಿದೆಯೆಂಬುದನ್ನು ನಾನು ತಿಳಿಯಬಯಸುತ್ತೇನೆ. ಈ ವ್ಯಕ್ತಿಯನ್ನು ಕೂಡಲೇ ವಜಾ ಮಾಡುವ ಅವಶ್ಯಕತೆಯಿಲ್ಲವೇ?

ವಿರೋಧ ಪಕ್ಷಗಳ ಮೇಲೆ ನಿಗಾಯಿಟ್ಟು ಅವುಗಳ ದಾರಿಯಲ್ಲಿ ತೊಂದರೆಗಳನ್ನು ಸೃಷ್ಟಿಸಲು ಸಿದ್ಧತೆಗಳು ನಡೆಯುತ್ತಿರುವುದು ಬಂಗಾಳದಲ್ಲಿ ಎಲ್ಲರಿಗೂ ಗೊತ್ತಿದೆ. ವಿರೋಧಿಗಳ ಮೇಲೆ ಛೂ ಬಿಡಲು ಅನೇಕ ಸ್ಥಳಗಳಲ್ಲಿ ಗೂಂಡಾ ಗ್ಯಾಂಗ್‌ಗಳನ್ನು ಸಂಘಟಿಸಲಾಗುತ್ತಿದೆ. ಶ್ರೀ ಎಸ್.ಕೆ.ಪಾಟೀಲರಂತೂ ಒಂದು ಧರ್ಮಯುದ್ಧದ ನೇತೃತ್ವವನ್ನು ವಹಿಸಿಕೊಳ್ಳುತ್ತಿದ್ದಾರೆ. ಅವರು ಸರ್ಕಾರದ ಪ್ರಧಾನ ಸಾಧನವಾಗಿದ್ದಾರೆ. ಅವರ ಮೂಲಕ ದೇಶಿ ಹಾಗೂ ವಿದೇಶಿ ಕರಾಳ ಪ್ರತಿಗಾಮಿ ಶಕ್ತಿಗಳು ಕೆಲಸ ಮಾಡುತ್ತಿವೆ. ಉತ್ತರ ಮುಂಬೈಯ ಲೋಕಸಭಾಕ್ಷೇತ್ರಕ್ಕೆ ಸಂಬಂಧಿಸಿದಂತೆ, ಒಬ್ಬ ನಿರ್ದಿಷ್ಟ ವ್ಯಕ್ತಿಯ ನಾಮಕರಣಕ್ಕೆ ಪಟ್ಟು ಹಿಡಿದಿರುವ ಶ್ರೀ ಎಸ್. ಕೆ. ಪಾಟೀಲರು ಅದನ್ನು ತಮ್ಮ ಪ್ರತಿಷ್ಠೆಯ ವಿಷಯವನ್ನಾಗಿ ಮಾಡಿರುವುದು ಆಕಸ್ಮಿಕವೇನಲ್ಲ. ಅದರಂತೆಯೇ, ನನಗೆ ದೊರೆತಿರುವ ಮಾಹಿತಿಯ ಪ್ರಕಾರ, ಶ್ರೀ ಅತೂಲ್ಯ ಘೋಷ್, ಶ್ರೀ ಶೈಲೇಂದ್ರ ಚೌಧರಿ ಹಾಗೂ ಇನ್ನೂ ಅನೇಕರು ಚುನಾವಣೆಗಾಗಿ ದೊಡ್ಡ ದೊಡ್ಡ ವಾಣಿಜ್ಯೋದ್ಯಮಿಗಳಿಂದ ಹಣ ಸಂಗ್ರಹಿಸುತ್ತಿದ್ದಾರೆ. ಇದು ಯಾವುದೇ ಒಂದು ಸ್ಥಳಕ್ಕೆ ಸೀಮಿತವಾಗಿರದೇ ಎಲ್ಲೆಡೆಯೂ ನಡೆಯುತ್ತಿರುವ ಪ್ರಕ್ರಿಯೆಯಾಗಿದೆ. ನನಗೆ ಸಾಕಷ್ಟು ಸಮಯವಿದ್ದರೆ, ಎಲ್ಲರ ಹೆಸರುಗಳನ್ನು ಹೇಳಬಹುದಾಗಿತ್ತು. ಎರಡನೇ ಸಾರ್ವತ್ರಿಕ ಚುನಾವಣೆಯ ನಂತರ ಕಾಂಗ್ರೆಸ್ ಹೈಕಮಾಂಡ್ ಎರಡು ಕೋಟಿ ರೂಪಾಯಿಗೂ ಮಿಕ್ಕಿ ಸಂಗ್ರಹಿಸಿತ್ತೆಂಬುದನ್ನು ಶ್ರೀ ಅಶೋಕ ಮೆಹ್ತಾ ಅವರು ಹೇಳಿದ್ದರು. 3ನೇ ಸಾರ್ವತ್ರಿಕ ಚುನಾವಣೆಗಳ ಮುಂಚೆ ಕಾಂಗ್ರೆಸ್ಸು ಬೇರೆ ಬೇರೆ ಕಂಪನಿಗಳಿಂದ ಪಡೆದಿದ್ದ ಹಣದ ಲೆಕ್ಕಾಚಾರವನ್ನು ಶ್ರೀ ದಯಾಭಾಯಿ ಪಟೇಲ್ ಅವರು ಅಂಕಿ ಸಂಖ್ಯೆಗಳೊಂದಿಗೆ ಬಹಿರಂಗಗೊಳಿಸಿದರು. ಅದನ್ನು ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆ ಪ್ರಕಟಗೊಳಿಸಿತ್ತೂ ಕೂಡ. ಅದರ ಪ್ರಕಾರ, ಕಾನ್ಪುರ ಮಹಾನಗರ ಕಾಂಗ್ರೆಸ್ ಸಮಿತಿ ಅಲ್ಲಿನ ಉದ್ಯಮಿಗಳಿಂದ ಲಕ್ಷಾಂತರ ರೂಪಾಯಿ ಸಂಗ್ರಹಿಸಿ, ಒಂದು ಅಧಿಕೃತ ಕಾರ್ಯಕ್ರಮದಲ್ಲಿ ಅದನ್ನು ಅಂದಿನ

ಕಾಂಗ್ರೆಸ್ ನಾಯಕರಿಗೆ ಅರ್ಪಿಸಿತ್ತು. ಅವರಲ್ಲಿ ದಿವಂಗತ ಪ್ರಧಾನಮಂತ್ರಿಗಳೂ ಇದ್ದು, ರೂಪಾಯಿ ಎರಡು ಲಕ್ಷ ಸ್ವೀಕರಿಸಿದ್ದರು. ಈಗ ಅಂತಹ ಅನೇಕ ಸಂಗತಿಗಳನ್ನು ನಾನು ನಿಮ್ಮ ಮುಂದೆ ಇಡಬಲ್ಲೆ....................ಇದು ಇಂದು ಎಲ್ಲೆಲ್ಲೂ ನಡೆದಿರುವ ಸಾರ್ವತ್ರಿಕ ಪ್ರಕ್ರಿಯೆಯಾಗಿದೆ. ಆದ್ದರಿಂದ ಈ ಕುರಿತು ನಾವು ಏನನ್ನಾದರೂ ಮಾಡುವುದು ಅತ್ಯಂತ ಅವಶ್ಯಕತೆಯಾಗಿದೆ.

ಕೊನೆಯದಾಗಿ, ಇನ್ನೊಂದು ಮಾತು ಹೇಳಬಯಸುತ್ತೇನೆ, ದಬ್ಬಾಳಿಕೆ ಕೊನೆಗೊಳ್ಳಬೇಕು; ತುರ್ತು ಪರಿಸ್ಥಿತಿಯನ್ನು ಹಿಂತೆಗೆದುಕೊಳ್ಳಬೇಕು; ಮುಂಜಾಗ್ರತಾ ಬಂಧನ ಕಾಯ್ದೆ ಪಾಸಾಗಕೂಡದು; ಅದು ಹೋಗಬೇಕು. ಭಾರತದ ರಕ್ಷಣಾ ನಿಯಮಗಳು ವಜಾಗೊಳ್ಳಬೇಕು. ಭಾರತದ ನಾಲ್ಕನೇ ಸಾರ್ವತ್ರಿಕ ಚುನಾವಣೆಗಳನ್ನು ತುರ್ತು ಪರಿಸ್ಥಿತಿಯ ನೆರಳಿನಲ್ಲಿ ನಡೆಯಿಸಬೇಕಾಗಿರುವುದು ನಾಚಿಕೆಯ ವಿಷಯ. ಒಬ್ಬ ಭಾರತೀಯನಾಗಿ ನನಗಂತೂ ತೀರ ನಾಚಿಕೆಯಾಗುತ್ತದೆ. ಅಸಾಮಾನ್ಯ ಪರಿಸ್ಥಿತಿಗಳಲ್ಲಿ ಮಾತ್ರ ತುರ್ತು ಪರಿಸ್ಥಿತಿ ಘೋಷಿಸಬೇಕು. ಆದ್ದರಿಂದ, ತುರ್ತು ಪರಿಸ್ಥಿತಿ ಮತ್ತು ಚುನಾವಣೆಗೆ ಒಟ್ಟಿಗೆ ಹೋಗಲಾರವು. ತುರ್ತು ಪರಿಸ್ಥಿತಿಯು ಜಾರಿಯಲ್ಲಿರುವಾಗಲೇ ನಾವು ದೇಶದಲ್ಲಿ ಸಾರ್ವತ್ರಿಕ ಚುನಾವಣೆಗಳನ್ನು ನಡೆಸುತ್ತಿರುವುದು, ತುರ್ತು ಪರಿಸ್ಥಿತಿಯು ವಿಧಿಗಳು ಕಾರ್ಯಗತಗೊಳ್ಳುತ್ತಿಲ್ಲವೆಂಬುದಕ್ಕೆ ಸಾಕ್ಷಿಯಾಗಿದೆ. ಅದು ಎಂದೋ ಹಳತಾಗಿ ಕಾಲಬಾಹಿರವಾಗಿದೆ. ಆದರೂ, ಅದನ್ನು ಇನ್ನು ಹಿಂತೆಗೆದುಕೊಂಡು ಮುಕ್ತತೆಯನ್ನು ಘೋಷಿಸಿಲ್ಲ. ಯಾಕೆಂದರೆ, ಅದರ ಭಯ ಸದಾ ನಮ್ಮ ನೆತ್ತಿಯ ಮೇಲೆ ತೂಗುತ್ತಿರುವ ಕತ್ತಿಯಂತಿರಬೇಕೆಂಬುದು ಅವರ ಬಯಕೆಯಾಗಿದೆ. ಈ ತುರ್ತು ಪರಿಸ್ಥಿತಿ ಶ್ರೀ ಎಲ್. ಪಿ. ಸಿಂಗ್‌ರಂತಹ ವ್ಯಕ್ತಿಗಳನ್ನು ಸೃಷ್ಟಿಸಿದೆ; ಅದು ನೌಕರಶಾಹಿಗಳನ್ನು ಹುಟ್ಟುಹಾಕಿದೆ. ಅಷ್ಟೇ ಅಲ್ಲ, ಪ್ರಧಾನಷಾಹಿ ಆವಿಷ್ಕಾರಕ್ಕೆ ಅವಕಾಶ ಮಾಡಿಕೊಟ್ಟಿದೆ. ಅದು ತನ್ನ ಪಾಪದಡಿಯಲ್ಲಿಯೇ ಹೂತುಹೋದ ನಂದಾಜಿಯಂತಹವರನ್ನು ಸೃಷ್ಟಿಸಿದೆ. ಆದ್ದರಿಂದ, ಬಲಪಂಥೀಯ ಶಕ್ತಿಗಳು ಅವರನ್ನು ದೂರೀಕರಿಸಲು ಬಳಸಿದವೆಂಬುದು ಸುಸ್ಪಷ್ಟ. ಆದ್ದರಿಂದ, ತುರ್ತು ಪರಿಸ್ಥಿತಿ ಈ ಕೂಡಲೇ ತೊಲಗಬೇಕು; ಬಂಧನಕ್ಕೊಳಗಾಗಿರುವ ಎಲ್ಲರನ್ನೂ ಬಿಡುಗಡೆ ಮಾಡಬೇಕು; ಯಾರ ವಿರುದ್ಧ ಮೊಕದ್ದಮೆ ಹೂಡಲಾಗಿದೆಯೋ ಅವರನ್ನು ಅದರಿಂದ ಸಂಪೂರ್ಣವಾಗಿ ಮುಕ್ತ ಮಾಡಬೇಕು; ವಿಚಾರಣೆಯಿಲ್ಲದೆ ಬಂಧನದಲ್ಲಿಡುವ ಯಾವುದೇ ಪದ್ಧತಿ ಹೇಳ ಹೆಸರಿಲ್ಲದಂತಾಗಬೇಕು; ಈಗಲೂ ಕೂಡ ಸಂಸತ್ ಸದಸ್ಯರನ್ನು ಬಂಧಿಸಲಾಗುತ್ತದೆ. ನಾವು ಕಷ್ಟಕಾರ್ಪಣ್ಯಗಳನ್ನು ಎದುರಿಸಬೇಕಾಗುತ್ತಿದೆ; ನಮ್ಮ ಟೆಲಿಫೋನ್‌ಗಳನ್ನು ಕದ್ದು ಕೇಳಲಾಗುತ್ತಿದೆ. ನಮ್ಮ ಪತ್ರಗಳನ್ನು ಬಿಚ್ಚಿ ಓದಲಾಗುತ್ತಿದೆ. ಮತದಾರರಲ್ಲಿ, ಸಾರ್ವಜನಿಕರಲ್ಲಿ ಒಂದು ರೀತಿಯ ಭೀತ ಮನೋಭೂಮಿಕೆಯನ್ನು ನಿರ್ಮಿಸಲು ನಮ್ಮ ಹಿಂದೆ ಸದಾ ನೆರಳಿನಂತೆ ಹಿಂಬಾಲಿಸಲಾಗುತ್ತದೆ. ಆದ್ದರಿಂದ, ಮಾನ್ಯ ಉಪಾಧ್ಯಕ್ಷರೆ, ನಾನು ಮಂಡಿಸುತ್ತಿರುವ ಈ

ಎಲ್ಲ ವಿಷಯಗಳನ್ನು ಎಲ್ಲ ಪಕ್ಷಗಳೂ ಗಣನೆಗೆ ತೆಗೆದುಕೊಂಡು ಚರ್ಚಿಸಬೇಕೆಂದು ನಾನು ಕೋರುತ್ತೇನೆ. ಒಂದು ವೇಳೆ ನಾಲ್ಕನೇ ಸಾರ್ವತ್ರಿಕ ಚುನಾವಣೆಗಳನ್ನು, ಬಲಪಂಥೀಯ ಪ್ರತಿಗಾಮಿ ಶಕ್ತಿಗಳು ಈ ಸರ್ಕಾರದೊಡನೆ ಸಂಚಿನಿಂದ ಕೈಗೂಡಿಸಿರುವ ಈ ಸ್ಥಿತಿಯಲ್ಲಿ ನಡೆಯಿಸಿದರೆ, ನಮ್ಮ ಸಂಸದೀಯ ವ್ಯವಸ್ಥೆ ಕುಸಿದು ಬೀಳುವುದು ಶತಸಿದ್ಧ. ಬಲಪಂಥೀಯ ಪ್ರತಿಗಾಮಿಗಳಿಗೆ ಹಲವು ವಿಧದಿಂದ ಸಹಾಯ ಮಾಡುವ ಸರ್ಕಾರ, ನಮ್ಮ ವ್ಯವಸ್ಥೆಯ ಬಹುಭಾಗದ ಮೇಲೆ ತನ್ನ ರಹಸ್ಯ ಅಧಿನಾಯಕತ್ವ ಸ್ಥಾಪಿಸುವ ಸಿ.ಐ.ಎ. ಕಾಂಗ್ರೆಸ್ ಪ್ರತಿಗಾಮಿಗಳ ಜೊತೆ ಕೈಗೂಡಿಸಿ, ಇಡಿ ವ್ಯವಸ್ಥೆಯ ಹಣೆಯ ಬರಹ ನಿರ್ಧರಿಸುವ ಶ್ರೀ ಎಸ್.ಕೆ.ಪಾಟೀಲ್, ಮುಂತಾದವರು ನಂಬುಗಸ್ಥ ನುರಿತ ಕಾಂಗ್ರೆಸ್ಸಿಗರ ಸ್ಥಾನದಲ್ಲಿ ದೊಡ್ಡ ಬಂಡವಾಳಷಾಹಿಗಳು, ಏಕಸ್ವಾಮ್ಯ ಉದ್ಯಮಪತಿಗಳು, ಮುಂತಾದವರನ್ನು ತಂದು ಕೂಡಿಸಿದ್ದಾರೆ. ಆಗ ಸಂಸತ್ತಿನ ತುಂಬ ಅವರದೇ ಕಾರುಬಾರು. ಹೀಗಾದಾಗ ಕೇವಲ ಸಂಸತ್ತಷ್ಟೇ ಅಲ್ಲ, ಇಡೀ ದೇಶವೇ ಅಧಃಪತನಗೊಳ್ಳುವುದು. ಹೀಗಾಗಿ, ಇಡೀ ವ್ಯವಸ್ಥೆ ಭಯಂಕರವಾದ ಗಂಡಾಂತರವನ್ನೆದುರಿಸುತ್ತಿದೆ. ಅದನ್ನು ಪ್ರಪಾತಕ್ಕೆ ತಳ್ಳುವ ಸಕಲ ಹಿಕಮತ್ತು ನಡೆಯುತ್ತಿದೆ. ಹಾಗೆ ನೋಡಿದರೆ, ಅದು ಎಂದೋ ತನ್ನ ಪ್ರಪಾತದ ತಳ ಕಂಡಿದೆ. ಈಗ ಅದನ್ನು ಸಂಪೂರ್ಣವಾಗಿ ನಾಶಗೊಳಿಸಲು ಹವಣಿಸುತ್ತಿದ್ದಾರೆ ಅಷ್ಟೇ. ಇಂತಹ ಪ್ರತಿಗಾಮಿ ಶಕ್ತಿಶಾಲಿ ಅಧಿಕಾರಕ್ಕೆ ಬರುವ ಸಾಧ್ಯತೆಗಳೇ ಹೆಚ್ಚಾಗಿವೆ. ಯಾಕೆಂದರೆ, ಈ ಕೇಂದ್ರದಲ್ಲಿ ಅಸ್ತಿತ್ವದಲ್ಲಿರುವ ಅಸಮರ್ಥ ಪೌರುಷಹೀನ ಹಾಗೂ ಹಾಸ್ಯಾಸ್ಪದ ಮುಖಂಡತ್ವ ಅದರಲ್ಲಿಯೂ ವಿಶೇಷವಾಗಿ, ಚುನಾವಣೆಯ ವಿಷಯದಲ್ಲಿ ದುರ್ಬಲವಾಗಿರುವ ಮುಖಂಡತ್ವ ಪರಿಸ್ಥಿತಿಯನ್ನು ಸರಿಯಾಗಿ ನಿಭಾಯಿಸಲಾರದ ಸ್ಥಿತಿಯಲ್ಲಿದೆ. ಈ ದೃಷ್ಟಿಯಿಂದ ನಮ್ಮ ಇಡೀ ಭವಿಷ್ಯತ್ತೇ ಅಪಾಯದ ಅಂಚಿನಲ್ಲಿರುವುದನ್ನು ನಾವು ಕಾಣುತ್ತೇವೆ.

ಮಾನ್ಯರೇ, ಇನ್ನು ಒಂದೇ ಒಂದು ಮಾತನಾಡಿ ನಾನು ಮುಗಿಸುತ್ತೇನೆ, ಚುನಾವಣಾ ಪಟ್ಟಿಗಳ ಕದನ ಈಗಾಗಲೇ ಆರಂಭವಾಗಿದೆ. ಕಾಂಗ್ರೆಸ್ ಎಷ್ಟು ಭಿನ್ನವಾಗಿದೆಯೆಂಬುದನ್ನು ನೀವಿಂದು ನೋಡಬಹುದು. ಹಿಂದೆ ಎಂದೂ ಚುನಾವಣಾ ಪಟ್ಟಿಗಳ ನಡುವೆ ಇಂತಹ ಕದನವಿರುತ್ತಿರಲಿಲ್ಲ. ಇತ್ತೀಚೆಗೆ ಸಂಸತ್ತಿನ ಪ್ರಾಂಗಣದಲ್ಲಿ ನನಗೆ ಭೇಟಿಯಾಗಿದ್ದ ಆಂಧ್ರಪ್ರದೇಶದ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಶ್ರೀ ತಿಮ್ಮಾರೆಡ್ಡಿಯವರಿಗೆ ನಾನು ಹೇಳಿದೆ, "ಈ ಮೊದಲು ನೀವು ನಮ್ಮ ವಿರುದ್ಧ ಹೋರಾಡುತ್ತಿದ್ದೀರಿ. ಈಗ ನೀವು ಎರಡು ವಿಧದ ಕಾದಾಟ ಮಾಡಬೇಕಾಗುತ್ತೆಂದು ಕಾಣುತ್ತದೆ, ಒಂದು, ನಿಮ್ಮ ಪಕ್ಷದ ಒಳಗಡೆಯೇ, ಅಂದರೆ, ಚುನಾವಣಾ ಪಟ್ಟಿಗಳಿಂದ ಹೊರಹೊಮ್ಮುವ ಅಂತರ್ ಕಲಹ. ಎರಡನೆಯದು, ವಿರೋಧ ಪಕ್ಷಗಳ ಎದುರು, ನೀವು ನಡೆಸಬೇಕಾದ ಹೋರಾಟ" ಚುನಾವಣಾ ಪಟ್ಟಿಗಳ ತಾಕಲಾಟ ಕಾಂಗ್ರೆಸ್ ಸಂಘಟನೆಯ ಅವನತಿ ಹಾಗೂ ಅದರೊಳಗೆ ನುಸುಳಿರುವ ಭ್ರಷ್ಟಾಚಾರವನ್ನು ಸಂಕೇತಿಸುತ್ತದೆ. ತತ್ವಹೀನತೆ ಹಾಗೂ ಅಧಿಕಾರಕ್ಕಾಗಿ ನಡೆಸುವ ಹಪಾಹಪಿತನದ ಪೈಪೋಟಿ,

ಇವುಗಳ ಕಾರಣದಿಂದಾಗಿ, ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಯಾವುದೇ ಅರ್ಹತೆ, ಕಾಂಗ್ರೆಸ್ ಮಾನದಂಡದಲ್ಲೂ ಇತ್ಯಾದಿ ಸಂಗತಿಗಳನ್ನು ಪರಿಗಣಿಸದೆ, ಕೇವಲ ಗುಂಪುಗಾರಿಕೆಯ ಆಧಾರದ ಮೇಲೆ ಮಾಡಲಾಗುತ್ತಿದೆ. ಸಿಂಡಿಕೇಟ್ ಬಲಿಷ್ಟವಾಗಿರಬೇಕು. ಮೊರಾರ್ಜಿಯವರೊಂದಿಗೆ ಮೈತ್ರಿ ಸಾಧಿಸಿದ ಸಿಂಡಿಕೇಟ್ ಬಲಶಾಲಿಯಾಗಿರುವುದೇ ಅಥವಾ ಇತರ ಯಾವುದೇ ಗುಂಪು ಬಲಿಷ್ಟವಾಗಿ ಹೊಸ ಸಂಸತ್ತು ಅಥವಾ ಶಾಸನ ಸಭೆಗಳಲ್ಲಿ ಅಧಿಕಾರ ಹಿಡಿಯಬಲ್ಲುದೆ ಎಂಬುವುದೇ ಮುಖ್ಯವಾಗಿ ಗಣನೀಯ ಅಂಶವಾಗುತ್ತಿದೆ. ಆದ್ದರಿಂದ, ಇಂದು ಪಕ್ಷವು ಎಲ್ಲೆಲ್ಲೂ ಅವನತಿಯ ದಾರಿಯಲ್ಲಿ ಸಾಗುತ್ತಿದೆ. ಅದು ಎಲ್ಲೆಲ್ಲೂ ವಿಘಟಿತಗೊಂಡು ಅಧಃಪತನವಾಗುತ್ತಿದೆ. ಜನತಾ ಕಾಂಗ್ರೆಸ್, ಬಾಂಗ್ಲಾ ಕಾಂಗ್ರೆಸ್, ಇನ್ನೊಂದು ಜನತಾ ಕಾಂಗ್ರೆಸ್ ಮತ್ತು ಭಿನ್ನಮತೀಯ ಕಾಂಗ್ರೆಸ್ ಮುಂತಾದ ತುಕಡಿ, ತುಂಡುಗಳು ಅದರ ಅವನತಿಯನ್ನು ಸಾರುತ್ತಿವೆ. ಭಿನ್ನಮತೀಯ ಕಾಂಗ್ರೆಸ್ ನಮ್ಮ ದೇಶವನ್ನು ಅವನತಿಯೆಡೆಗೆ ತಳ್ಳುತ್ತಿದೆ. ಹೀಗಾಗಿ, ನಮ್ಮ ಚುನಾವಣೆಗಳಲ್ಲಿ ಅಮೇರಿಕೆಯ ಹಸ್ತಕ್ಷೇಪಕ್ಕೆ ದಾರಿ ಸುಗಮಗೊಳ್ಳುತ್ತಿದೆ. ಅದು ಅಮೇರಿಕ ದೇಶೀ ಬೃಹತ್ ಉದ್ದಿಮೆದಾರರನ್ನು ಒಂದೆಡೆ ತರುತ್ತಿದೆ, ಹಾಗೆ ನೋಡಿದರೆ, ಈಗಾಗಲೇ ಒಂದಾಗಿದ್ದಾರೆ? ಹೀಗೆ ಅವರನ್ನು ಒಗ್ಗೂಡಿಸುವುದರ ಹಿಂದಿನ ಉದ್ದೇಶ ಬರುವ ಫೆಬ್ರವರಿಯಲ್ಲಿ ನಡೆಯಲಿರುವ ಚುನಾವಣೆಗಳಲ್ಲಿ ನೇರ ಹಸ್ತಕ್ಷೇಪಕ್ಕೆ ಸಹಾಯ ಮಾಡುವುದೇ ಆಗಿದೆ. ಆದ್ದರಿಂದ ನಾನು ಸಂಸತ್ತಿಗೆ ಕಳಕಳಿಯಿಂದ ಮನವಿ ಮಾಡಿಕೊಳ್ಳುತ್ತೇನೆ. ಬಹುಶಃ ಮುಂಬರುವ ಸಾರ್ವತ್ರಿಕ ಚುನಾವಣೆಗಳಿಗಿಂತ ಮುಂಚೆ ಈ ವಿಷಯ ಕುರಿತು ಇದು ನನ್ನ ಕೊನೆಯ ಮನವಿಯಾಗಲಿದೆ. ನಾನು ವಿಶೇಷವಾಗಿ ಕಾಂಗ್ರೆಸ್ಸಿಗರಲ್ಲಿ ಮನವಿ ಮಾಡಬಯಸುತ್ತೇನೆ. ಯಾಕೆಂದರೆ, ಅವರಲ್ಲಿ ಬಹುಸಂಖ್ಯಾತರು ಪ್ರಮಾಣಿಕರಿದ್ದಾರೆ, ಉದಾರ ಮನೋಧರ್ಮದವರಿದ್ದಾರೆ. ಆದ್ದರಿಂದ ಸಂಸತ್ತಿನ ಚುನಾವಣೆಗಳು ನಾನು ಈ ಮೊದಲು ಹೇಳಿದ ರೀತಿಯಲ್ಲಿ ನಡೆಯಬಾರದೆಂಬುದು ನನ್ನ ಬಯಕೆಯಾಗಿದೆ. ಅಲ್ಲದೆ, ಅವರ ಪಕ್ಷ ಅಮೇರಿಕಾ ಅಥವಾ ಬೃಹತ್ ಉದ್ದಿಮೆದಾರರಿಂದ ಪ್ರತಿನಿಧಿಸಲ್ಪಡಬಾರದು ಎಂಬುದು ನನ್ನ ಒತ್ತಾಸೆ. ವಿರೋಧ ಪಕ್ಷಗಳ ನೆಲೆಯಿಂದ ನಾನು ನಿಮಗೆ ಈ ನನ್ನ ಮನವಿಯನ್ನು ಸಲ್ಲಿಸುತ್ತಿದ್ದೇನೆ. ದೇಶದ ಹಿತಾಸಕ್ತಿಯ ದೃಷ್ಟಿಯಿಂದ ನಾವೆಲ್ಲರೂ ಒಂದೆಡೆ ಕೂಡಿ, ಈ ವಿಷಯ ಕುರಿತು ಸುದೀರ್ಘ ಚರ್ಚೆ ನಡೆಯಿಸಿ, ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಬೇಕಾಗಿದೆ. ಆ ನಿರ್ದಿಷ್ಟ ಹಾಗೂ ಸ್ಪಷ್ಟ ತೀರ್ಮಾನದೊಂದಿಗೆ ನಾವು ಪರಿಣಾಮಕಾರಿ ಕ್ರಮಗಳನ್ನು ಕೈಗೊಂಡು, ಮುಂಬರುವ ಚುನಾವಣೆಗಳಲ್ಲಿ ಪರಸ್ಪರರ ವಿರುದ್ಧ ಸೆಣಸಬೇಕಾಗಿದೆ. ಈ ಸೆಣಸಾಟದಲ್ಲಿ ನಾವು ನಮಗೆ ಸಾಧ್ಯವಿದ್ದ ಮಟ್ಟಿಗೆ ಮುಕ್ತವಾಗಿ, ನ್ಯಾಯಯುತವಾಗಿ ಕಾದಾಡಬೇಕಾಗಿದೆ ವಿನಃ ಯಾವುದೇ ಅನೈತಿಕ ದಾರಿ ಅನುಸರಿಸುವುದರ ಮೂಲಕವಲ್ಲ. ರಾಜ್ಯ ಯಂತ್ರದ ವಿರೋಧ ಪಕ್ಷಗಳ ವಿರುದ್ಧ ಬಳಸಲ್ಪಡುವುದು ಸಹಜ. ಇದು ಯಾವಾಗಲೂ ನಡೆಯುತ್ತದೆ. ಆದರೆ, ಈ ಕುರಿತು ಏನಾದರೂ ಮಾಡಬೇಕೆಂದು ಸದನಕ್ಕೆ ಮನವಿ ಮಾಡಿಕೊಳ್ಳುತ್ತಿದ್ದೇನೆ.

ಕಾಂಗ್ರೆಸ್ಸಿಗರು ಸಿಐಎ ದ ಬಗ್ಗೆ ಎಚ್ಚರದಿಂದ ಇರಬೇಕೆಂದು, ಅದರ ಅಪಾಯವನ್ನು ಸದಾ ಮನಗಾಣಬೇಕೆಂದು ನನ್ನ ಬಯಕೆ. ಇವೆಲ್ಲವನ್ನು ನಾನಿಂದು ಹೇಳುತ್ತಿರುವುದು ಮತ್ತೆ ಪುನರಪಿ ಹೇಳುವ ಪ್ರಮೇಯ ಬರಲಾರದೆಂದೇ ನನ್ನ ಭಾವನೆ. ಕಾಲ ಮೀರುವ ಮುಂಚೆ ಸೂಕ್ತ ಕ್ರಮ ಕೈಗೊಳ್ಳುವುದಕ್ಕೆ ಇದು ಸಕಾಲವಾಗಿದೆ. ಉಮ್ಮಳಿಸಿ ಬೆಳೆಯುತ್ತಿರುವ ಗಂಭೀರ ಪರಿಸ್ಥಿತಿಯನ್ನು ಗಮನಿಸಿ, ಅದರ ಅಪಾಯದ ಬಗ್ಗೆ ಸದಾ ಜಾಗರೂಕರಾಗಿರಬೇಕಾಗಿದೆ. ಪ್ರತಿಗಾಮಿ ಶಕ್ತಿಗಳೆಲ್ಲ ಒಗ್ಗೂಡಿ ಪ್ರಜಾಪ್ರಭುತ್ವವನ್ನು ನುಂಗಿ ನೊಣೆಯುವ ಹವಣಿಕೆಯಲ್ಲಿವೆ. ಅವು ಇಡೀ ದೇಶದ ವ್ಯವಸ್ಥೆಯನ್ನೇ ಬುಡಮೇಲು ಮಾಡುವ, ಸಾಧ್ಯವಿದ್ದರೆ ರಾಜಕೀಯ ಬದುಕನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುವ ಪಿತೂರಿ ನಡೆಸುತ್ತಿವೆ. ಆದ್ದರಿಂದ ನನ್ನ ಈ ಗೊತ್ತುವಳಿಯನ್ನು ತಾವು ಅಂಗೀಕರಿಸಬೇಕು; ನಿಮಗೆ ಇದು ನನ್ನ ಕೊನೆಯ ಮನವಿಯಾಗಿದೆ.

## 6. ಕೇಂದ್ರ-ರಾಜ್ಯ ಸಂಬಂಧಗಳು*

ಮಾನ್ಯ ಉಪಾಧ್ಯಕ್ಷರೆ,

ಈ ಗೊತ್ತುವಳಿಯ ಉದ್ದೇಶ ತುಂಬಾ ಸ್ವಾರಸ್ಯಕರವೂ, ವಿಚಾರಪೂರಿತವೂ ಆದ ಚರ್ಚೆಗೆ ಒಂದು ವಿಷಯವನ್ನು ಸಾದರಪಡಿಸುವುದೆಂದು ನನ್ನ ನಂಬಿಕೆ. ಯಾಕೆಂದರೆ, ಇಂದು ಕೇಂದ್ರ-ರಾಜ್ಯದ ಸಂಬಂಧಗಳ ಸಮಸ್ಯೆ ಒಂದು ಬಹುಮುಖ್ಯವಾದ ವಿಷಯವಾಗಿದೆ. ಅಂತೆಯೇ ಅದಕ್ಕೆ ಒಂದು ರಾಷ್ಟ್ರೀಯ ಮಟ್ಟದ ಮಹತ್ವ ಬಂದಿದೆ. ನಾವು ಇಂದು ಈ ಪ್ರಶ್ನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ನಮ್ಮ ಸಂವಿಧಾನದ ರೂಪು-ರೇಷೆಗಳಲ್ಲಿ ಪರಿಷ್ಕರಣೆ ತರಬೇಕಾಗಿದೆ. ಪ್ರಜಾಪ್ರಭುತ್ವವಾದಿ ವ್ಯವಸ್ಥೆಯ ನೆಲೆಯನ್ನು ವಿಸ್ತರಿಸಿ, ಅದನ್ನು ಸಶಕ್ತಗೊಳಿಸುವುದಕ್ಕಾಗಿಯಷ್ಟೇ ಅಲ್ಲ, ರಾಷ್ಟ್ರೀಯ ಸಮಗ್ರತೆಯನ್ನು ಸಂರಕ್ಷಿಸಿ, ಅದು ಉತ್ತರೋತ್ತರವಾಗಿ ಬೆಳೆದು ರಾಷ್ಟ್ರೀಯ ಐಕ್ಯತೆಯನ್ನು ಸಾಧಿಸುವ ಉದ್ದೇಶದಿಂದಲೂ ನಾವು ಈ ಕೆಲಸವನ್ನು ಕೈಗೆತ್ತಿಕೊಳ್ಳಬೇಕಿದೆ. ಭಾರತವು ರಾಜ್ಯಗಳ ಒಂದು ಒಕ್ಕೂಟವೆಂದು ನಾವು ನಮ್ಮ ಸಂವಿಧಾನದಲ್ಲಿ ಘೋಷಿಸಿಕೊಂಡಿದ್ದೇವೆ. ಆದರೆ, ವಾಸ್ತವವಾಗಿ ವ್ಯವಹಾರಿಕ ಜಗತ್ತಿಗೆ ಬಂದಾಗ ರಾಜ್ಯಗಳು ಕೇಂದ್ರದ ಸಾಕುಮಕ್ಕಳೇನೋ ಎಂಬಂತೆ ಉಪಚರಿಸುತ್ತಿದ್ದೇವೆ. ಕೇಂದ್ರವು ಎಲ್ಲ ಅಧಿಕಾರವನ್ನು ಹೆಚ್ಚು ಹೆಚ್ಚಾಗಿ ತನ್ನ ಕೈಯಲ್ಲಿಯೇ ಕೇಂದ್ರೀಕರಿಸಿಕೊಳ್ಳುತ್ತಿದೆ. ಇದು ದೇಶದ ಆರ್ಥಿಕ ಬದುಕಿನಲ್ಲಿ ಭರದಿಂದ ಬೆಳೆಯುತ್ತಿರುವ ಸಂಪತ್ತು ಮತ್ತು ಅಧಿಕಾರದ ಕೇಂದ್ರೀಕರಣದ ರಾಜಕೀಯ ಪ್ರತಿಫಲನವಾಗಿದೆಯೆಂಬುದು ಸತ್ಯಸ್ಯ ಸತ್ಯ. ಈ ಸ್ಥಿತಿ ತೊಲಗಿ, ರಾಜ್ಯ ಮತ್ತು ಕೇಂದ್ರಗಳ ನಡುವೆ ಉತ್ತಮವಾದ ಪ್ರಜಾಪ್ರಭುತ್ವವಾದಿ ವ್ಯವಸ್ಥೆಗೆ ದಾರಿ ಮಾಡಿಕೊಡಬೇಕಾಗಿದೆ.

ನ್ಯಾಯಯುತವೂ ನಿರ್ವಾಜಯುಕ್ತವೂ ಆದ ಒಂದು ವ್ಯವಸ್ಥೆ ಸ್ಥಾಪನೆಗೊಳ್ಳಬೇಕಿದೆ. ರಾಜಕೀಯ ಮತ್ತು ಆರ್ಥಿಕ ಮಟ್ಟದಲ್ಲಿ ಅಧಿಕಾರದ ಹಂಚಿಕೆ ಇದರಿಂದ ಪ್ರತಿಬಿಂಬಿತವಾಗಬೇಕು. ಕೇಂದ್ರ - ರಾಜ್ಯಗಳ ಸಂಬಂಧಗಳ ವಿವಾದ ತೀರ ಮುಂಚೂಣಿಗೆ ಬಂದಿರುವ ಈಗ ಜನಸಂಘ ಮತ್ತು ಸ್ವತಂತ್ರ ಪಕ್ಷಗಳು ಒಂದು ಬಲಿಷ್ಟ ಕೇಂದ್ರ ಹಾಗೂ ಏಕೀಕೃತ ವ್ಯವಸ್ಥೆಯ ಘೋಷಣೆಗಳನ್ನು ಮೊಳಗಿಸುತ್ತಿವೆ. ಇಡೀ ದೇಶಕ್ಕೆ ದುರಾದೃಷ್ಟದ ಸಂಗತಿಯೆಂದರೆ, ಇದಕ್ಕೆ ಕಾರಣ ಕಂಡುಕೊಳ್ಳಲು ಬಹುದೂರ ಹೋಗಬೇಕಿಲ್ಲ; ಈ ಘೋಷಣೆಗೆ ಕೆಲವು ಕಾಂಗ್ರೆಸ್ಸಿಗರಿಂದಲೂ ಉತ್ತೇಜನ ದೊರೆಯುತ್ತದೆ. ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀ ನಿಜಲಿಂಗಪ್ಪನಂತಹ ನೇತಾರರೂ ಈ ಘೋಷಣೆಗೆ ಪ್ರೋತ್ಸಾಹ ನೀಡುತ್ತಿದ್ದಾರೆ;

---

* ಕೇಂದ್ರ - ರಾಜ್ಯ ಸಂಬಂಧಗಳ ಪುನರ್ ಪರೀಕ್ಷಣೆ ಕುರಿತು ಖಾಸಗಿ ಸದಸ್ಯನ ಗೊತ್ತುವಳಿಯ ಮೇಲಿನ ಚರ್ಚೆಯಿಂದ, ರಾಜ್ಯಸಭೆ, 9 ಮೇ 1969, ಸಿ.ಸಿ. 1987-1995.

ಆಶ್ಚರ್ಯದ ಸಂಗತಿಯೆಂದರೆ, ಭಾಷಾವಾರು ಪ್ರಾಂತ್ಯಗಳ ಪುನರ್ ಸಂಘಟನೆಯ ನಂತರ ಶ್ರೀ ನಿಜಲಿಂಗಪ್ಪನವರು ಇಂತಹ ಘೋಷಣೆಗಳನ್ನು ವಿರೋಧಿಸಬೇಕಾಗಿತ್ತು. ಆದರೆ, ಕಾಂಗ್ರೆಸ್ಸಿನ ಫರಿದಾಬಾದ್ ಅಧಿವೇಶನದಲ್ಲಿ ಶ್ರೀ ನಿಜಲಿಂಗಪ್ಪನವರು ಆ ಕುರಿತು ಚಕಾರವೆತ್ತಲಿಲ್ಲ. ಇದು ಕಾಂಗ್ರೆಸ್ಸಿನ ಉನ್ನತ ವಲಯದ ಚಿಂತನೆಯ ಒಲವು-ನಿಲವುಗಳಿಗೆ ನಿದರ್ಶನವಾಯಿತು. ಈ ಸದನದ ಪೂರ್ವಾಧ್ಯಕ್ಷರೂ ಭಾರತದ ರಾಷ್ಟ್ರಪತಿಗಳೂ ಆಗಿದ್ದ ಡಾ. ಝಾಕೀರ ಹುಸೇನ್ ಅವರ ಅಕಾಲ ಮರಣಾನಂತರ ನಾವು ಮತ್ತೆ ಈಗ "ಬಲಿಷ್ಠ ರಾಷ್ಟ್ರಪತಿ" ಯ ಕುರಿತು ಘೋಷಣೆಯನ್ನು ಕೇಳುತ್ತಿದ್ದೇವೆ. ಬಲಿಷ್ಟ ರಾಷ್ಟ್ರಪತಿ ಎಂದರೆ, ಅವರ ದೃಷ್ಟಿಯಲ್ಲಿ ಮತ್ತೆ ಇಲ್ಲಿ ಅಧಿಕಾರವನ್ನು ಕೇಂದ್ರದಲ್ಲಿ ಒಗ್ಗೂಡಿಸುವ ಒಂದು ಪ್ರಯತ್ನ ಇದಾಗಿದೆ. ಅಧ್ಯಕ್ಷರನ್ನು ಸಂಸತ್ತಿನ ಮೇಲೆ ಹೇರುವ ಹುನ್ನಾರ ಇದು. ನಿಜವೆಂದರೆ, ಸಂಸತ್ತನ್ನು ದುರ್ಬಲಗೊಳಿಸುವುದೇ ಈ ಘೋಷಣೆಯ ಒಳ ಉದ್ದೇಶವಾಗಿದೆ. ಈ ದೇಶದಲ್ಲಿ ನಮಗಿಂದು ಬೇಕಾಗಿರುವುದು ಒಂದು ಬಲಿಷ್ಟವಾದ ಪ್ರಜಾತಾಂತ್ರಿಕ ಸಂಸತ್ತೇ ವಿನಃ ಒಬ್ಬ ತಾತ್ಕಾಲಿಕ ಬಲಿಷ್ಠ ಅಧ್ಯಕ್ಷನಲ್ಲ. ನಮಗೆ ಬೇಕಾಗಿರುವುದು ಸಂಸತ್ತಿಗೆ ಸಂಪೂರ್ಣವಾಗಿ ವಿಧೇಯರಾಗಿರುವ, ಅಧೀನರಾಗಿರುವ ಒಬ್ಬ ಅಧ್ಯಕ್ಷರು, ಅವರಿಗೆ ಯಾವುದೇ ತರಹದ "ವಿವೇಚನಾಧಿಕಾರ" ಇರಬಾರದು. ಮತ್ತು ವಾಸ್ತವವಾಗಿ, ಇಂದಿರುವ ಸ್ಥಿತಿ ಇದೇ ಆಗಿದೆ. ಆದರೆ ನಮ್ಮ ಕೆಲ ಗೆಳೆಯರು ಸಂಸತ್ತಿನ ಹೊರಗೆ ಒಂದು ಸಂಸ್ಥೆಯನ್ನು ಸೃಷ್ಟಿಸುವಲ್ಲಿ ಆಸಕ್ತರಾಗಿದ್ದಾರೆ. ಆ ಮೂಲಕ ಸಂಸತ್ತು ಅಮಿತಾವಕಾಶ ದೊರೆಯುವಂತೆ ಪ್ರಜಾಪ್ರಭುತ್ವವನ್ನು ವಿರೂಪಗೊಳಿಸಿ, ಮೂಲೆಗೆ ತಳ್ಳುವುದೇ ಅವರ ಪರಮೋದ್ದೇಶವಾಗಿದೆ. ನಾವು ಬಯಸುವ ಅಧ್ಯಕ್ಷರು ಪ್ರಾಮಾಣಿಕರಾಗಿರಬೇಕು. ಪ್ರಜಾಪ್ರಭುತ್ವವಾದಿ ಮನೋಧರ್ಮದವರಾಗಿರಬೇಕು; ಅವರ ನಡೆ-ನುಡಿ ಒಂದಾಗಿರಬೇಕು; ಅವರ ನಿಲುವು ನಿರ್ದಾಕ್ಷಿಣ್ಯವಾಗಿರಬೇಕು; ನೇರವಾಗಿರಬೇಕು; ತಮ್ಮ ಮುಂದೆ ಸಾದರಪಡಿಸಲಾಗುವ ಎಲ್ಲ ನಿರಂಕುಶವಾದಿ, ಪ್ರಜಾ ತಾಂತ್ರಿಕ ವಿರೋಧಿ, ಸಂಗತಿಗಳಿಗೆ ಸಹಿ ಹಾಕುವ ಬದಲು, ತಮ್ಮ ಸ್ಥಾನಕ್ಕೆ ರಾಜೀನಾಮೆ ಕೊಡಲು ಹಿಂಜರಿಯದ ಧೀರ-ಧೀಮಂತ ವ್ಯಕ್ತಿತ್ವ ಅವರದಾಗಿರಬೇಕು. ಯಾವುದೇ ಸಂದರ್ಭದಲ್ಲಿಯೂ ಮಂತ್ರಿಮಂಡಲದ ಸಲಹೆಯನ್ನು ಧಿಕ್ಕರಿಸುವ ಅಧ್ಯಕ್ಷರನ್ನು ನಾನು ಬಯಸುವುದಿಲ್ಲ. ಸಂಸತ್ತಿನ ಹಿರಿಮೆಯನ್ನು ಪ್ರಶ್ನಿಸುವ ಯಾವುದೇ ನಿಲುವನ್ನು ನಾನು ಬೆಂಬಲಿಸುವುದಿಲ್ಲ. ಈ ವಿಷಯದಲ್ಲಿ ನಮಗೆ ಎಷ್ಟೇ ಅನಾನುಕೂಲವಾದರೂ ರಾಜಿ-ಸಂಧಾನಕ್ಕೆ ನಾನು ಸುತಾರಾಂ ಸಿದ್ಧನಿಲ್ಲ. ಕಾಂಗ್ರೆಸ್‌ನಂತಹ ಪಕ್ಷ ಅಧಿಕಾರದಲ್ಲಿರುವುದರಿಂದ ನಮಗೆ ಇದರಿಂದ ಸಾಕಷ್ಟು ಅನಾನುಕೂಲಗಳಿವೆಯಾದರೂ ನಾನು ಸಂಸತ್ತಿನ ಹಿರಿಮೆಯನ್ನೇ ಬೆಂಬಲಿಸುತ್ತೇನೆ. ಪರಿಸ್ಥಿತಿ ಹೀಗಿದ್ದೂ ಏಕೀಕೃತ ವ್ಯವಸ್ಥೆಯ ಸರ್ಕಾರವನ್ನು ಪ್ರತಿಪಾದಿಸುವವರು ವಾಸ್ತವವಾಗಿ ದೇಶದಲ್ಲಿ ನಿರಂಕುಶ ಪ್ರಭುತ್ವ ಬೆಳೆಸುವುದಕ್ಕೆ ಪ್ರಯತ್ನಿಸುತ್ತಿದ್ದಾರೆಂಬುದು ಸುಸ್ಪಷ್ಟ. ಇದರಿಂದ ರಾಜ್ಯಗಳ ಸ್ವಾಯತ್ತತೆ ಪುಷ್ಟಿಗೊಂಡು ಸಬಲವಾಗುವುದರ ಬದಲು, ಶಕ್ತಿಗುಂದಿ ದುರ್ಬಲವಾಗುತ್ತದೆ. ನಿಜವಾಗಿಯೂ ತಾತ್ಕಾಲಿಕ

ಏಕೀಕೃತ ವ್ಯವಸ್ಥೆ ಮತ್ತು ಬಲಿಷ್ಠ ಅಧ್ಯಕ್ಷರನ್ನು ಬಯಸುವ ಈ ಸವಾಲು ನಮಗೆ ಧುರೀಣರಿಂದಲೇ ಎದುರಾಗುತ್ತಿದೆ. ಆಶ್ಚರ್ಯದ ಸಂಗತಿಯೆಂದರೆ, ಒಬ್ಬ ಗೃಹಮಂತ್ರಿಯಿಂದ ಅವರಿಗೆ ತೃಪ್ತಿಯಾಗುತ್ತಿಲ್ಲ. ಅವರಿಗೊಬ್ಬ ಬಲಿಷ್ಟ ಅಧ್ಯಕ್ಷನೂ ಬೇಕು. ಸಂಸತ್ತಿನ ಅಧಿಕಾರವನ್ನು ಮೊಟಕುಗೊಳಿಸುವ ದುರುದ್ದೇಶವೇ ಇದರ ಹಿಂದಿರುವುದು ಸ್ಪಷ್ಟವಾಗಿದೆ. ನಾವು ಅನೇಕತೆಯಲ್ಲಿ ಏಕತೆ ಎಂಬ ನೆಲೆಯ ಮೇಲೆಯೆ ನಮ್ಮ ರಾಜಕಾರಣವನ್ನು ನಿರ್ಮಿಸಿದ್ದೇವೆ. ನಮ್ಮ ವ್ಯವಸ್ಥೆಯನ್ನು ರಚಿಸಿಕೊಂಡಿದ್ದೇವೆ. ಅಷ್ಟೇ ಯಾಕೆ, ನಮ್ಮ ಚಿಂತನ ಕ್ರಮದ ತಾತ್ವಿಕ ಬುನಾದಿಯೂ ಅದೇ ಆಗಿದೆ. ಮೇಲಾಗಿ, ಕಳೆದ ವರ್ಷ ಜೂನ್‌ನಲ್ಲಿ ಶ್ರೀನಗರದಲ್ಲಿ ಸಭೆ ಸೇರಿದ ರಾಷ್ಟ್ರೀಯ ಭಾವೈಕ್ಯತಾ ಪರಿಷತ್ತು ಕೂಡ ಈ ನಿಲುವನ್ನೇ ಅಂಗೀಕರಿಸಿದೆ. ನಮ್ಮ ರಾಜ್ಯಗಳ ವ್ಯವಸ್ಥೆಯಲ್ಲಿ, ಸರ್ಕಾರದ ವ್ಯವಹಾರದಲ್ಲಿ, ಹಾಗೂ ಕೇಂದ್ರ ರಾಜ್ಯಗಳ ಸಂಬಂಧಗಳಲ್ಲಿ ಅನೇಕತೆಯಲ್ಲಿ ಏಕತೆಯೆಂಬ ಶ್ರೇಷ್ಠ ಪರಿಕಲ್ಪನೆಯನ್ನು ಹೇಗೆ ಜಾರಿಗೊಳಿಸಲಿದ್ದೇವೆ, ಮಾರ್ತಗೊಳಿಸಲಿದ್ದೇವೆ, ಎಂಬ ಪ್ರಶ್ನೆ ನಮ್ಮ ಮುಂದಿದೆ. ರಾಜ್ಯಗಳು ದುರ್ಬಲಗೊಂಡರೆ, ಕೇಂದ್ರವೆಂದೂ ಬಲಿಷ್ಠವಾಗುವುದಿಲ್ಲ. ಪ್ರತಿಯಾಗಿ, ಅದೊಂದು ನಿರಂಕುಶ ಕೇಂದ್ರವಾಗಿ ಪರಿಣಮಿಸಬಹುದು; ಅತಿ ಹೆಚ್ಚೆಂದರೆ, ಪ್ರಜಾಪೀಡಿತ ವ್ಯವಸ್ಥೆಯಾಗಿ ರೂಪುಗೊಳ್ಳಬಹುದು. ಬಲಿಷ್ಠ ಕೇಂದ್ರದ ನೆಪದಲ್ಲಿ ನಿರಂಕುಶ ಪ್ರಜಾಪೀಡಿತ ಕೇಂದ್ರದ ಆವಿಷ್ಕಾರವಾಗುತ್ತದೆ. ಹಿಂದೆಲ್ಲ ನಡೆದದ್ದು ಹೀಗೆಯೇ, ಆದರೆ, ಅದು ಎಂದೂ ಒಂದು ಬಲಿಷ್ಠ ಹಾಗೂ ಪ್ರಜಾಪ್ರಭುತ್ವವಾದಿ ಕೇಂದ್ರವಾಗಲಾರದೆಂಬುದು ಮಾತ್ರ ಖಚಿತ. ಹಾಗೆಯೇ ರಾಜ್ಯಗಳ ಮೇಲೆ ತನ್ನ ಅಧಿಕಾರ ಚಲಾಯಿಸಿ, ದೇಶದ ಐಕ್ಯತೆಯನ್ನು ಸಂರಕ್ಷಿಸಲಾರದಷ್ಟು ಕೇಂದ್ರವು ದುರ್ಬಲಗೊಂಡರೆ, ಅದು ಕೂಡ ಸ್ವಾಗತಾರ್ಹವಲ್ಲ. ಆದ್ದರಿಂದ ಪ್ರಜಾತಾಂತ್ರಿಕ ತತ್ವಗಳ ನೆಲೆಯ ಮೇಲೆ ಕಾರ್ಯನಿರ್ವಹಿಸುತ್ತಾ, ಇಡೀ ರಾಷ್ಟ್ರದ ಐಕ್ಯತೆ, ಘನತೆ ಗೌರವವನ್ನು ಕಾಪಾಡುವ ಒಂದು ಸಬಲ ಕೇಂದ್ರವನ್ನು ನಾವು ಬಯಸುತ್ತೇವೆ. ಜೊತೆಗೆ, ಆರ್ಥಿಕ ರಾಜಕೀಯದಂತಹ ವಿಸ್ತೃತ ವ್ಯಾಪ್ತಿಯ ಅಧಿಕಾರವನ್ನು ಹೊಂದಿರುವ ರಾಜ್ಯಗಳೂ ಅಸ್ತಿತ್ವ ಹೊಂದಿರಲು ಸಾಧ್ಯವಾಗಬೇಕು. ಒಟ್ಟಾರೆಯಾಗಿ ಕೇಂದ್ರ-ರಾಜ್ಯಗಳ ಸದ್ಭಾವ ಸಂಬಂಧದ ಸಾಮರಸ್ಯದಿಂದ ಸಮಗ್ರ ಜನತೆಯ ಸಮುಜ್ವಲ ಬದುಕಿನ ಆವಿಷ್ಕಾರವಾಗಬೇಕು. ಈ ವಿಷಯವನ್ನು ನಾವು ಕೈಗೆತ್ತಿಕೊಳ್ಳಬೇಕಾದ ವಿಧಿ-ವಿಧಾನ ಇದಾಗಿದೆ. ಒಂದು ಪ್ರಜಾ ತಾಂತ್ರಿಕ ಕೇಂದ್ರ ಮತ್ತು ಬಲಿಷ್ಟ ಪ್ರಜಾಪ್ರಭುತ್ವವಾದಿ ರಾಜ್ಯಗಳು ಇವು ಏಕಕಾಲದಲ್ಲಿಯೇ ಅಸ್ತಿತ್ವದಲ್ಲಿರಲು ಸಾಧ್ಯವಿದೆ. ಇದರಲ್ಲಿ ವೈವಿಧ್ಯಮಯವಾದುದೇನೂ ಇಲ್ಲ. ಇಂತಹ ದ್ವಂದ್ವಾತೀತವಾದ ಸ್ಥಿತಿಯೇ ನಮಗಿಂದು ಬೇಕಾಗಿರುವುದು. ಆದರೆ, ನಮ್ಮ ಸಂವಿಧಾನದಡಿಯಲ್ಲಿ ಈ ವ್ಯವಸ್ಥೆಗೆ ಅವಕಾಶವಿಲ್ಲ. ನಮ್ಮದು ಸಂಯುಕ್ತ ಸ್ವರೂಪದ ಸಂವಿಧಾನವೆಂದು ಭಾವಿಸಲಾಗಿದೆ. ಆದರೆ, ಸಂಯುಕ್ತ ವ್ಯವಸ್ಥೆಯ ತತ್ವಗಳಿಗೆ ಅಲ್ಲಿ ಕಿಂಚಿತ್ತೂ ಅವಕಾಶವಿಲ್ಲ. ಚೂರು-ಪಾರು ಏನಾದರೂ ಅವಕಾಶವಿದೆಯೆಂದು ಭಾವಿಸುವುದಾದರೆ ಕೇಂದ್ರ ಮತ್ತು ಕಾಂಗ್ರೆಸ್ ಸರ್ಕಾರವನ್ನು ಉಲ್ಲಂಘಿಸಿ ಹೊಸಕಿ ಹಾಕುತ್ತಿವೆ.

ಸಂಯುಕ್ತ ರಾಜ್ಯ ವ್ಯವಸ್ಥೆಯ ತತ್ವಗಳ ಸಂರಕ್ಷಣೆಗೆ ಸಂವಿಧಾನದಲ್ಲಿ ಯಾವುದೇ ಅವಕಾಶಗಳಿಲ್ಲ. ಆದ್ದರಿಂದಲೇ, ಸಂವಿಧಾನದ ಸಂಯುಕ್ತ ತತ್ವಗಳನ್ನು ನೊಣೆದು ನುಂಗಬೇಕೆನ್ನುವವರ ವಿರುದ್ಧ ನಾವಿಂದು ಟೊಂಕ ಕಟ್ಟಿ ನಿಲ್ಲಬೇಕಾಗಿದೆ; ಸಂಯುಕ್ತ ವ್ಯವಸ್ಥೆಯ ತತ್ವಗಳಿಗೆ ತಿಲಾಂಜಲಿಯಿತ್ತು, ಆರ್ಥಿಕ ಅಧಿಕಾರವನ್ನು ಕೇಂದ್ರೀಕರಿಸಬಯಸುವ, ಮತ್ತು ಅದಕ್ಕಾಗಿ ರಾಜಕೀಯ ಅಧಿಕಾರ ಕೆಲವೇ ಜನರ ಕೈಯಲ್ಲಿ ಕೇಂದ್ರೀಕೃತವಾಗಬೇಕೆಂದು ಬಯಸುವ, ಏಕಸ್ವಾಮ್ಯ ಬಂಡವಾಳಿಗರ ದಾಳಿ, ದುರ್ದಾಳಿಯ ಹಿಂದಿನ ಹಿತಾಸಕ್ತಿಗಳನ್ನೂ ಹಿಮ್ಮೆಟ್ಟಿಸಬೇಕಾಗಿದೆ. ಶ್ರೀಮಂತರ ಕೈಯಲ್ಲಿ ಅಪಾರವಾಗಿ ಸಂಗ್ರಹಗೊಂಡಿರುವ ಬೃಹತ್ ಮೊತ್ತದ ಹಣ ದೇಶದ ಆಯ್ದ ಕೆಲವೇ ಭಾಗಗಳಲ್ಲಿ ತೊಡಗಿಸಲಾಗುತ್ತಿರುವುದಕ್ಕೆ ತನ್ನದೇ ಆದ ಮಹತ್ವ ಇದೆ. ವಿಭಿನ್ನ ಪ್ರಾಂತ್ಯಗಳ ಅಭಿವೃದ್ಧಿಯ ವ್ಯತ್ಯಾಸ, ಆರ್ಥಿಕ ಅಸಮತೋಲನ, ಈ ಯಾವುದನ್ನು ಲೆಕ್ಕಿಸದೆ ಸಿರಿವಂತರು ತಮ್ಮ ಮಾನ ಬಂದಲ್ಲಿ ಹಣ ತೊಡಗಿಸುತ್ತಿರುವುದಕ್ಕೆ ಕಾರಣ ಹುಡುಕಲು ನಾವು ಬಹುದೂರ ಹೋಗಬೇಕಿಲ್ಲ. ಸಾಧ್ಯವಿದ್ದಷ್ಟು ಹೆಚ್ಚಿನ ಲಾಭಗಳಿಸಿ, ಸಂಪತ್ತು ಮತ್ತು ಆರ್ಥಿಕ ಅಧಿಕಾರದ ಅಪೂರ್ವ ಕೇಂದ್ರೀಕರಣಕ್ಕೆ ದಾರಿ ಮಾಡಿಕೊಡಬೇಕೆಂಬುದೇ ಅವರ ಪರಮ ಗುರಿಯಾಗಿದೆ. ಈ ಮಹಾಶಯರು ಕೇಂದ್ರ ಸರ್ಕಾರದ ಮೇಲೆ ತಮ್ಮ ನಿಯಂತ್ರಣ ಸಾಧಿಸಿ, ಆ ಮೂಲಕ ಕೇಂದ್ರ ಇಡೀ ಆಡಳಿತಾತ್ಮಕ ವ್ಯವಸ್ಥೆ ತಮ್ಮ ಆರ್ಥಿಕ ಹಿತಾಸಕ್ತಿಗಳ ಬೇಳೆ ಬೇಯಿಸುವ ದಾರಿಯಲ್ಲಿ ಸಾಗುವಂತೆ ಮಾಡಬಯಸುತ್ತಾರೆ: ಆದ್ದರಿಂದಲೇ ನಮ್ಮ ಸಂವಿಧಾನದ 7ನೇ ಪರಿಶಿಷ್ಟದಲ್ಲಿ ರಾಜ್ಯಾದಾಯ ಹೆಚ್ಚಿಸುವ, ಆ ಮೂಲಕ ಸಂಪನ್ಮೂಲಗಳನ್ನು ಸಂಗ್ರಹಿಸುವ, ಎಲ್ಲ ಅಧಿಕಾರ ಯದ್ವಾ- ತದ್ವಾ ರೀತಿಯಲ್ಲಿ ಕೇಂದ್ರದ ಕೈಯಲ್ಲಿ ಕೇಂದ್ರಿಕೃತವಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ, ಸಂವಿಧಾನದ ಅದೇ 7ನೇ ಪರಿಶಿಷ್ಟದ ರಾಜ್ಯಪಟ್ಟಿಯಲ್ಲಿ ನಮೂದಿಸಲಾಗಿರುವ ರಾಜ್ಯಗಳ ಅಧಿಕಾರ ತೀರಾ ಮಿತವಾಗಿದೆ: ಈ ಕ್ರಮ ಬದಲಾಗಲೆಂದು ನಾವು ಬಯಸುತ್ತೇವೆ.

ಆರ್ಥಿಕ ವಿಷಯವನ್ನೇ ಕುರಿತು ಮಾತಾಡುವುದಾದರೆ, ಇಂದು ವಿವಿಧ ರಾಜ್ಯಗಳು ಕೇಂದ್ರಕ್ಕೆ ಕೊಡಬೇಕಾಗಿರುವ ಒಟ್ಟು ಸಾಲದ ಮೊತ್ತ ಈಗಾಗಲೇ ರೂ.5000 ಕೋಟಿಗೂ ಮೀರಿದೆ: ಈ ರಾಜ್ಯಗಳು ಈ ಋಣಭಾರದಿಂದ ಎಂದಾದರೂ ಮುಕ್ತವಾಗಲು ಸಾಧ್ಯವಿದೆಯೆಂದು ನಾನು ನಂಬಬಹುದೆ? ಇದು, ರಾಜ್ಯಗಳು ಎಷ್ಟು ನಿಸ್ಸಹಾಯಕವಾಗಿದೆಯೆಂಬುದನ್ನು ಮತ್ತು ಉದ್ದೇಶಪೂರ್ವಕವಾಗಿಯೇ ಅವುಗಳನ್ನು ಇಂತಹ ಅಸಹಾಯಕ ಸ್ಥಿತಿಗೆ ತಳ್ಳಲಾಗಿದೆಯೆಂದೂ ತೋರಿಸುತ್ತದೆ. ಅದೇ ವೇಳೆಗೆ, ರಾಜ್ಯಾದಾಯವನ್ನು ಸಂಗ್ರಹಿಸುವ ಅಧಿಕಾರ ರಾಜ್ಯಗಳಿಗೆ ತೀರ ಅಲ್ಪ ಪ್ರಮಾಣದಲ್ಲಿ ನೀಡಲಾಗಿದೆಯಷ್ಟೇ. ಆದರೆ, ಇನ್ನೊಂದೆಡೆ ತಳಮಟ್ಟದಲ್ಲಿ ಅವುಗಳ ಅಭಿವೃದ್ಧಿಯ ಚಟುವಟಿಕೆಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಿವೆ. ತತ್ಕಾರಣವಾಗಿ, ಈ ಅಭಿವೃದ್ಧಿಯ ಚಟುವಟುಕೆಗಳಿಗೆ ಅವಶ್ಯವಿರುವ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಸಾಧ್ಯವಾಗಿದೆ.

ಅವು ಅರೆ ಹೊಟ್ಟೆಯಿಂದ ನರಳುತ್ತಿವೆ: ಅವು ಸುಗಮವಾಗಿ ಸಾಗುವಂತಾಗಲು ಸಂಪನ್ಮೂಲದ ಸ್ಥಿತಿಗತಿಯ ಕುರಿತು ಮಾನ್ಯ ಮುರಾರ್ಜಿ ದೇಸಾಯಿ ಅವರಿಗೆ ಮನಗಾಣಿಸಬೇಕು: ಇಲ್ಲದಿದ್ದರೆ, ಒಂದು ಚಿಕ್ಕ ಕಾಸು ದೊರೆಯಲಾರದು. ತಳಮಟ್ಟದಲ್ಲಿ ಜನತೆಯ ಕಲ್ಯಾಣಕ್ಕಾಗಿ, ಜನತೆಯೊಡಗೂಡಿ ಸಾಂಗಗೊಳಿಸಬೇಕಾದ ಅಭಿವೃದ್ಧಿಯ ಚಟುವಟಿಕೆಗಳಿಗೆ ನಾವು ಬದ್ಧರಾಗಿ ಇರಬೇಕಾದದ್ದು ನಮ್ಮ ಕರ್ತವ್ಯವಾಗಿದೆ. ಹೀಗಿದ್ದೂ ವಿಶಾಲ ಜನ ಕಲ್ಯಾಣದ ಯೋಜನೆಗಳ ಬೇಕು ಬೇಡಗಳನ್ನು ನಿರ್ಧರಿಸುವ ಅಧಿಕಾರ ಕೇಂದ್ರದಲ್ಲಿ ಯಾರೋ ಒಬ್ಬ ವ್ಯಕ್ತಿಯ ಕೈಯಲ್ಲಿ ಅಥವಾ ಕೇಂದ್ರ ಸರ್ಕಾರದ ಕೈಯಲ್ಲಿಟ್ಟು ರಾಜ್ಯಗಳು ಯಾಕೆ ನರಳುವಂತಾಗಬೇಕು ? ಅವುಗಳನ್ನು ಯಾರೇ ಇಂತಹ ದಯನೀಯ ಸ್ಥಿತಿಗೆ ತಳ್ಳುವ ವ್ಯವಸ್ಥೆ ನಿರ್ಮಾಣವಾಗಿದೆ? ಆದ್ದರಿಂದ ಕರಗಳನ್ನು ವಿಧಿಸುವ ಅಧಿಕಾರ, ಕಂದಾಯದ ವಸೂಲಿ, ಸಂಪನ್ಮೂಲದ ಸಂಗ್ರಹ, ಮುಂತಾದವುಗಳಿಗೆ ಸಂಬಂಧಿಸಿದಂತೆ ಅವು ಒಕ್ಕೂಟದ ಪಟ್ಟಿಯಲ್ಲಿರಲಿ ಅಥವಾ ರಾಜ್ಯದ ಪಟ್ಟಿಯಲ್ಲಿರಲಿ, ಸಂವಿಧಾನದ 7ನೇ ಪರಿಶಿಷ್ಟವನ್ನು ಪುನರ್ ಪರಿಶೀಲಿಸಿ, ಅವುಗಳನ್ನು ರಾಜ್ಯಪಟ್ಟಿಯಲ್ಲಿ ಸೇರಿಸಬೇಕು ಹಾಗೂ ರಾಜ್ಯಗಳ ಪರ ಪರಿಷ್ಕರಿಸಬೇಕೆಂದು ನಾನು ಸೂಚಿಸ ಬಯಸುತ್ತೇನೆ.

ಮಾನ್ಯ ಉಪಾಧ್ಯಕ್ಷರೆ, ನೀವು ನಮ್ಮ ಸಂವಿಧಾನದ ಪಟ್ಟಿಗಳನ್ನು ನೋಡಿದರೆ, ಅದರಲ್ಲಿಯೂ ವಿಶೇಷವಾಗಿ, 7ನೇ ಪರಿಶಿಷ್ಟದ ರಾಜ್ಯಪಟ್ಟಿಯನ್ನು ನೋಡಿದರೆ ಸಾಕು, ಅಲ್ಲಿ ರಾಜ್ಯಗಳಿಗೆ ಸಂಪನ್ಮೂಲಗಳ ಕ್ರೋಢೀಕರಣಕ್ಕೆ ಎಳ್ಳಷ್ಟೂ ಅವಕಾಶ ವಿಲ್ಲವೆಂಬುದು ಸ್ಪಷ್ಟವಾಗುತ್ತದೆ.ಅಲ್ಲಿ ಕೊಟ್ಟಿರುವ ಪಟ್ಟಿಯೇನೊ ದೀರ್ಘವಾದದ್ದೇ. ಆದರೆ, ಅದರಿಂದ ದೊರೆಯುವುದು ಮಾತ್ರ ಸೊನ್ನೆ: ಸೊರಗಿ ಸಣಕಲಾದ, ಎಲುಬಿನ ಗೂಡಿನಂತಿರುವ ಹಾಳು ಹಸುಗಳನ್ನು ರಾಜ್ಯಕ್ಕೆ ಕೊಟ್ಟು ಭರ್ಜರಿ ಹಾಲು ಕರೆಯುವ ಹರಿಯಾಣಾ ಹಸುಗಳನ್ನು ಮಾತ್ರ ಕೇಂದ್ರ ತನ್ನಲ್ಲಿಟ್ಟುಕೊಂಡಿದೆ. ಈ ಹಾಲು ಕರೆಯಲಾದ ಹರಿಯಾಣಾ ಹಸುಗಳು ಕೇಂದ್ರ ರಾಜ್ಯಗಳ ನಡುವೆ ಸಮನಾಗಿ ಹಂಚಿಕೆಯಾಗಬೇಕೆಂಬುದೇ ನಮ್ಮ ಬಯಕೆ..... ಹೀಗೆ, ಸಮೃದ್ಧಿಯಾಗಿ ಹಾಲು ಕರೆಯುವ ಹರಿಯಾಣಾ ಹಸುಗಳು ರಾಜ್ಯಗಳ ತೆಕ್ಕೆಗೆ ಸಿಕ್ಕಾಗ ರಾಜ್ಯಗಳು ತಮ್ಮ ಸಂಪನ್ಮೂಲಗಳನ್ನು ಓತ ಪ್ರೋತರಾಗಿ ಸಂಗ್ರಹಿಸಿ ಕೊಳ್ಳಬಲ್ಲವು. ಇದು ಆಗಬೇಕಾದ ಮೊದಲನೆಯ ಕೆಲಸ. ಇನ್ನು ಎರಡನೆಯದಾಗಿ, ರಾಜ್ಯಗಳ ಮೇಲೆ ಕೆಲವು ತೆರಿಗೆಗಳನ್ನು ಹಾಕುವ ಅಧಿಕಾರ ಕೇಂದ್ರದ ಕೈಯಲ್ಲಿದೆ. ಇಂತಹ ಕರಗಳನ್ನು ವಿಧಿಸುವ ಅಧಿಕಾರ ರಾಜ್ಯ ಸರ್ಕಾರಗಳಿಗೂ ಯಾಕೆ ಮುಕ್ತವಾಗಿ ಕೊಡಬಾರದು ? ಆ ಮೂಲಕ ಅವು ಅದರ ಸಾಧ್ಯತೆಗಳನ್ನು ಬಳಸಿಕೊಂಡು ಸದುಪಯೋಗ ಮಾಡಿಕೊಳ್ಳಲಾರವೇ? ಇದಕ್ಕೆ ಸಂಬಂಧಿಸಿದ ಎಲ್ಲ ಅಧಿಕಾರಗಳು ಕೇಂದ್ರದ ಕೈಯಲ್ಲೇ ಯಾಕೆ? ಉದಾಹರಣೆಗೆ: ಸಂಪತ್ತಿನ ಕರ ಪಶ್ಚಿಮ ಬಂಗಾಳದಲ್ಲಿ ಸಂಪತ್ತಿನ ಕರ, ಒಂದು ವೇಳೆ ಸಂಪತ್ತಿನ ಕರವನ್ನು ವಿಧಿಸುವ ಅಧಿಕಾರ ರಾಜ್ಯಗಳಿಗೂ ಇದೆಯೆಂದು ಭಾವಿಸಿ, ಆಗ ರಾಜ್ಯಗಳೂ ಆ ತೆರಿಗೆಯನ್ನು

ಸುಸಂಬದ್ಧವಾಗಿ ವಿಧಿಸುವುದಲ್ಲದೆ, ಸುಲಭವಾಗಿ ಸಂಗ್ರಹಿಸುವುದು ಸಾಧ್ಯವಾಗುತ್ತದೆ. ಪಶ್ಚಿಮ ಬಂಗಾಳದ ಸಂಯುಕ್ತ ರಂಗದ ಸರ್ಕಾರಕ್ಕೆ ಇಂತಹ ಅಧಿಕಾರ ನೀಡಿದ್ದಾರೆ, ಅದು ಈಗ ಅಸ್ತಿತ್ವದಲ್ಲಿರುವ ಸಂಪತ್ತಿನ ತೆರಿಗೆಯ ಕ್ರಮಗಳನ್ನೇ ಬಳಸಿ, ಕೇಂದ್ರಕ್ಕಿಂತಲೂ ಹೆಚ್ಚು ಸಮರ್ಥವಾಗಿ ಸಂಪನ್ಮೂಲಗಳನ್ನು ಸಂಗ್ರಹಿಸಬಲ್ಲದು. ಯಾಕೆಂದರೆ ಕೇಂದ್ರ ಸರ್ಕಾರ ಈ ಕುರಿತು ತನಗೆ ಸಾಧ್ಯವಿರುವ ಯಾವ ಕ್ರಮಗಳನ್ನು ಕೈಗೊಳ್ಳುತ್ತಿಲ್ಲ. ತೆರಿಗೆ ತಪ್ಪಿಸುವವರಿಗೆ ಅವಕಾಶ ಕಲ್ಪಿಸಿಕೊಡುವಲ್ಲಿಯೇ ಕೇಂದ್ರ ಸರ್ಕಾರ ಆಸಕ್ತವಾಗಿದೆ. ಅಷ್ಟೇ ಅಲ್ಲ, ಎಸ್ಟೇಟ್ ತೆರಿಗೆಯಂತಹ ಇನ್ನಿತರ ಅನೇಕ ತರಹದ ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರ ರಾಜ್ಯಗಳಿಗೆ ನೀಡಬೇಕಾಗಿದೆ. ಈ ವಿಷಯದಲ್ಲಿ ಹೆಚ್ಚಿಗೆ ಮಾತಾಡಲು ಸಮಯ ತೆಗೆದುಕೊಳ್ಳುವುದಿಲ್ಲ. ಈ ಸಂದರ್ಭದಲ್ಲಿ ನನ್ನ ಒಟ್ಟು ಸಲಹೆಯೆಂದರೆ, ರಾಜ್ಯದಾಯ ಸಂಗ್ರಹದ ಅಧಿಕಾರದ ಇತಿ ಮಿತಿಗಳನ್ನು ಪುನರ್ ಪರಿಶೀಲಿಸಬೇಕೆಂಬುದು. ಈಗಿರುವ ಸ್ಥಿತಿ ತೃಪ್ತಿಕರ ವಾಗಿಲ್ಲವೆಂಬುದನ್ನು ವಿಶದಪಡಿಸಲಾಗಿದೆ. ಅಲ್ಲದೆ, ರಾಜ್ಯಗಳ ಮೇಲಿನ ಕೇಂದ್ರದ ಋಣಭಾರ ನನ್ನ ಮಾತಿಗೆ ಸಾಕಷ್ಟು ಪುಷ್ಟಿ ನೀಡುತ್ತದೆ. ರಾಜ್ಯಗಳು ಕೇಂದ್ರಕ್ಕೆ ಪಾವತಿಸಬೇಕಾಗಿರುವ ಸಾಲದ ಪ್ರತಿಶತ 25ರಷ್ಟಾದರೂ ಎಂದಾದರೂ ತೀರಿಸಲು ಸಾಧ್ಯವೇ? ಇದು ನಮ್ಮ ತಿಳುವಿಗೆ ಮೀರಿದ ಸಂಗತಿ.

ಈ ಅಸಮತೋಲನದ ಸ್ಥಿತಿಯೇ ಕೇಂದ್ರ-ರಾಜ್ಯಗಳ ನಡುವಿನ ಆರ್ಥಿಕ ಅಧಿಕಾರದ ದೋಷವನ್ನು ಎತ್ತಿ ತೋರಿಸುತ್ತದೆ: ಮತ್ತು ಈ ಅಧಿಕಾರದ ಪುನರ್ ಹಂಚಿಕೆಯಾಗಬೇಕೆಂದು ಒತ್ತಿ ಹೇಳುತ್ತಿದೆ. ಈ ಪ್ರಸ್ತುತ ವ್ಯವಸ್ಥೆ ಪ್ರಜಾಪ್ರಭುತ್ವದ ವಿರೋಧಿಯಾಗಿದೆ. ಅಲ್ಲದೆ, ಅದು ದೇಶದ ಐಕ್ಯತೆಗೆ ಅನುಕೂಲಕರವಾಗಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ, ಅದು ರಾಷ್ಟ್ರದ ಆರ್ಥಿಕ ಬೆಳವಣಿಗೆಯ ದಾರಿಯಲ್ಲಿ ಸಾಕಷ್ಟು ಅಡಚಣೆಗಳನ್ನುಂಟುಮಾಡುತ್ತಿದೆ. ದೇಶದ ಅತ್ಯಂತ ಕೆಳ ಸ್ತರದಲ್ಲಿ, ಜನತೆಯ ಸಹಕಾರದೊಂದಿಗೆ, ರಾಷ್ಟ್ರೀಯ ಆರ್ಥಿಕ ಅಭಿವೃದ್ಧಿಯ ಕಾರ್ಯಕ್ರಮಗಳನ್ನು ಸಾಕಾರಗೊಳಿಸಬಯಸುವ ನಮ್ಮ ಉದ್ದೇಶಕ್ಕೆ ಅದು ಕಾಲ್ತೊಡಕಾಗಿ ಪರಿಣಮಿಸುತ್ತಿದೆ. ಇದು ಹೇಗೆಂಬುದು ತುಂಬಾ ಸ್ಪಷ್ಟವಾಗಿದೆ. ಉದಾಹರಣೆಗೆ, ಕಲ್ಕತ್ತಾದಲ್ಲಿ ಅನೇಕ ದೊಡ್ಡ ದೊಡ್ಡ ಉದ್ದಿಮೆ, ಕೈಗಾರಿಕೆಗಳಿವೆ. ಆದರೆ, ವಾಸ್ತವವಾಗಿ ಆದಾಯ ಸಂಗ್ರಹದ ದೃಷ್ಟಿಯಿಂದ ಅವೆಲ್ಲವೂ ರಾಜ್ಯ ಸರ್ಕಾರದ ಎಟುಕಿನಾಚೆಯೇ ಇವೆ. ಕಾಂಗ್ರೆಸ್ ನೇತೃತ್ವದ ಕೇಂದ್ರ ಸರ್ಕಾರ ಬಿರ್ಲಾದಂತಹ ದೊಡ್ಡ ದೊಡ್ಡ ಏಕಸ್ವಾಮ್ಯ ಪ್ರಭುಗಳಿಂದ ಸಾಕಷ್ಟು ಹಣ ಪಡೆಯುತ್ತದೆಯಾದ್ದರಿಂದ ಅದು ತೆರಿಗೆ ಸಂಗ್ರಹವನ್ನು ನಿರ್ಲಕ್ಷಿಸುತ್ತದೆ. ಸುಲಭವಾಗಿ ರಾಜ್ಯದ ಬೊಕ್ಕಸಕ್ಕೆ ಸೇರಬಹುದಾಗಿದ್ದೂ ಅಪಾರ ಮೊತ್ತದ ಹಣ ಎಲ್ಲೆಲ್ಲಿಯೋ ಸೋರಿ ಹೋಗುತ್ತದೆ. ಇದು ನಿಜ ಸ್ಥಿತಿ, ಆದ್ದರಿಂದಲೇ ಈ ವಿಷಯದಲ್ಲಿ ಬೃಹತ್ ಬದಲಾವಣೆಯಾಗಬೇಕಿದೆ.

ಇನ್ನು ರಾಜಕೀಯ ಮತ್ತು ಆಡಳಿತಾತ್ಮಕ ಆಯಾಮಗಳಿಗೆ ಸಂಬಂಧಿಸಿದಂತೆ, ನಾನು ವಿವರವಾಗಿ ಮಾತನಾಡಬಯಸುವುದಿಲ್ಲ. ಆದರೆ ಈ ವಿಷಯವನ್ನು ಕುರಿತು ತುಂಬಾ ಗಹನವೂ ಗಂಭೀರವೂ ಆದ ವಿಶ್ಲೇಷಣೆಗೆ ಅವಕಾಶವಿದೆ, ಮತ್ತು ಅವಶ್ಯಕತೆಯೂ ಇದೆಯೆಂಬುದು ನನ್ನ ಭಾವನೆ.

ಆಡಳಿತಾತ್ಮಕವಾಗಿ ಈಗ ಎಲ್ಲಾ ರಾಜ್ಯಗಳಲ್ಲಿ ಕಾರ್ಯನಿರತವಾಗಿರುವ ಕೇಂದ್ರದ ಸೇವಾ ವ್ಯವಸ್ಥೆಯ ಜಾಲ ಅಸ್ತಿತ್ವದಲ್ಲಿದೆ. ಇಂತಹ ಸೇವೆಯಲ್ಲಿರುವ ಕೆಲವರು, ಕೇಂದ್ರಸರ್ಕಾರದ ಏಜೆಂಟರಂತೆ ವರ್ತಿಸುತ್ತಿದ್ದಾರೆ. ಇದರಿಂದ ರಾಜ್ಯ ಸರ್ಕಾರಗಳಿಗೆ ಆಗುವ ತೊಂದರೆಯ ಬಗ್ಗೆ ಅವರಿಗೆ ಕಿಂಚಿತ್ತೂ ಪರಿವೆ ಇಲ್ಲ. ಒಂದು ವಿಧದ ಅನಾಕ್ರಮಣದ ವ್ಯವಸ್ಥೆ ಸೃಷ್ಟಿಸಲಾಗುತ್ತಿದೆ. ಅಂದರೆ, ಕೇಂದ್ರವೇ ಬೇರೆ ದೇಶವೆಂಬಂತೆ ಭಾವಿಸಿ ಒಂದು ನೆಪದಲ್ಲಿ ವಿವಿಧ ರಾಜ್ಯಗಳ ನೆಲದ ಮೇಲೆ ಅತಿಕ್ರಮಣ ಮಾಡುತ್ತದೆ. ಈ ಪ್ರಕ್ರಿಯೆಯಲ್ಲಿ ಕೆಲವು ಆಡಳಿತಾತ್ಮಕ ಸೇವೆಯನ್ನು ಬಳಸಲಾಗುತ್ತದೆ. ಅಖಿಲ ಭಾರತ ಮಟ್ಟದ ಸೇವೆಗಳಾವುವು? ಕೇಂದ್ರದ ಅಧೀನ ಸೇವೆಗಳಾವುವು ಮತ್ತು ರಾಜ್ಯದ ಅಧೀನ ಸೇವೆಗಳಾವುವು ಎಂಬ ಇತ್ಯಾದಿ ವಿಷಯ ಕುರಿತು ನಮಗೆ ಸ್ಪಷ್ಟವೂ ನಿಖರವೂ ಆದ ತಿಳುವಳಿಕೆ ಇರಬೇಕಾಗಿದೆ: ಕೇಂದ್ರದಲ್ಲಿರುವ ಕೆಲವು ವ್ಯಕ್ತಿಗಳು ಒಂದಿಷ್ಟು ನೀತಿ ನಿಯಮಗಳ ಆಧಾರದ ಅಡಿಯಲ್ಲಿ, ಅದರಲ್ಲೂ, ವಿಶೇಷವಾಗಿ, ಕಾನೂನು ಬಾಹಿರವಾಗಿರುವ ಯಾರ ಯಾರುದೋ ನಿಯಮಗಳ ನೆರಳಿನಲ್ಲಿ, ಪ್ರಜಾಪ್ರಭುತ್ವದ ಪ್ರಕ್ರಿಯೆಗೆ ಅಪಾಯ ತಂದೊಡ್ಡಲು ನಾವು ಬಿಡಬಾರದು. ಇದರಿಂದ ಬದುಕಿಗೆ ಅಸಂಗತವಾಗಿರುವ ವಿಷಯಗಳನ್ನು ಮುಂದು ಮಾಡಿ, ಕೇಂದ್ರದಲ್ಲಿ ಇರುವ ಯಾರೊ ತಮ್ಮ ಹಾಗೂ ತಮ್ಮ ಬಾಲಂಗೋಚಿಗಳ ಅಧಿಕಾರವನ್ನು ನಿರಂತರಗೊಳಿಸಿಕೊಳ್ಳಲು ಪ್ರಯತ್ನಿಸುವುದನ್ನು ಸಹಿಸಲಾಗುವುದಿಲ್ಲ. ಜನಪರವಾದ, ಜನಪ್ರಿಯವಾದ ಆಡಳಿತವನ್ನು ಸಂಸ್ಥಾಪಿಸುವ ದೃಷ್ಟಿಯಿಂದ, ಪ್ರಜಾಪ್ರಭುತ್ವದ ಇಂತಹ ಶಕ್ತಿಗಳನ್ನು ಸಂರಕ್ಷಿಸುವ ದೃಷ್ಟಿಯಿಂದ, ರಾಜ್ಯಗಳ ಯಾವುದೇ ಕ್ರಮಗಳು ನಿರಂತರವಾಗಿ ಸಾಗುವಂತೆ ವ್ಯವಸ್ಥೆಗೊಳಿಸಬೇಕು. ಅಷ್ಟೇಯಲ್ಲ, ಕೇಂದ್ರ ಹಾಗೂ ರಾಜ್ಯದ ಸೇವಾ ಜಾಲಗಳು ಪ್ರಜಾಪ್ರಭುತ್ವದ ರಕ್ಷಣೆಗಾಗಿ ಕಾರ್ಯನಿರತವಾಗುವಂತೆ ನೋಡಿಕೊಳ್ಳಬೇಕು, ಇದು ಪ್ರಜಾತಾಂತ್ರಿಕ ರಕ್ಷಣೆಗೆ ತುಂಬ ಅವಶ್ಯಕವೂ ಅಷ್ಟೇ ಮಹತ್ವದ್ದೂ ಆಗಿದೆ ಆದ್ದರಿಂದ, ಆಡಳಿತ ಎಲ್ಲಾ ಕ್ಷೇತ್ರದಲ್ಲಿಯೂ ರಾಜ್ಯಗಳಿಗೆ ಎಷ್ಟೆಷ್ಟು ಅಧಿಕಾರ ನೀಡಬೇಕು ಎಂಬ ವಿಷಯ ಕುರಿತು ವಿವರವಾದ ಚರ್ಚೆ ನಡೆಯಬೇಕು.

ಮಾನ್ಯ ಉಪಾಧ್ಯಕ್ಷರೆ, ಇತ್ತೀಚೆಗೆ ನಾವು ಅಸ್ಸಾಮಿನ ಕೆಲವು ಪ್ರದೇಶಗಳಿಗೆ ಸ್ವಾಯತ್ತ ಅಧಿಕಾರ ಕೊಡುವ ಒಂದು ಉಪ ರಾಜ್ಯವೋ ಇತ್ಯಾದಿ, ಏನಾದರೂ ಕರೆಯಿರಿ ಒಂದು ಮಸೂದೆಯನ್ನು ಪಾಸು ಮಾಡಲಾಯಿತು ಎಂಬ ಸಂಗತಿಯೇ ಸಧ್ಯದ ಪರಿಸ್ಥಿತಿಯಲ್ಲಿ

ಎಲ್ಲವೂ ಚೆನ್ನಾಗಿಲ್ಲ ಎಂಬುದಕ್ಕೆ ಜೀವಂತ ಸಾಕ್ಷಿಯಾಗಿದೆ. ಆದ್ದರಿಂದ ಪ್ರಸಕ್ತದ ಸ್ಥಿತಿ ಬದಲಾಗಬೇಕು, ನಮ್ಮ ಮುಂದಿರುವ ಪ್ರಶ್ನೆಯೆಂದರೆ, ಪರಿಸ್ಥಿತಿ ಕೈಮೀರುವ ಮುಂಚೆ ನಾವು ಸೂಕ್ತ ಕ್ರಮ ಕೈಗೊಂಡು ಅಪೇಕ್ಷಣೀಯ ಬದಲಾವಣೆಗೆ ನಾಂದಿ ಹಾಡಬೇಕೇ? ಅಥವಾ ಎಲ್ಲವೂ ಕೈಮೀರಿ ಹೋಗಿ, ಬಿಕ್ಕಟ್ಟು ತಲೆದೋರುವವರೆಗೆ ಕುಳಿತುಕೊಳ್ಳಬೇಕೇ? ಎಂಬುದು. ನಾವು ಈ ವಿಷಯದಲ್ಲಿ ಒಂದು ನಿರ್ಧಾರಕ್ಕೆ ಬರಬೇಕಾಗಿದೆ. ನೀವು ಈ ದೇಶದ ಐಕ್ಯತೆ ಹಾಳಾಗಬಾರದೆಂದು ಬಯಸುವುದರಿಂದ, ಇನ್ನೂ ವ್ಯಾಪಕ ಅರ್ಥದಲ್ಲಿ ಹೇಳುವುದಾದರೆ, ನಮ್ಮ ದೇಶದ ಸಾಮರಸ್ಯ ಕೆಡಬಾರದೆಂದು ನಾವೆಲ್ಲರೂ ಬಯಸುತ್ತೇವೆಯಾದ್ದರಿಂದ, ಯಾವುದೇ ಅನಪೇಕ್ಷಣೀಯ ಪರಿಸ್ಥಿತಿ ಉದ್ಭವಿಸಿ, ದುರಂತ ಸಂಭವಿಸುವ ಮುಂಚೆಯೇ ನಾವು ಸೂಕ್ಷ್ಮ ಬದಲಾವಣೆಗಳನ್ನು ತರಬೇಕಾಗಿದೆ ಎಂಬುವುದರ ಬಗ್ಗೆ ತಮಗೆ ಸಮ್ಮತಿ ಇದೆಯೆಂದು ನಮ್ಮ ಭಾವನೆ.

ಈ ದೃಷ್ಟಿಯಿಂದ ಈಗಾಗಲೇ ನನ್ನ ಗೆಳೆಯರೊಬ್ಬರು ಸೂಚಿಸಿದಂತೆ, ಇಡೀ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಬೇಕೆಂಬುವುದು ನನ್ನ ವಿಚಾರ. ಉದಾಹರಣೆಗೆ ಹೇಳುವುದಾದರೆ, ಒಂದು ರಾಜ್ಯದ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಯಾರಾಗಬೇಕೆಂಬುದರ ಕುರಿತು ಕೇಂದ್ರ ಗೃಹ ಮಂತ್ರಿಗಳು ಪ್ರತ್ಯೇಕವಾಗಿಯೋ, ಪರೋಕ್ಷವಾಗಿಯೋ ರಾಷ್ಟ್ರಪತಿಯವರಿಗೆ ಯಾಕೆ ಸಲಹೆ ಮಾಡಬೇಕು ? ಈ ವಿಷಯದಲ್ಲಿ ಸಂಪೂರ್ಣ ಅಧಿಕಾರ ಸಂಬಂಧಪಟ್ಟ ರಾಜ್ಯಕ್ಕೆ ಬಿಟ್ಟುಕೊಡಬೇಕು. ಸಂಬಂಧಿಸಿದ ರಾಜ್ಯ ಸರ್ಕಾರದ ಸಲಹೆಯ ಮೇರೆಗೆ ರಾಷ್ಟ್ರಪತಿಯವರು ಯಾರನ್ನಾದರೂ ನೇಮಕ ಮಾಡುವಂತಾಗಬೇಕು. ಈ ವಿಷಯದಲ್ಲಿ ಗೃಹಮಂತ್ರಿಗಳು ಯಾಕೆ ಮೂಗು ತೂರಿಸಬೇಕು? ನ್ಯಾಯಾಂಗ ಮತ್ತು ಕಾರ್ಯಾಂಗಗಳು ಪರಸ್ಪರ ಪರಭಾರೆಯಾಗಿರಬೇಕೆಂದು ನಾವು ಬಯಸುತ್ತೇವೆ. ಆದರೆ, ಪ್ರತಿಯೊಂದು ಸಂದರ್ಭದಲ್ಲಿಯೂ ಗೃಹ ಮಂತ್ರಿಗಳು ತಮ್ಮ ಕೈ ಹಾಕುವುದನ್ನು ನೋಡುತ್ತೇವೆ. ನಾನು ಮುಂದಿಡುತ್ತಿರುವ ಎಲ್ಲಾ ಸಲಹೆಗಳನ್ನು ಅವು ಅಂಗೀಕರಿಸಬೇಕೆಂದೇನೂ ಇಲ್ಲ. ಆದರೆ ರಾಜ್ಯಗಳು ಎಲ್ಲಾ ಅರ್ಥದಲ್ಲಿ ತಮ್ಮದೇ ಆದ ಅಧಿಕಾರ ಹೊಂದಿ ಅಸ್ತಿತ್ವದಲ್ಲಿರಲು ಸಾಧ್ಯವಾಗಬೇಕು. ಆಗ ಮಾತ್ರ ನಾವು ರಾಷ್ಟ್ರದ ಐಕ್ಯತೆಯನ್ನು ಸಬಲಗೊಳಿಸಲು ಸಾಧ್ಯವಾಗುತ್ತದೆ.

ಮಾನ್ಯ ಉಪಾಧ್ಯಕ್ಷರೇ, ಒಂದು ವೇಳೆ ಕೆಲವು ಜನ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ತಮ್ಮ ಅಧಿಕಾರವನ್ನು ಈ ದೇಶದ ಸಂವಿಧಾನ ಹಾಗೂ ರಾಜಕೀಯ ಬದುಕಿನ ವ್ಯವಸ್ಥೆಯ ಮೇಲೆ ಹೇರಲು ಪ್ರಯತ್ನಿಸಿದರೆ, ದೇಶದ, ರಾಷ್ಟ್ರದ ಭವಿಷ್ಯತ್ತಿನ ದೃಷ್ಟಿಯಿಂದ ಅದೊಂದು ಅಪಾಯಕಾರಿ ಜೂಜಾಟವಾದೀತು. ಏಕೆಂದರೆ ವ್ಯವಸ್ಥೆಯ ಘೋಷಣೆಯ ಮೂಲಕ ಅವರು ಒಂದು ಪ್ರತಿ ಕ್ರಾಂತಿಗೆ ಪಿತೂರಿಯನ್ನು ನಡೆಸುತ್ತಿದ್ದಾರೆ.

ಅಷ್ಟೇಯಲ್ಲ, ಇಡೀ ದೇಶವನ್ನು ಬಲ ಪ್ರತಿಗಾಮಿಗಳ ಕೈಯಲ್ಲಿ ಕೊಡುವ ಹುನ್ನಾರ ಅವರದು, ಏಕೀಕೃತ ಸರ್ಕಾರದ ಘೋಷಣೆ ಬಂದಿರುವುದು ತೀರಾ ಬಲಪಂಥೀಯ ನೆಲೆಗಳಿಂದ ಎಂಬುದು ಈಗ ಜಗಜ್ಜಾಹಿರ: ಇದರಲ್ಲಿ ಆಶ್ಚರ್ಯದ ಸಂಗತಿಯೇನು ಇಲ್ಲ.

ಈ ಘೋಷಣೆ ಮತ್ತು ಅದು ಧ್ವನಿಸುತ್ತಿರುವ ಬೇಡಿಕೆಗಳನ್ನು ನಾವು ಪ್ರತಿಭಟಿಸಬೇಕಾಗಿದೆ. ಅದಕ್ಕಾಗಿ ನಾವು ರಾಜ್ಯಗಳಿಗೆ ಹೆಚ್ಚಿನ ಅಧಿಕಾರ, ಆರ್ಥಿಕ, ರಾಜಕೀಯ, ಆಡಳಿತಾತ್ಮಕ ಅಧಿಕಾರ ನೀಡುವಂತೆ ವಿಶೇಷ ಬೇಡಿಕೆ ಮಂಡಿಸುವ ಮೂಲಕ, ಬಲಪಂಥೀಯ ಪ್ರತಿಗಾಮಿಗಳನ್ನು ಹಿಮ್ಮೆಟ್ಟಿಸಬೇಕಾಗಿದೆ. ಇಂದು ಈ ಎರಡು ಶಕ್ತಿಗಳು ಮುಖಾ-ಮುಖಿಯಾಗಿ ನಿಂತಿವೆ. ಒಂದು ಕಾಂಗ್ರೆಸ್ಸಿನ ತೀರ ಪ್ರತಿಗಾಮೀ ಶಕ್ತಿಗಳು, ಜನಸಂಘ ಮತ್ತು ಸ್ವತಂತ್ರ ಪಕ್ಷ, ಇವೆಲ್ಲವೂ ಒಂದು ವಿಧದ ಏಕೀಕೃತ ವ್ಯವಸ್ಥೆಯನ್ನು ಸೃಷ್ಟಿಸಲು ಹೆಣಗುತ್ತಿವೆ. ಇನ್ನೊಂದೆಡೆ ಎಡಪಂಥೀಯ ಹಾಗೂ ಪ್ರಗತಿಪರಶಕ್ತಿಗಳು, ಇವು ರಾಷ್ಟ್ರದ ಐಕ್ಯತೆಯನ್ನು ರಚಿಸಿ, ಅದನ್ನು ಸದೃಢಗೊಳಿಸಲು ಪ್ರಯತ್ನಿಸುತ್ತಿವೆ. ಅಷ್ಟೇಯಲ್ಲ, ಪ್ರಜಾಪ್ರಭುತ್ವವನ್ನು ಇನ್ನು ಸಮೃದ್ಧಗೊಳಿಸಿ, ರಾಜ್ಯ ಮತ್ತು ಕೇಂದ್ರದ ನಡುವಿನ ಅಧಿಕಾರ ಹಂಚಿಕೆಯನ್ನು ಪುನರ್ ಪರಿಶೀಲಿಸಿ, ರಾಜ್ಯಗಳ ಉಡಿಗೆ ಹೆಚ್ಚಿನ ಅಧಿಕಾರ ಬೀಳುವಂತೆ ಪ್ರಯತ್ನಿಸುತ್ತಿವೆ. ಇದು ಇಂದಿನ ಅತ್ಯಂತ ಮಹತ್ವದ ಸಮಸ್ಯೆಯಾಗಿದೆ. ಈ ಸಮಸ್ಯೆ ಜನರ ಪರವಾಗಿ, ರಾಷ್ಟ್ರದ ಐಕ್ಯತೆಯ ಪರವಾಗಿ, ಇದೆಲ್ಲವೂ ಮಿಗಿಲಾಗಿ, ಒಂದು ಗತಿಶೀಲವಾದ ಪ್ರಜಾ ತಾಂತ್ರಿಕ ವ್ಯವಸ್ಥೆಯ ನಿರ್ಮಾಣದ ನಮ್ಮ ಬಯಕೆಗೆ ಅನುಗುಣವಾಗಿ, ಇತ್ಯರ್ಥವಾಗುವುದೆಂಬ ಭರವಸೆ ನನಗಿದೆ.

## 7. ಉದ್ಯೋಗದ ಹಕ್ಕು ಮೂಲಭೂತ ಹಕ್ಕಾಗಬೇಕು*

ಮಾನ್ಯ ಉಪಾಧ್ಯಕ್ಷರೆ, ಸ್ವಾತಂತ್ರ್ಯನಂತರ ನಮ್ಮ ದೇಶದಲ್ಲಿ ಅತ್ಯಂತ ಆಸ್ಫೋಟಕ ಸ್ಥಿತಿ ತಲುಪಿರುವ ಸಮಸ್ಯೆಗಳಲ್ಲಿ ಒಂದಾದ ನಿರುದ್ಯೋಗ ಸಮಸ್ಯೆ ಮತ್ತು ಅರೆ ಉದ್ಯೋಗ ಸಮಸ್ಯೆ ಕುರಿತು ಇಂದು ಚರ್ಚೆ ನಡೆಯುತ್ತಿರುವುದು ನನಗೆ ತುಂಬಾ ಸಂತೋಷವುಂಟು ಮಾಡಿದೆ. ಈ ಗೊತ್ತುವಳಿಯ ಬಗ್ಗೆ ನನಗೆ ಸಂಪೂರ್ಣ ಸಮ್ಮತಿ ಇದೆ, ಅಷ್ಟೇಯಲ್ಲ, ಈ ಕುರಿತು ಯಾರಿಗೂ ಭಿನ್ನಾಭಿಪ್ರಾಯವಿಲ್ಲವೆಂದು ನನ್ನ ನಂಬುಗೆ. ಗೊತ್ತುವಳಿಯಲ್ಲಿರುವಂತೆ ಸರ್ಕಾರವು ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸುವಲ್ಲಿ ಸಂಪೂರ್ಣವಾಗಿ ವಿಫಲವಾಗಿದೆ. ಎಂಬ ಅಭಿವ್ಯಕ್ತಿಗೆಯನ್ನು ಗೆಳೆಯರಾದ ಶ್ರೀ ಧಾರಿಯಾ ಆಕ್ಷೇಪವೆತ್ತುವುದು ಕಂಡು ನನಗೆ, ಒಂದಿಷ್ಟು ದಿಗಿಲಾಗುತ್ತಿದೆ. ಸಂಪೂರ್ಣವಾಗಿ ಶಬ್ದ ಶ್ರೀ ಧಾರಿಯಾ ಅವರಿಗೆ ಮುಜುಗರ ಉಂಟುಮಾಡುತ್ತಿದೆ ಎಂಬುದು ಸ್ಪಷ್ಟವಾಗಿದೆ. ಆದರೆ, ಸರ್ಕಾರ ವಿಫಲವಾಗಿದೆ ಎಂಬುದರ ಬಗ್ಗೆ ಅವರಿಗೆ ಭಿನ್ನಾಭಿಪ್ರಾಯವಿಲ್ಲ,. ಸಂಪೂರ್ಣವಾಗಿ ಎನ್ನುವ ನಿರ್ದಿಷ್ಟ ಶಬ್ದವನ್ನು ಸೂಕ್ತವಾಗಿ ಬಳಸಬಹುದಾದ ಸಂದರ್ಭ ಯಾವುದು ಎಂಬುದನ್ನು ನಾನೀಗ ತಿಳಿಯಬಯಸುತ್ತೇನೆ.

ಪ್ರಥಮ ಪಂಚವಾರ್ಷಿಕ ಸಮಯದಲ್ಲಿ, ಹಿಂದಿನಿಂದ ಉಳಿದುಕೊಂಡು ಬಂದಿದ್ದ ದೇಶದಲ್ಲಿಯ ನಿರುದ್ಯೋಗಿಗಳ ಸಂಖ್ಯೆ 3.3 ಮಿಲಿಯನ್ ಆಗಿತ್ತು. ದ್ವಿತೀಯ ಪಂಚವಾರ್ಷಿಕ ಯೋಜನೆಯ ಆರಂಭದ ಹೊತ್ತಿಗಾಗಲೇ ಅದು 5.5 ಮಿಲಿಯನ್ ಮುಟ್ಟಿತ್ತು. ತೃತೀಯ ಪಂಚವಾರ್ಷಿಕ ಯೋಜನೆ ಮುಗಿಯುವ ವೇಳೆಗೆ ಆ ಸಂಖ್ಯೆ 7.5 ರಿಂದ 8 ಮಿಲಿಯನ್‌ಗೆ ತಲುಪಿತು.

ಈಗಾಗಲೇ ಅದು 20 ಮಿಲಿಯನ್ ಆಸುಪಾಸಿನಲ್ಲಿ ಸುಳಿದಾಡುತ್ತಿದೆ. ಇಷ್ಟಾಗಿಯೂ ಅವರು ಸಂಪೂರ್ಣವಾಗಿ ಎಂಬುವ ಶಬ್ದವನ್ನು ಈ ಗೊತ್ತುವಳಿಯಲ್ಲಿ ಬಳಸುವುದಕ್ಕೆ ಆಕ್ಷೇಪವೆತ್ತುತ್ತಾರೆಯೇ ಇದು ಸಂಪೂರ್ಣ ವಿಫಲತೆ ಎಂದಲ್ಲವಾದರೆ, ಸಂಪೂರ್ಣ ವಿಫಲತೆಗೆ ಇನ್ನೆಲ್ಲಿಯ ನಿದರ್ಶನ ಹೆಸರಿಸಬೇಕೋ ನನಗೆ ತೋರುವುದಿಲ್ಲ, ವಾಸ್ತವವೆಂದರೆ, ನನ್ನ ಗೆಳೆಯ ಶ್ರೀ ಧಾರಿಯಾ ಅವರು ಆಳುವ ಪಕ್ಷ ಮತ್ತು ಸರ್ಕಾರಕ್ಕೆ ನಿಷ್ಠರಾಗಿರುವುದರಿಂದ ಈ ಸಂದರ್ಭದಲ್ಲಿ ಒಂದಿಷ್ಟು ದಾರಿ ಬಿಟ್ಟು ಮಾತಾಡುತ್ತಿದ್ದಾರೆ. ತುಂಬಾ ಜಾಣರಾಗಿರುವ ಅವರಿಗೆ ಸಂಪೂರ್ಣವಾಗಿ ಎನ್ನುವ ಶಬ್ದ ಎಲ್ಲಿ ಬಳಸಬೇಕು, ಎಲ್ಲಿ ಬಳಸಬಾರದು, ಎಂಬುದು ಖಚಿತವಾಗಿ ಗೊತ್ತಿದೆ.

---

* ಉದ್ಯೋಗದ ಹಕ್ಕು ಮೂಲಭೂತ ಹಕ್ಕುಗಳಲ್ಲಿ ಒಳಗೊಳ್ಳಲು ಸಂವಿಧಾನಕ್ಕೆ ತಿದ್ದುಪಡಿ ತರುವ ಗೊತ್ತುವಳಿಯ ಮೇಲಿನ ಚರ್ಚೆಯಿಂದ, ರಾಜ್ಯಸಭೆ, 4 ಡಿಸೆಂಬರ್ 1970 ಸಿ.ಸಿ.116-124.

ನಿರುದ್ಯೋಗ ಸಮಸ್ಯೆ ಒಂದು ಕ್ಲಿಷ್ಟ ಸಮಸ್ಯೆಯಾಗಿದೆ, ಅದನ್ನು ಬಗೆಹರಿಸುವುದು ಅಷ್ಟು ಸರಳವಾದ ಸಂಗತಿಯೇನೂ ಅಲ್ಲ. ವಾಸ್ತವವೆಂದರೆ, ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಅದನ್ನು ಖಾಯಂ ಆಗಿ ಪರಿಹರಿಸುವುದು ಅಥವಾ ಸಂಪೂರ್ಣವಾಗಿ ಬಗೆಹರಿಸುವುದು ಸಾಧ್ಯವಿಲ್ಲ. ಶ್ರೀಮಂತ ರಾಷ್ಟ್ರಗಳಾದ ಅಮೇರಿಕಾ, ಫ್ರಾನ್ಸ್, ಇಂಗ್ಲೆಂಡ್, ವೆಸ್ಟ್ ಜರ್ಮನಿ, ಮುಂತಾದ ರಾಷ್ಟ್ರಗಳಲ್ಲಿಯೂ ನಿರುದ್ಯೋಗ ತಲೆಯೆತ್ತಿದೆ. ಆದರೆ, ಈ ಎಲ್ಲ ರಾಷ್ಟ್ರಗಳು ಹಳೆಯ ಬಂಡವಾಳಶಾಹಿ ರಾಷ್ಟ್ರಗಳಾಗಿವೆ. ಅಲ್ಲಿಯ ಸಮಾಜಗಳು ಅಭಿವೃದ್ಧಿ ಹೊಂದಿವೆ. ಅವು ಸಂಪದ್ಭರಿತ ಸಮಾಜಗಳಾಗಿವೆ. ಅಲ್ಲಿಯ ತಾಂತ್ರಿಕ ಕ್ರಾಂತಿಯ ಹೊರತಾಗಿಯೊ ನಿರುದ್ಯೋಗ ಸಮಸ್ಯೆ ಉದ್ಭವಿಸಿ, ಉಲ್ಬಣಗೊಳ್ಳುತ್ತಿದೆ. ಕೆಲವು ಸಲ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ತಾಂತ್ರಿಕ ಮತ್ತು ವೈಜ್ಞಾನಿಕ ಕ್ರಾಂತಿಗಳೂ ನಿರುದ್ಯೋಗದೆಡೆಗೆ ತೆಗೆದುಕೊಂಡು ಹೋಗುತ್ತವೆ. ಯಾಕೆಂದರೆ, ಒಂದೆಡೆ, ಶ್ರಮಿಕರು ಮತ್ತು ಉದ್ಯೋಗದ ಸಮಸ್ಯೆ ಇನ್ನೊಂದೆಡೆ, ವಿಜ್ಞಾನ ಮತ್ತು ತಂತ್ರಜ್ಞಾನದ ಕ್ರಾಂತಿಕಾರಿ ಬೆಳವಣಿಗೆ ಪ್ರಭಾವ- ಇವುಗಳನ್ನು ಸೂಕ್ಷ್ಮವಾಗಿ ಹೊಂದಿಸಿ ನಿರ್ವಹಿಸುವ ಹಿತ ಮತ್ತು ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಇರುವುದಿಲ್ಲ ಇಂದು ಕಾಣ ಬರುತ್ತಿರುವ ಬಂಡವಾಳಶಾಹಿ ಜಗತ್ತಿನ ಸ್ಥಿತಿ ಇದಕ್ಕೆ ಜ್ವಲಂತ ನಿದರ್ಶನವಾಗಿದೆ.

ಹಿಂದುಳಿದ ರಾಷ್ಟ್ರಗಳಲ್ಲಿಯೂ ನಿರುದ್ಯೋಗ ಸಮಸ್ಯೆ ಹೆಚ್ಚುತ್ತಿದೆ, ಈ ಎಲ್ಲಾ ದೇಶಗಳು ಹಿಂದುಳಿದಿವೆಯಾದ್ದರಿಂದ ಅಷ್ಟೇ ಅಲ್ಲ ಈ ಹಿಂದುಳಿದ ಸ್ಥಿತಿಯಲ್ಲಿಯೇ ಮುಂದುವರೆಯುತ್ತಿವೆಯಾದ್ದರಿಂದ ಈ ದೇಶಗಳು ನಿರುದ್ಯೋಗ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ. ಅದಕ್ಕೆ ಮುಖ್ಯ ಕಾರಣವೆಂದರೆ, ಈ ದೇಶಗಳಲ್ಲಿ ಸ್ಥಾಪಿತ ಹಿತಾಸಕ್ತಿಯ ಜನ ಆರ್ಥಿಕ ಮತ್ತು ರಾಜಕೀಯ ಅಧಿಕಾರವನ್ನು ಚಲಾಯಿಸುತ್ತಿದ್ದಾರೆ. ಭಾರತ ದೇಶ ಇದಕ್ಕೆ ಒಂದು ನಿರ್ದಶನವಾಗಿದೆ. ನಮ್ಮ ದೇಶದಾದ್ಯಂತ ಅಪಾರ ಸಂಖ್ಯೆಯ ಜನ ಇಂದು ನಿರುದ್ಯೋಗಿಗಳಾಗಿದ್ದಾರೆ. ಈ ಸಂದರ್ಭದಲ್ಲಿ ನಾವು ನಿರುದ್ಯೋಗ ಕುರಿತು ಇರುವ ಅಂಕಿ-ಸಂಖ್ಯೆಗಳಿಂದ ದಾರಿ ತಪ್ಪಬಾರದು. ಯಾಕೆಂದರೆ, ಸ್ಪಷ್ಟವಾಗಿ ಕಾಣಿಸದೆ ನಮ್ಮ ದೃಷ್ಟಿಯಿಂದ ಮರೆಮಾಚಲ್ಪಟ್ಟಿರುವ ನಿರುದ್ಯೋಗವನ್ನು ನಾವು ಸೂಕ್ಷ್ಮವಾಗಿ ಗಮನಿಸಬೇಕಾಗಿದೆ. ಅಂದರೆ, ದಾಖಲಿಸಲಾದ ನಿರುದ್ಯೋಗಿಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿರುವ ಅರೆ ಉದ್ಯೋಗಿ ಜನರನ್ನು ಪರಿಗಣಿಸಬೇಕು.ಗ್ರಾಮಾಂತರ ಮತ್ತು ನಗರದ ಅರ್ಥ ವ್ಯವಸ್ಥೆಯನ್ನು ಅಂದರೆ, ಗ್ರಾಮೀಣಪ್ರದೇಶದ ಮತ್ತು ಔದ್ಯಮೀಕ ಕ್ಷೇತ್ರದ ಆರ್ಥಿಕತೆಯನ್ನು ಒಟ್ಟಾರೆಯಾಗಿ ಪರಿಗಣಿಸಿದರೆ, ಒಂದು ಅಧಿಕೃತ ಲೆಕ್ಕಾಚಾರದ ಪ್ರಕಾರ, 1980ರ ವೇಳೆಗೆ ಈ ದೇಶದಲ್ಲಿ 100 ಮಿಲಿಯನ್ ನಿರುದ್ಯೋಗಿಗಳು ಅಥವಾ ಅರೆ ಉದ್ಯೋಗಿಗಳು ಕಾಣಸಿಗುತ್ತಾರೆ. ಈ ಲೆಕ್ಕಾಚಾರ ಸರ್ಕಾರದ ಏಜೆನ್ಸಿಗಳೇ ಒದಗಿಸಿದ್ದಾಗಿದೆ. ಯಾವುದೇ ಖಾಸಗಿ ಏಜೆನ್ಸಿ ಪ್ರಸ್ತುತಪಡಿಸಿದ ಅಂದಾಜಿನ ಅಂಕಿ-ಸಂಖ್ಯೆ ಇದಲ್ಲ. ನಾವು ಇಂದು ಎದುರಿಸುತ್ತಿರುವ ಸಮಸ್ಯೆಯ ಸ್ವರೂಪ ಎಷ್ಟು ಗಂಭೀರವಾಗಿದೆ ಎಂದು ಇದರಿಂದ ನಿಶ್ಚಯವಾಗುತ್ತದೆ.

ಒಂದು ನಿರ್ದಿಷ್ಟ ಅವಧಿಯಲ್ಲಿ ಕಾಣಿಸಿಕೊಂಡ ನಿರುದ್ಯೋಗಿಗಳ ಸಂಖ್ಯೆ ಯಥಾವತ್ತಾಗಿ ಮುಂದುವರಿಯುತ್ತದೆ. ಅಷ್ಟೇಯಲ್ಲ, ಕ್ರಮೇಣವಾಗಿ ಒಂದೆಡೆ ಶ್ರಮ ಮಾರುಕಟ್ಟೆಯನ್ನು ಪ್ರವೇಶಿಸುತ್ತಿರುವ ಜನರ ಸಂಖ್ಯೆ, ಇನ್ನೊಂದೆಡೆ ಸೃಷ್ಟಿಸಲಾಗುತ್ತಿರುವ ಉದ್ಯೋಗಗಳ ಅವಕಾಶ, ಇವುಗಳ ನಡುವಿನ ಅಂತರ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ. ಇದು ಸಾರ್ವಜನಿಕ ಕ್ಷೇತ್ರ ಅಥವಾ ಖಾಸಗಿ ರಂಗವಾಗಿರಲಿ, ಕೃಷಿ ಅಥವಾ ಔದ್ಯಮಿಕ ಕ್ಷೇತ್ರವಾಗಲಿ, ಎಲ್ಲೆಡೆಯೂ ಈ ಬಿರುಕು ದಿನದಿಂದ ದಿನಕ್ಕೆ ಹೆಚ್ಚು ಬಾಯಿ ತೆರೆಯುತ್ತಿದೆ. ಆದ್ದರಿಂದ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯು ಸಿಲುಕಿಕೊಂಡಿರುವ ನಾವು ಈ ದುರ್ಬಲ ಪರಿಸ್ಥಿತಿ ಎದುರಿಸುತ್ತಿದ್ದೇವೆ. ಕಾಲ ಕಳೆದಂತೆ ಈ ಹಿಂದಿನಿಂದ ಬಂದ ನಿರುದ್ಯೋಗದ ಹೊರೆ ದಿನುಪ್ರತಿ ದೊಡ್ಡದಾಗುತ್ತಿದೆ. ಉದ್ಯೋಗ ಬೇಡುವವರ ಸಂಖ್ಯೆ ಉದ್ಯೋಗ ನೀಡುವವರ ಸಾಮರ್ಥ್ಯ, ಇದರ ನಡುವಿನ ಕಂದರ ಕ್ರಮೇಣ ಹಿರಿದಾಗುತ್ತಿದೆ, ಇದು ನಾವಿಂದು ಎದುರಿಸುತ್ತಿರುವ ನಿಜ ಸ್ಥಿತಿ.

ಈ ಕಾರಣಕ್ಕಾಗಿ, ನಾವು ಹುಡುಕುವ ಪರಿಹಾರ ಮೂಲಭೂತ ಸ್ವರೂಪದ್ದಾಗಿರಬೇಕು. ಯಾವುದೇ ತೇಪೆ ಹಚ್ಚುವ ಕೆಲಸದಿಂದ ಈ ಸಮಸ್ಯೆ ಬಗೆಹರಿಯುವಂಥದ್ದಲ್ಲ, ಈ ಸಮಸ್ಯೆ ಪರಿಹರಿಸಲು ನಾವಿಂದು ಅನುಸರಿಸುತ್ತಿರುವ ಮಾರ್ಗೋಪಾಯಗಳು ಏನೇನೂ ಸಾಲವು. ಅಷ್ಟೇಯಲ್ಲ, ಅವು ತೀರ ಹಾಸ್ಯಾಸ್ಪದವಾಗಿವೆ: ಎನ್ನಲೂ ಆದೀತು. ಯೋಜನಾ ಆಯೋಗ ಸಂಪೂರ್ಣ ವಿಫಲವಾಗಿವೆ, ಆದರೆ ಈ ವಿಫಲತೆ ಹೇಳಲಸದಳ. ಕೇವಲ ಸಂಪೂರ್ಣವಾಗಿ ಎಂದೆಷ್ಟೇ ಹೇಳದೆ ಸರ್ಕಾರ ಮತ್ತು ಯೋಜನಾ ಆಯೋಗಗಳು ಈ ವಿಷಯದಲ್ಲಿ ದಯನೀಯವಾದ ಸೋಲನ್ನು ಕಂಡಿವೆ: ಎನ್ನುವುದು ನನ್ನ ಖಚಿತ ನಿಲುವು. ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸುವಲ್ಲಿ ಅವು ಕೇವಲ ವಿಫಲವಾಗಿವೆ, ಎಂದಷ್ಟೇ ಹೇಳಿದರೆ ಸಾಲದು. ಅವುಗಳ ಈ ವಿಫಲತೆ ಘೋರ ಘಾತಕೀಯ ಸ್ವರೂಪದ್ದಾಗಿದೆ. ಆದ್ದರಿಂದ ಅವು ರಾಷ್ಟ್ರದ ನ್ಯಾಯಾಲಯದ ಮುಂದೆ ತಮ್ಮ ತಪ್ಪು ಒಪ್ಪಿಗೆಯನ್ನು ಸಲ್ಲಿಸಿ, ಅದರ ಖಂಡನೆಗೆ ಗುರಿಯಾಗಬೇಕಿದೆ. ನಿರುದ್ಯೋಗದ ಸಮಸ್ಯೆ ಪರಿಹರಿಸಲು ನಾವು ಅನುಸರಿಸಬೇಕಾದ ಮಾರ್ಗ ಇದಲ್ಲ, ಈ ವಿರಾಟರೂಪದ ಸಮಸ್ಯೆಗೆ ಪರಿಹಾರಕ್ಕೆ ನಾವು ಹರಕು-ಮುರುಕು ಪರಿಹಾರಗಳನ್ನು ಕಂಡುಕೊಳ್ಳುವ ಬದಲು ಅಲ್ಲಿ-ಇಲ್ಲಿ ತೇಪೆ ಹಚ್ಚಿ ರಿಪೇರಿಸುವ ಬದಲು, ಇಡೀ ಬಂಡವಾಳಶಾಹಿ ವ್ಯವಸ್ಥೆಯನ್ನು ತೆಕ್ಕೆಗೆ ತೆಗೆದುಕೊಳ್ಳಬೇಕು. ನಮ್ಮ ಅರ್ಥ ವ್ಯವಸ್ಥೆಯ ಇದಾವೋ / ಅದಾವೋ ಯಾವುದೆ ಒಂದು ವಿಭಾಗದಲ್ಲಿ ಒಂದಿಷ್ಟು ತಾತ್ಪೂರ ಪುನಃ ವ್ಯವಸ್ಥೆ ಮಾಡಲು ಸಾಧ್ಯವಿದೆ. ಅಂದರೆ, ಅದು ಈ ಭಯಾನಕ ವ್ಯಾಪ್ತಿಯ ಸಮಸ್ಯೆಯನ್ನು ಪರಿಹರಿಸಲಾರದು.

ನಿರುದ್ಯೋಗ ಸಮಸ್ಯೆಯ ಆಳ-ಅಗಲ ಬಹು ವ್ಯಾಪಕವಾಗಿದೆ, ಆದ್ದರಿಂದ ನಾವು ನಮ್ಮ ದೇಶದಲ್ಲಿ ಆ ಸಮಸ್ಯೆಯ ಮೂಲಕ ಇಳಿದು ಅದರ ತಳ ಬುಡಗಳನ್ನು ಶೋಧಿಸಬೇಕಾಗಿದೆ: ಆದರೆ ಮುಖ್ಯ ಕಾರಣವನ್ನು ಹುಡುಕಿ ತೆಗೆಯಬೇಕಿದೆ.

ದೇಶದ ಒಟ್ಟು ಜನಸಂಖ್ಯೆಯ ಸುಮಾರು ಶೇಕಡ 70 ಜನ ನಮ್ಮ ಕೃಷಿ ಆರ್ಥಿಕತೆಯಲ್ಲಿ ತೊಡಗಿಸಿಕೊಂಡಿದ್ದಾರೆ.ದೇಶದ ಒಟ್ಟು ಆದಾಯದ ಶೇಕಡ 45ರಷ್ಟು ಕೃಷಿ ಕೇಂದ್ರದಿಂದಲೇ ಬರುತ್ತದೆ. ಹಸಿರು ಕ್ರಾಂತಿಯ ಬಗ್ಗೆ ಏನೆಲ್ಲ ವಾದ- ವಿವಾದ ಮಾಡಿ ಬಡಾಯಿ ಕೊಚ್ಚಿದರೂ ನಾವಿನ್ನು ಅರೆ- ಅಭಿವೃದ್ಧಿಯ ಘಟ್ಟಯಲ್ಲಿಯೇ ಇದ್ದೇವೆ. ಹಸಿರು ಕ್ರಾಂತಿಯ ಪರಿಣಾಮವಾದದ್ದು ತುಂಬಾ ಸಣ್ಣ ಪ್ರಮಾಣದ ಭೂಮಿಯ ಮೇಲೆ, ಈ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಅತ್ಯಂತ ಮಹತ್ವ ಸಂಗತಿ ಎಂದರೆ, ಅರೆ ಉದ್ಯೋಗ ನಿವಾರಿಸಿ, ಕೃಷಿ ರಂಗದಲ್ಲಿ ಸಂಪೂರ್ಣ ಉದ್ಯೋಗ ದೊರಕಿಸಿ ಕೊಡುವ ಕೃಷಿಯಿಂದ ನಮ್ಮ ಕೃಷಿ ಆರ್ಥಿಕತೆಯನ್ನು ಅಭಿವೃದ್ಧಿಪಡಿಸಲಾಗುತ್ತಿದೆಯೇ? ಎಂಬುದು. ಉದ್ಯೋಗ ಸೃಷ್ಟಿಯ ಕಡೆಗೆ ನಮಗೆ ನಿರ್ದಿಷ್ಟ ಒಲವು ಇದೆಯೇ? ನಮ್ಮ ದೇಶದಲ್ಲಿ ಹೇರಳವಾಗಿ ಲಭ್ಯವಿರುವ ಮನುಷ್ಯ ಶಕ್ತಿ ಮತ್ತು ಶ್ರಮಶಕ್ತಿ ಬಳಸಿ, ಅಭಿವೃದ್ಧಿ ಪರವಾದ ಒಂದು ಸಮಗ್ರ ಉತ್ಪಾದನೆಯ ಕಡೆಗೆ ನಮ್ಮ ದೃಷ್ಟಿಯಿದೆಯೇ? ನಾವು ಇಂದು ಅನುಸರಿಸುವ ಮಾರ್ಗ ಈ ಪ್ರಶ್ನೆಗಳಿಂದ ಆರಂಭಿಸಬೇಕಿದೆ. ಆದರೆ, ಇದನ್ನು ಮಾಡಲಾಗುತ್ತಿಲ್ಲ, ಯಾಕೆ? ಕಾರಣ, ಸ್ಪಷ್ಟವಿದೆ, ನಾವು ಅನುಸರಿಸುತ್ತಿರುವ ವಿಧಿ- ವಿಧಾನಗಳು ಯಾವುದೋ ಗತಕಾಲದ ಪಳಿಯುಳಿಕೆಗಳಂತೆ ಇದ್ದು, ಕಾಲ ಬಾಹಿರವಾಗಿವೆ.ಸ್ವರೂಪತಃ ಅವು ಹಿಂದಿನವುಗಳಾಗಿವೆ. ಈ ಕುರಿತು ನೀವು ಏನೇ ಹೇಳಬಹುದು. ಆದರೆ, ಈ ವಸ್ತು ಸ್ಥಿತಿಯನ್ನು ಅಲ್ಲಗಳೆಯುವಂತಿಲ್ಲ. ಆದ್ದರಿಂದಲೇ ಈ ವರೆಗೆ ನಮಗೆ ಈ ವಿಷಯದಲ್ಲಿ ಏನೂ ಮಾಡಲು ಸಾಧ್ಯವಾಗಿಲ್ಲ.

ಈವತ್ತಿಗೂ ಒಂದು ಲೆಕ್ಕಾಚಾರದ ಪ್ರಕಾರ, ಸುಮಾರು 21 ಕೋಟಿ ಎಕರೆ ಹೆಚ್ಚುವರಿ ಭೂಮಿ ಲಭ್ಯವಿದೆ. ಅದನ್ನು ಪಡೆದು ಕೃಷಿ ಕಾರ್ಮಿಕರು ಹಾಗೂ ಬಡ ಕೃಷಿಕರ ಮಧ್ಯೆ, ವಿಶೇಷವಾಗಿ, ಹರಿಜನ ಮತ್ತು ಆದಿವಾಸಿಗಳ ಮಧ್ಯೆ ಹಂಚಬಹುದು. ನಮ್ಮ ಕೃಷಿ ಕ್ಷೇತ್ರವನ್ನು ಅಮೂಲಾಗ್ರವಾಗಿ ಪುನರ್‌ಸಂಘಟಿಸಿ ಮೂಲಭೂತವಾದ ಭೂಸುಧಾರಣೆಗಳನ್ನು ತಂದು, ವಿವಿಧ ಜನರಿಗೆ ಇರುವ ಬಹು ವಿವಿಧ ವಿನಾಯಿತಿಗಳನ್ನು ನಿರ್ನಾಮಗೊಳಿಸಿ, ಭೂಮಿತಿ ಕಾಯ್ದೆಯ ಅಸ್ತಿತ್ವದಲ್ಲಿರುವ ಜಾರಿಗೊಳಿಸುವ ಪ್ರಕ್ರಿಯೆಗೆ ಎಲ್ಲಾ ಸಂಗತಿಗಳನ್ನು ನಿರಾತಂಕಗೊಳಿಸಿದರೆ, ಈ ಮೇಲಿನ ಕೆಲಸ ಬಹು ಸುಲಭ ಸಾಧ್ಯವಾಗುವುದು. ಹಾಳುಬಿದ್ದ ಭೂಮಿಯನ್ನು ಉಳುಮೆಗೆ ತರುವ ಮೂಲಕ, ಈವರೆಗೆ ಕೃಷಿಯ ಮಿತಿಯಲ್ಲಿ ಬಾರದೇ ಇದ್ದ ಭೂಮಿಯ ಮೇಲೆ ಉಳುಮೆಯನ್ನು ಆರಂಭಿಸುವ ಮೂಲಕ, ನಾವು 21 ಕೋಟಿ ಎಕರೆ ಭೂಮಿಯನ್ನು ಪಡೆದುಕೊಂಡು ರೈತಾಪಿ ಜನತೆಗೆ ಹಂಚಬೇಕು. ಆಗ ನಮ್ಮ ಅಪಾರ ಸಂಪನ್ಮೂಲಗಳನ್ನು ಸರಿಯಾಗಿ ನಿರ್ಮಿಸಿ, ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸುವ ದಾರಿಯಲ್ಲಿ ಇಡಬೇಕಾದ ಹೆಜ್ಜೆಯ ಕುರಿತು ಸರಿಯಾದ ತಿಳುವಳಿಕೆ ಪಡೆಯಬಹುದು. ನಮ್ಮ ಇಂದಿನ ಅರ್ಥಿಕ ವ್ಯವಸ್ಥೆಯಲ್ಲಿ ಪ್ರತಿಯೊಂದು ಗ್ರಾಮದ ನಿರುದ್ಯೋಗ ಪರಿಹರಿಸುವುದೆಂದರೆ, ಎಲ್ಲಕ್ಕಿಂತಲೂ ಮುಂಚೆ ಅಲ್ಲಿಯ ಭೂ ಹಿಡುವಳಿಗಳ ಪುನರ್

ಸಂಘಟನೆ ಮಾಡುವುದೆಂದೇ ಅರ್ಥ . ಭೂ ಸುಧಾರಣೆಯ ಮೂಲಕ ಉಳುವವನಿಗೆ ಭೂಮಿ ದಕ್ಕಬೇಕು. ಕೃಷಿ ಕಾರ್ಮಿಕರು ಮತ್ತು ಬಡ ಕೃಷಿಕರು ವರ್ಷದ ಹೆಚ್ಚಿನ ಭಾಗ ಉದ್ಯೋಗವಿಲ್ಲದೇ ತಡಕಾಗುವುದು, ಅವರಿಗೆ ಕಿಂಚಿತ್ತೂ ಭೂಮಿ ಸಿಕ್ಕರೂ ಅವರ ನಿರುದ್ಯೋಗದ ಸಮಸ್ಯೆ ತುಸು ಮಟ್ಟಿಗಾದರೂ ಬಗೆಹರಿದೀತು. ಭೂ ಒಡೆತನ ಪಡೆಯುವುದು ಎಂದರೆ, ಉತ್ಪಾದನೆಯನ್ನು ಹಸ್ತಗತ ಮಾಡಿಕೊಂಡಂತೆ, ಇಂತಹ ಕ್ರಮ ಅನುಸರಿಸುವ ಮೂಲಕ ನಿರುದ್ಯೋಗ ಸಮಸ್ಯೆಯ ವಿರುದ್ಧ ನಾವು ಹೂಡುವ ಹೋರಾಟದಲ್ಲಿ ನಿಜವಾಗಿಯೂ ಒಂದು ಹೊಸ ಮಾರ್ಗ ಹುಡುಕಿದಂತಾಗುತ್ತದೆ: ಮತ್ತು ಇದಕ್ಕಿಂತಲೂ ಉತ್ತಮ ಆರಂಭ ಬೇರೊಂದಿಲ್ಲ, ಆದರೆ, ನಾವು ಇದಾವುದನ್ನು ಮಾಡುತ್ತಿಲ್ಲ.

ಕೃಷಿ ಕ್ಷೇತ್ರಕ್ಕೆ ನೀವೇನು ಮಾಡುತ್ತೀರಿ ಎಂಬುದು ನಿಮ್ಮ ಪ್ರಾಮಾಣಿಕತೆಯ ಪರೀಕ್ಷೆಯು ನಿಕಷ್ಟವಾಗಿದೆ. ಭೂಮಿ ಕೇಂದ್ರೀಕರಣವನ್ನು ತೊಲಗಿಸಿ, ಭೂ ಸುಧಾರಣೆಯ ಮೂಲಕ ಭೂಮಿಯ ಪುನರ್ ಹಂಚಿಕೆಯನ್ನು ಕೈಗೊಳ್ಳದ ಹೊರತು ನಾವು ನಿರುದ್ಯೋಗ ಸಮಸ್ಯೆಯ ಪರಿಹಾರದ ಬಗ್ಗೆ ಮಾತನಾಡುವಂತಿಲ್ಲ, ಯಾಕೆಂದರೆ, ಮೂಲ ಸಮಸ್ಯೆ ಬದಿಗಿಟ್ಟು ಎಲ್ಲೋ ಪರಿಹಾರ ಹುಡುಕತೊಡಗಿದರೆ, ಅದು ಹುತ್ತವ ಬಡಿದಂತೆಯೇ ಸರಿ ತಿರುಗದಲ್ಲಿಯೇ ತಿರುಗುತ್ತೇವೆಯೇ ವಿನ: ಒಂದಡಿಯೂ ಮುಂದೆ ಹೋಗಲಾರೆವು. ಗ್ರಾಮಾಂತರ ಪ್ರದೇಶದಲ್ಲಿ ಕೃಷಿ ಅಧಾರಿತ ಉದ್ದಿಮೆಗಳನ್ನು ಸ್ಥಾಪಿಸುವುದರ ಮಹತ್ವವನ್ನು ನಾನಿಲ್ಲಿ ಎತ್ತಿ ಹೇಳಬಯಸುತ್ತೇನೆ. ಗ್ರಾಮಾಂತರ ಪ್ರದೇಶದಲ್ಲಿ ಅರೆ- ಗ್ರಾಮೀಣ ಭಾಗದಲ್ಲಿ ದೇಶದ ಉದ್ದಗಲಕ್ಕೂ ಹೊಸ ಯೋಜನೆಗಳನ್ನು ಆರಂಭಿಸುವ ಕುರಿತು ಕೃಷಿ ಆಧಾರಿತ ಉದ್ದಿಮೆಗಳನ್ನು ಸ್ಥಾಪಿಸುವ ಕುರಿತು, ನಾವು ಗಂಭೀರವಾಗಿ ಚಿಂತಿಸದ ಹೊರತು, ಉದ್ಯೋಗದ ಅವಕಾಶಗಳನ್ನು ಸೃಷ್ಟಿಸುವುದು ಸಾಧ್ಯವಿಲ್ಲ, ನಾವು ಈ ದಾರಿಯಲ್ಲಿ ಗಂಭೀರ ಹೆಜ್ಜೆ ಇಡುವ ಮೂಲಕ ಮಾತ್ರ ನಿರುದ್ಯೋಗ ಸಮಸ್ಯೆಯ ಪರಿಹಾರಕ್ಕೆ ಅವಶ್ಯವಿರುವ ಪೂರಕ ಕ್ರಮಗಳನ್ನು ತೆಗೆದುಕೊಳ್ಳಲು ಸಾಧ್ಯವಿದೆ. ಜೊತೆಗೆ ನಾವು ಸಣ್ಣ ಪ್ರಮಾಣದ ನೀರಾವರಿ ಯೋಜನೆಗಳನ್ನು ಕೈಗೆತ್ತಿಕೊಳ್ಳಬೇಕು. ಕಟ್ಟಡಗಳ ನಿರ್ಮಾಣ, ಇದರಲ್ಲಿ ವಿಶೇಷವಾಗಿ, ಗ್ರಾಮೀಣ ಪ್ರದೇಶಗಳಲ್ಲಿ ಮನೆಗಳ ನಿರ್ಮಾಣ ಕಾರ್ಯ ಪ್ರಾರಂಭಿಸುವ ಮೂಲಕ ಅಲ್ಲಿಯ ಅನೇಕ ಜನತೆಗೆ ಉದ್ಯೋಗದ ಅವಕಾಶ ಕಲ್ಪಿಸಿಕೊಡಬಹುದು. ಆದರೆ, ನಮ್ಮ ಅವಶ್ಯಕತೆಗೆ ವ್ಯತಿರಿಕ್ತವಾಗಿ, ಇಂದಿನ ಪ್ರವೃತ್ತಿ ಭಾರಿ ಬೃಹತ್ ಗಾತ್ರದ ನೀರಾವರಿ ಯೋಜನೆಗಳನ್ನು ಹಾಕಿಕೊಳ್ಳುವುದರಲ್ಲಿಯೇ ತೃಪ್ತಿ ಪಡುತ್ತದೆ. ಬೃಹತ್ ಮತ್ತು ಮಧ್ಯಮ ಗಾತ್ರದ ಯೋಜನೆಗಳೇ ನಮ್ಮ ಮನಸ್ಸನ್ನು ಆವರಿಸಿಕೊಂಡಿವೆ. ಇವುಗಳ ಅವಶ್ಯಕತೆ ಇದೆ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ, ಸದ್ಯದ ಸ್ಥಿತಿಯಲ್ಲಿ ನಮ್ಮಂತಹ ದೇಶದಲ್ಲಿ ಮನುಷ್ಯ ಶಕ್ತಿ ಬಳಕೆಯಾಗದೆ ಹಾಳಾಗುತ್ತಿದೆ. ಮಾನವ ಸಮೂಹ ಅಪಾರ ಸಂಪನ್ಮೂಲವಾಗಿರುವಲ್ಲಿ ಅದನ್ನು ಸಾಧ್ಯವಿದ್ದ ಹೆಚ್ಚಿನ ಮಟ್ಟಿಗೆ ಬಳಸಬೇಕಾದದ್ದು ವಿವೇಕದ ಹೆಜ್ಜೆ. ಇಂದು ಅಪಾರವಾಗಿ ಲಭ್ಯವಿರುವ ಶ್ರಮಶಕ್ತಿಯನ್ನು

ಬಳಸುವ ಮೂಲಕ ನಾವು ಒಂದೆಡೆ ಈ ಯೋಜನೆಗಳ ವೆಚ್ಚವನ್ನು ತಗ್ಗಿಸಬಹುದು, ಇನ್ನೊಂದೆಡೆ, ವಿದೇಶಿ ವಿನಿಮಯವನ್ನು ಉಳಿಸಬಹುದು, ಇದೆಲ್ಲಕ್ಕೂ ಹೆಚ್ಚಾಗಿ ಅಸಂಖ್ಯಾತ ಜನರಿಗೆ ಉದ್ಯೋಗ ಕಲ್ಪಿಸಿಕೊಡಬಹುದು.

ನಾನು ಚೀನಾಕ್ಕೆ ಎರಡು ಸಲ ಭೇಟಿ ಕೊಟ್ಟಿದ್ದೇನೆ, ನಾನು ಅಲ್ಲಿ ಕಂಡಿದ್ದೇನೆಂದರೆ, ಅವರು ದೊಡ್ಡ ದೊಡ್ಡ ನೀರಾವರಿ ಯೋಜನೆಯ ಬದಲಾಗಿ, ಇಡೀ ಚೀನಾದಾದ್ಯಂತ ಅಲ್ಲಲ್ಲಿ, ಸಣ್ಣ- ಪುಟ್ಟ ನೀರಾವರಿ ಯೋಜನೆಗಳನ್ನು ಕೈಗೆತ್ತಿಕೊಂಡಿದ್ದಾರೆ. ಆದ್ದರಿಂದ ಅಲ್ಲಿಯ ನೀರಾವರಿಯ ಸಮಸ್ಯೆ ಬಗೆಹರಿದದ್ದಲ್ಲದೆ, ಅಸಂಖ್ಯಾತ ಜನರ, ವಿಶೇಷವಾಗಿ ಬಡ ರೈತರ, ಕೃಷಿ ಕಾರ್ಮಿಕರ, ನಿರುದ್ಯೋಗದ ಸಮಸ್ಯೆ ಪರಿಹಾರವಾಗಿದೆ. ಆದರೆ, ನಾವು ಇಲ್ಲಿ ಅಂತಹ ಮಾರ್ಗ ಅನುಸರಿಸುತ್ತಿಲ್ಲ: ಅದಕ್ಕೆ ವ್ಯತಿರಿಕ್ತವಾಗಿ, ಭಾರಿ ಬಂಡವಾಳದೊಂದಿಗೆ ಆರಂಭಿಸಲಾಗಿರುವ ಯೋಜನೆಗಳನ್ನು ಹಾಕಿಕೊಂಡಿದ್ದೇವೆ. ಇದರಿಂದ, ಆಹಾರದ ಸಮಸ್ಯೆಯಾಗಲಿ, ನಿರುದ್ಯೋಗದ ಸಮಸ್ಯೆಯಾಗಲಿ, ಬಗೆಹರಿಯುವುದಿಲ್ಲ. ನಮ್ಮ ಗ್ರಾಮೀಣ ಆರ್ಥಿಕ ವ್ಯವಸ್ಥೆಯ ಸಮಸ್ಯೆಗಳ ಜೀವ- ಜೀವಾಳವೆಂದರೆ, ಆಹಾರ ಉತ್ಪಾದನೆಯ ದೃಷ್ಟಿಯಿಂದಾಗಲಿ, ಅಥವಾ ಉದ್ಯೋಗವನ್ನು ಒದಗಿಸುವ ನಿಟ್ಟಿನಲ್ಲಾಗಲಿ, ಭೂಮಿಯನ್ನು ಮರು ಹಂಚಿಕೆ ಮಾಡಿ, ಅದು ಉಳುವವನಿಗೆ ದೊರಕುವಂತೆ ಮಾಡುವುದು. ಸಣ್ಣ ಸಣ್ಣ ನೀರಾವರಿ ಯೋಜನೆ ಕೈಗೆತ್ತಿಕೊಂಡು ಉದ್ಯೋಗದ ಅವಕಾಶ ಸೃಷ್ಟಿಸುವುದು, ಗೃಹ ನಿರ್ಮಾಣದ ಯೋಜನೆಗಳು, ಕೃಷಿ ಅಧಾರಿತ ಉದ್ದಿಮೆಗಳು, ಇತ್ಯಾದಿಗಳನ್ನು ಪ್ರಾರಂಭಿಸಿ, ಗ್ರಾಮಿಾಣ ಆರ್ಥಿಕತೆಗೆ ಚಾಲನೆ ಕೊಡುವುದು. ಅಂದರೆ, ನಮ್ಮ ಗ್ರಾಮಿಾಣ ಆರ್ಥಿಕ ವ್ಯವಸ್ಥೆಯ ವಿಶಾಲ ಕ್ಷೇತ್ರವನ್ನು ಒಳಗೊಂಡಂತೆ ಸರ್ವರಿಗೂ ಉದ್ಯೋಗ ದೊರಕಿಸುವ ಒಂದು ಸಮಗ್ರ ಹೋರಾಟದ ದಾರಿ ನಾವು ತುಳಿಯಬೇಕಿದೆ.

ನಾನು ಈಗ ಔದ್ಯೋಗಿಕ ರಂಗದ ಪ್ರಶ್ನೆಗೆ ಬರುತ್ತೇನೆ, ನಮ್ಮ ಔದ್ಯೋಗಿಕ ರಂಗ ಏಕಸ್ವಾಮ್ಯದಿಂದ ಕೂಡಿದೆ ; ಬಂಡವಾಳಶಾಹಿ ಸ್ವರೂಪದ್ದಾಗಿದೆ. ನಿರುದ್ಯೋಗವು ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ " ಖಾಸಾಕೂಸು" ; ಸಮಾಜದಲ್ಲಿ ಯಾವಾಗಲೂ ನಿರುದ್ಯೋಗದ ಒಂದು ಪಡೆ ಇರಬೇಕೆಂಬುದು ಬಂಡವಾಳಶಾಹಿಗಳ ಅಂತರಾಳದ ಬಯಕೆಯಾಗಿದೆ. ಯಾಕೆಂದರೆ ನಿರುದ್ಯೋಗ ಸಮಸ್ಯೆ ಉಲ್ಬಣಗೊಂಡಂತೆಲ್ಲ ಕಾರ್ಮಿಕ ಮತ್ತು ಟ್ರೇಡ್ ಯೂನಿಯನ್ ಆಂದೋಲನದ ಮುಂಖಂಡರ ಜೊತೆ ತಮ್ಮ ಲಾಭದಾಯಕ ಚೌಕಾಸಿ ನಡೆಸಲು ಅವರಿಗೆ ಸಾಧ್ಯವಾಗುತ್ತದೆ. ಮಾರುಕಟ್ಟೆಯಲ್ಲಿ ನಿರುದ್ಯೋಗದ ಒಂದು ದೊಡ್ಡ ಪಡೆ ಅಸ್ತಿತ್ವದಲ್ಲಿರುವವರೆಗೆ ಬಂಡವಾಳಶಾಹಿಗಳ ಸ್ಥಾನ ಸುಭದ್ರವಾಗಿರುತ್ತದೆ. ಆ ಮೂಲಕ ಅವರು ತಮ್ಮ ಕಾರ್ಮಿಕರನ್ನು ಯಶಸ್ವಿಯಾಗಿ ಬೆದರಿಸುವ, ಯೂನಿಯನ್ ಚಟುವಟಿಕೆಯಲ್ಲಿ ತೊಡಗುವವರಿಗೆ ಅಷ್ಟೇ ಯಶಸ್ವಿಯಾಗಿ ಹೆದರಿಸುವ, ಸಾಮರ್ಥ್ಯ

ಪಡೆದಿರುತ್ತಾರೆ. ಆದ್ದರಿಂದ , ಉತ್ಪಾದನೆಯಲ್ಲಿ ಗರಿಷ್ಠ ಮಟ್ಟದ ಲಾಭ ಮಾಡುವುದೇ ಮೂಲ ಭೂತ ಉದ್ದೇಶವಾಗಿರುವವರೆಗೆ ಅವರು ಕಾರ್ಮಿಕರ ತೀವ್ರವೂ ವ್ಯಾಪಕವೂ ಆದ ಶೋಷಣೆಗೆ ದಾರಿ ಹುಡುಕುವುದರಲ್ಲಿಯೇ ನಿರತರಾಗಿರುತ್ತಾರೆ. ಜನರನ್ನು ಹೀಗೆ ಶೋಷಿಸುವ ಮೂಲಕ ತಮ್ಮ ಲಾಭ ವರ್ಧಿಸಿಕೊಳ್ಳಬಹುದು- ಎಂಬುದೇ ಅವರ ಲೆಕ್ಕಾಚಾರವಾಗಿರುವುದರಿಂದ ಅವರ ಪ್ರತಿಯೊಂದು ಪ್ರಕ್ರಿಯೆಯೂ ನಿರುದ್ಯೋಗವನ್ನು ಸೃಷ್ಟಿಸುತ್ತದೆ. ನಮ್ಮ ದೇಶದಲ್ಲಿಂದು ಆಗುತ್ತಿರುವುದು ಇದೇ, ಅಕ್ಕಿಯ ಮೇಲೆ ಮನಸ್ಸು, ಅಕ್ಕನ ಮೇಲೆ ಪ್ರೀತಿ ಎಂಬಂತೆ, ನೀವು ಎರಡನ್ನು ಒಟ್ಟಿಗೆ ಸಾಧಿಸಲಾರಿರಿ. ಒಂದೆಡೆ, ಮಿಶ್ರ ಆರ್ಥಿಕ ವ್ಯವಸ್ಥೆಯ ನೆಪದಲ್ಲಿ ಬಂಡವಾಳಶಾಹಿ ವರ್ಗಕ್ಕೆ, ಏಕಸ್ವಾಮ್ಯ ಪ್ರಭುಗಳಿಗೆ, ಮನ್ನಣೆಯ ಮಣೆ ಹಾಕಿ, ಅವರು ನಮ್ಮ ಇಡೀ ಆರ್ಥಿಕ ವ್ಯವಸ್ಥೆಯನ್ನು ವ್ಯಕ್ತವಾಗಿಯೋ, ಅವ್ಯಕ್ತವಾಗಿಯೋ, ನಿರ್ದೇಶಿಸುವುದಕ್ಕೆ , ನಿಯಂತ್ರಿಸುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟು, ಇನ್ನೊಂದಡೆ, ಅದೇ ವೇಳೆಗೆ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸುತ್ತೇವೆಂದು ಹೇಳುವುದು ಸಾಧ್ಯವಿಲ್ಲ. ಇಡೀ ಆರ್ಥಿಕ ವ್ಯವಸ್ಥೆ ಏಕಸ್ವಾಮ್ಯ ಪ್ರಭುಗಳ ಪ್ರಭಾವದ ಅಡಿಯಲ್ಲಿ ನುಜ್ಜು-ಗುಜ್ಜಾಗಿದೆ. ಅವರ ಕ್ರಿಯೆ ಪ್ರಕ್ರಿಯೆಗಳಿಂದಾಗಿ , ಇ[illegible] ವ್ಯವಸ್ಥೆ [illegible]ಪಗೊಂಡಿದೆ. ಇಂತಹ ಸ್ಥಿತಿಯಲ್ಲಿ ನಿರುದ್ಯೋಗ ಸಮಸ್ಯೆಯ ಬಗ್ಗೆ ಏಕಸ್ವಾಮ್ಯ ಬಂಡವಾಳಶಾಹಿ ಪ್ರವೃತ್ತಿಗಳು ಎಷ್ಟು ನಿರ್ಲಕ್ಷ ತೋರಿಸುತ್ತಿವೆ, ಎಷ್ಟು ಅಸಡ್ಡೆಯಿಂದ ನೋಡುತ್ತಿದ್ದಾರೆ, ಎಷ್ಟು ಉದಾಸೀನತೆ ಅವರಲ್ಲಿ ಮನೆ ಮಾಡಿಕೊಂಡಿದೆ, ಎಂಬುದು ನಮಗೆ ಚೆನ್ನಾಗಿ ಗೊತ್ತು. ಈವತ್ತಿಗೂ ಪಶ್ಚಿಮ ಬಂಗಾಲದಲ್ಲಿ ಅನೇಕ ಬಂಡವಾಳಗಾರರು ತಮ್ಮ ಫ್ಯಾಕ್ಟರಿಗಳನ್ನು ಮುಚ್ಚುತ್ತಿದ್ದಾರೆ. ಅದಕ್ಕೆ ಕಾರಣವೋ, ಕಾರ್ಮಿಕರ ತೊಂದರೆ; ಇದೊಂದು ದೊಡ್ಡ ನೆಪ. ಇರಬಹುದು; ಅಲ್ಲಿ ಇಲ್ಲಿ ಒಂದಿಷ್ಟು ಕಾರ್ಮಿಕರ ತೊಂದರೆಯೂ ಇರಬಹುದು. ಆದರೆ, ಎಲ್ಲ ಫ್ಯಾಕ್ಟರಿಗಳನ್ನು ಸಾರಾಸಗಟಾಗಿ ಮುಚ್ಚಲಾಗುತ್ತದೆ. ಅಷ್ಟೇಯಲ್ಲ, ದೊಡ್ಡ-ದೊಡ್ಡ ಏಕಸ್ವಾಮ್ಯ ಶಕ್ತಿಗಳು ಸಣ್ಣ ಫ್ಯಾಕ್ಟರಿ ನಡೆಯದಂತೆ ನೋಡಿಕೊಳ್ಳುತ್ತಿವೆ. ಯಾಕೆಂದರೆ, ಸಣ್ಣ ಹಾಗೂ ದೊಡ್ಡ ಫ್ಯಾಕ್ಟರಿ ನಡುವೆ ಸ್ಪರ್ಧೆ ಯಾವಾಗಲೂ ಇರುವಂಥದ್ದೇ. ಆದರೆ, ದೊಡ್ಡ ಫ್ಯಾಕ್ಟರಿಗಳು ಸಣ್ಣವುಗಳ ಕುತ್ತಿಗೆ ಹಿಸುಕಿ ನಿರ್ನಾಮ ಮಾಡುವ ಹವಣಿಕೆಯಲ್ಲಿರುತ್ತವೆ. ಹೀಗೆ, ಮಾಡುವ ಮೂಲಕ ಮಾತ್ರ ದೊಡ್ಡ ಫ್ಯಾಕ್ಟರಿಗಳು ಇನ್ನು ದೊಡ್ಡದಾಗಿ ಬೆಳೆಯುತ್ತವೆ. ಅದೇ ದಾರಿಯಲ್ಲಿ ದಾಪುಗಾಲು ಇಡುತ್ತಾ ಅನತಿ ಕಾಲದಲ್ಲಿಯೇ ಅವು ಏಕಸ್ವಾಮ್ಯ ಪಡೆದು ಅಟ್ಟಹಾಸಗೈಯ್ಯುತ್ತವೆ. ಸಂಯುಕ್ತ ಅಮೇರಿಕಾ ಮತ್ತು ಇತರ ಮುಂದುವರೆದ ಬಂಡವಾಳಶಾಹಿ ರಾಷ್ಟ್ರದಂತೆಯೇ ನಮ್ಮ ದೇಶದಲ್ಲಿಯೂ ಈ ಪ್ರಕ್ರಿಯೆ ಆರಂಭವಾಗಿದೆ. ಏಕಸ್ವಾಮ್ಯ ಬೃಹತ್ ಶಕ್ತಿಗಳ ಕಾರ್ಯಾಚರಣೆಯ ಕಾಲಿಗೆ ಸಿಕ್ಕ ಸಣ್ಣ ಪ್ರಮಾಣದ ಉದ್ದಿಮೆಗಳು ಅಳಿಸಿಹೋಗುತ್ತವೆ. ಭಯಂಕರವಾದ ಅಸಮಾನ ಸ್ಪರ್ಧೆಯಲ್ಲಿ ದುರ್ಬಲರು ನಶಿಸಿ ಹೋಗುವುದು ಸಹಜವೆ; ಇದರಿಂದ, ಉದ್ದಿಮೆ ಕ್ಷೇತ್ರದಲ್ಲಿ ಏಕಸ್ವಾಮ್ಯ ದೈತ್ಯಶಕ್ತಿಗಳು ತಾನೇ ತಾನಾಗಿ ಮೆರೆಯಲು ಸಾಧ್ಯವಾಗುತ್ತದೆ. ನಾವು ಇದನ್ನು ತಡೆಗಟ್ಟಬಹುದಾಗಿದೆ, ತಡೆಗಟ್ಟಬೇಕಾಗಿದೆ . ಕೇವಲ

ಬೋಧೆ, ಉಪದೇಶಗಳ ಮೂಲಕ ನಾವು ಇದನ್ನು ಸಾಧಿಸಲು ಸಾಧ್ಯವಿಲ್ಲ. ಆದಕ್ಕಾಗಿ ನಾವು ಒಂದೆಡೆ ಏಕಸ್ವಾಮ್ಯ ವಿರೋಧಿ ಕ್ರಮಗಳನ್ನು ಕೈಗೊಳ್ಳಬೇಕು; ಮತ್ತು ಕ್ರಮಗಳು ಅತ್ಯಂತ ಬಲಿಷ್ಠವು, ಪರಿಣಾಮಕಾರಿಯೂ ಆಗಿರಬೇಕು . ಇನ್ನೊಂದೆಡೆ, ಸಾರ್ವಜನಿಕ ಕ್ಷೇತ್ರವನ್ನು ವಿಸ್ತರಿಸಬೇಕು. ಇದಕ್ಕಾಗಿ ನಮಗೆ ಒಂದು ಸ್ಪಷ್ಟ ಧೋರಣೆ ಅವಶ್ಯವಿದೆ. ಅದು ಪ್ರಜಾತಾಂತ್ರಿಕ ನೆಲೆಯ ಉದ್ಯೋಗ ಪರವಾದ ಧೋರಣೆಯಾಗಿರಬೇಕು. ಕಾನೂನು ಬಾಹಿರವಾಗಿ ಫ್ಯಾಕ್ಟರಿ ಮುಚ್ಚುವುದಾಗಲಿ, ಕಾರ್ಮಿಕರನ್ನು ವಜಾ ಮಾಡುವುದಾಗಲಿ, ಅವರ ಸಂಖ್ಯೆ ತಗ್ಗಿಸುವುದಾಗಲಿ, ದಂಡನಾರ್ಹವೆಂದು ಘೋಷಿಸಿ, ತೀವ್ರ ಕ್ರಮ ಕೈಗೊಳ್ಳಬೇಕು. ಇಂತಹ ದಂಡನಾರ್ಹ ಕ್ರಮಗಳ ಮೂಲಕ ಬಂಡವಾಳಗಾರರು ಏಕಸ್ವಾಮ್ಯ ವರ್ಗದ ಪ್ರಭುಗಳು ಇನ್ನೂ ಹೆಚ್ಚಿನ ನಿರುದ್ಯೋಗ ಸೃಷ್ಟಿಸುವುದನ್ನು ತಡೆಗಟ್ಟುವ ದಾರಿಯಲ್ಲಿ ಹೆಜ್ಜೆಯಿಡಬೇಕು.

ಮಾನ್ಯ ಉಪಾಧ್ಯಕ್ಷರೇ, ಇಲ್ಲಿ ಭಗತ್ ಅವರು ಕುಳಿತಿದ್ದಾರೆ, ಜೊತೆಗೆ ಆಳುವ ಪಕ್ಷದ ಸದಸ್ಯರು, ಮಾಜಿ ಕೇಂದ್ರ ಮಂತ್ರಿಗಳಾದ ಶ್ರೀ ಅಶೋಕ ಸೇನೆ ಅವರೂ ಕುಳಿತಿದ್ದಾರೆ. ಶ್ರೀ ಅಶೋಕ ಸೇನೆ ಅವರು ತಮ್ಮ ಬಾಸುಮತಿ ಫ್ಯಾಕ್ಟರಿಯನ್ನು ಮುಚ್ಚಿ 550 ಜನ ಕಾರ್ಮಿಕರನ್ನು ಬೀದಿಗೆ ತಳ್ಳಿದ್ದಾರೆ . ಈ ಮುಚ್ಚುವಿಕೆ ಕಾನೂನು ಬಾಹಿರವಾಗಿಲ್ಲವೇ ಎಂದು ಕೇಳ ಬಯಸುತ್ತೇನೆ ‘ಇದನ್ನು ಅವರು ಅಲ್ಲಗಳೆಯುವರೇ; ಬಾಸುಮತಿ ಉದ್ದಿಮೆ ಮುಚ್ಚಿರುವುದು ಕಾನೂನುಬಾಹಿರವಾಗಿದೆಯೆಂಬುದು ಸುಸ್ಪಷ್ಟ. ಆದರೂ ಅವರ ಮೇಲೆ ಯಾರೂ ಕ್ರಮ ಕೈಗೊಂಡಿಲ್ಲ. ಯಾಕೆ ಗೊತ್ತೇ? ಶ್ರೀ ಅಶೋಕ ಸೇನ್ ಅವರು ಆಳುವ ಪಕ್ಷದವರು ಇಂತಹ ಸಂದರ್ಭದಲ್ಲಿ ಶ್ರೀ ಧಾರಿಯೂ ಅವರ ಹೇಳಿಕೆಗಳನ್ನು ಯಾರು ಗಂಭೀರವಾಗಿ ತೆಗೆದುಕೊಳ್ಳುತ್ತಾರೆ? ಶ್ರೀ ಅಶೋಕ ಸೇನ್ ಅವರು ಶ್ರೀ ಧಾರಿಯಾ ಅವರ ಗೆಳೆಯರಾಗಿರುವುದರ ಜೊತೆಗೆ ಆಳುವ ಪಕ್ಷದ ಸದಸ್ಯರು ಆಗಿದ್ದಾರೆ, ಮಾಜಿ ಮಂತ್ರಿಗಳೂ ಆಗಿರುವ ಅವರು ಸದ್ಯದ ಸರ್ಕಾರಕ್ಕೆ ಇನ್ನೂ ನಿಷ್ಠರಾಗಿಯೇ ಇದ್ದಾರೆ. ಇಂತಹ ನೆಲೆ, ಹಿನ್ನೆಲೆಯಿರುವವರು ಇಂದು ಕಾನೂನು ಬಾಹಿರವಾಗಿ ತಮ್ಮ ಬಾಸುಮತಿ ಉದ್ದಿಮೆ ಮುಚ್ಚುವ ಮೂಲಕ ನಮ್ಮ ಮೂಗಿನ ಅಡಿಯಲ್ಲಿಯೇ ಕಲ್ಕತ್ತಾದ ಬೀದಿಗಳಲ್ಲಿ ನಿರುದ್ಯೋಗ ಸೃಷ್ಟಿಸುತ್ತಿದ್ದಾರೆ.

ಆದ್ದರಿಂದ, ನಮಗೆ ಇಂದು ಬೇಕಾಗಿರುವುದು ಏನು? ಮಿಶ್ರ ಆರ್ಥಿಕ ವ್ಯವಸ್ಥೆಯ ಪರಿಕಲ್ಪನೆಯೇ ಒಂದು ಖೋಟಾ ಕಲ್ಪನೆಯಾಗಿದೆ. ಅದೊಂದು ಮಹಾ ಮೋಸ; ನೀವು ಏಕ ಕಾಲದಲ್ಲಿಯೇ ಸುಶೀಲೆ ಮತ್ತು ಸೂಳೆಯಾಗಿರಲು ಸಾಧ್ಯವಿಲ್ಲ. ನೀವು ಎರಡೂ ಆಗಿರಲಾರಿರಿ. ನೀವು ಗರತಿ ಗಂಗಮ್ಮಳಾಗಿದ್ದೂ ವೇಶ್ಯಾ ಶಿಖಾಮಣಿಯಾಗಲು ಸಾಧ್ಯವೇ ? ಇಲ್ಲ; ಅದು ಸಾಧ್ಯವಿಲ್ಲ, ಇಂದು ಮಿಶ್ರ ಆರ್ಥಿಕ ವ್ಯವಸ್ಥೆಯ ಪರಿಕಲ್ಪನೆ ಒಂದು ಕುಚೇಷ್ಟೆಯ ಪರಿಕಲ್ಪನೆಯಾಗಿದೆ. ನಮ್ಮ ಕೈಗಾರಿಕಾ ಮಂತ್ರಿಗಳಾಗಿರುವ ಶ್ರೀ ದಿನೇಶ್ ಸಿಂಗರು ಮಿಶ್ರ

ಆರ್ಥಿಕ ವ್ಯವಸ್ಥೆಯ ಸಿದ್ಧಾಂತವನ್ನು ಜನಪ್ರಿಯಗೊಳಿಸಲು ಪ್ರಯತ್ನಿಸುತ್ತಿದ್ದಾರೆ. ಇದಕ್ಕಾಗಿ ಅವರು ಅನುಸರಿಸುತ್ತಿರುವ ವಿಧಾನದಲ್ಲಿ ಈ ಮಿಶ್ರಣ ಹೆಚ್ಚು ಹೆಚ್ಚಾಗಿ ಮಾಲೀಕರ. ಏಕಸ್ವಾಮ್ಯ ಶಕ್ತಿಗಳ ಪರವಾಗಿದ್ದು, ಕಾರ್ಮಿಕರನ್ನು ಕಂಗಾಲು ಮಾಡುತ್ತಿದೆ. ಆದ್ದರಿಂದ , ನಾವು ಇಂದು ಅದರ ಬಗ್ಗೆ ಮಾತಾಡುವುದೇ ಬೇಡ. ಇಂದು ನಮ್ಮ ಆರ್ಥಿಕ ವ್ಯವಸ್ಥೆಯಲ್ಲಿ ನಾವು ಆಮೂಲಾಗ್ರ ಬದಲಾವಣೆ ತರಬೇಕಾಗಿದೆ. ಈ ಬದಲಾವಣೆ ಎಂಬುದು ಆರ್ಥಿಕ ವ್ಯವಸ್ಥೆಯ ರಚನೆಯ ಸ್ವರೂಪವನ್ನೇ ಪರಿವರ್ತಿಸಬೇಕಾಗಿದೆ. ವಿದೇಶಿ ಉದ್ದಿಮೆಗಳನ್ನು ತೈಲ ಮುಂತಾದ ಏಕಸ್ವಾಮ್ಯದ ಉದ್ದಿಮೆಗಳನ್ನು ರಾಷ್ಟ್ರೀಕರಿಸಬೇಕು. ಆ ಮೂಲಕ ನಮ್ಮ ಆರ್ಥಿಕ ವ್ಯವಸ್ಥೆಯಲ್ಲಿ ಸಾರ್ವಜನಿಕ ರಂಗಕ್ಕೆ ಹೆಚ್ಚಿನ ಮಹತ್ವ ದೊರಕುವಂತಾಗಬೇಕು, ವಿಶೇಷವಾಗಿ, ನಮ್ಮ ಔದ್ಯಮಿಕ ಆರ್ಥಿಕತೆಯಲ್ಲಿ ಸಾರ್ವಜನಿಕ ರಂಗ ಮೇಲುಗೈ ಸಾಧಿಸುವಂತೆ, ನೋಡಿಕೊಳ್ಳಬೇಕು. ಆದರೆ, ಇದನ್ನು ಮಾಡಲಾಗುತ್ತಿಲ್ಲ, ನಾನು ಇಲ್ಲಿ ಹೇಳಬಯಸುವ ಇನ್ನೊಂದು ವಿಷಯವೆಂದರೆ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಉದ್ದಿಮೆಗಳಿಗೆ ಉತ್ತೇಜನ ನೀಡಬೇಕು. ದೊಡ್ಡ ದೊಡ್ಡ ಉದ್ದಿಮೆಗಳನ್ನು ಸ್ಥಾಪಿಸುವ ಮೂಲಕ ಮಾತ್ರ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಬಹುದೆಂದು ಭಾವಿಸಬೇಡಿ. ನಮ್ಮ ಸಂಪನ್ಮೂಲಗಳು ಮಿತವಾಗಿವೆ. ಆದರೆ, ಇದರಿಂದ ಸಣ್ಣ ಮತ್ತು ಮಧ್ಯಮ ಪ್ರಮಾಣದ ಉದ್ದಿಮೆ ಆರಂಭಿಸುವುದಕ್ಕೆ ಯಾವುದೇ ಅಡ್ಡಿ ಇಲ್ಲವೆಂಬುದು ಸ್ಪಷ್ಟವಾಗಿದೆ. ಇಡೀ ದೇಶದ ಉದ್ದಗಲಕ್ಕೂ ವಿಶೇಷವಾಗಿ, ಹಿಂದುಳಿದ ಪ್ರದೇಶದಲ್ಲಿ ಇಂತಹ ಸಣ್ಣ ಪುಟ್ಟ ಉದ್ದಿಮೆಗಳು ಸ್ಥಾಪನೆಗೊಳ್ಳಬೇಕು. ಇಂತಹ ಔದ್ಯೋಗಿಕ ಸಾಹಸಕ್ಕೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಎರಡೂ ಬೆಂಬಲವಾಗಿ ನಿಲ್ಲಬೇಕು. ಭಾರತ ಸರ್ಕಾರದ ಸಂಸ್ಥೆಗಳು ಸಾಲ ನೀಡಲು ಮುಂದೆ ಬರಬೇಕು. ಹೀಗೆ, ಮಾಡುವುದರಿಂದ ನಾವು ಉದ್ಯೋಗ ಅವಕಾಶಗಳನ್ನು ಸೃಷ್ಟಿಸಬಹುದು. ಅಷ್ಟೇಯಲ್ಲ, ಈ ಅವಕಾಶಗಳು ದೇಶಾದ್ಯಂತ ಪಸರಿಸುವಂತೆ ನೋಡಿಕೊಳ್ಳಬಹುದು. ಆದರೆ, ಇದನ್ನು ಯಾರೂ ಮಾಡುತ್ತಿಲ್ಲ, ಈ ಸಂದರ್ಭದಲ್ಲಿ ನಾನು ಹೇಳಬಯಸುವುದು ಇಷ್ಟೇ. ಸಾರ್ವಜನಿಕ ರಂಗವನ್ನು ಅಪಾರವಾಗಿ ವಿಸ್ತರಿಸುವ ಅವಶ್ಯಕತೆ ಇದೆ . ಅಷ್ಟೇಯಲ್ಲ, ಈ ಸಾರ್ವಜನಿಕ ರಂಗವೂ ಬಳಕೆ ವಸ್ತುಗಳ ಉದ್ದಿಮೆಯ ಕ್ಷೇತ್ರಕ್ಕೆ ಕಾಲಿರಿಸಬೇಕು. ಸಣ್ಣ ಸಣ್ಣ ಉದ್ದಿಮೆಗಳನ್ನು ಆರಂಭಿಸುವ ಮೂಲಕ ಉದ್ಯೋಗದ ಸಾಧ್ಯತೆಗಳನ್ನು ಹೆಚ್ಚಿಸಬೇಕು, ಕೇವಲ ಬಳಕೆ ವಸ್ತುಗಳನ್ನು ಕಡಿಮೆ ಬೆಲೆಗೆ ಮಾರುವ ಉದ್ದೇಶವಷ್ಟೇಯಲ್ಲ ಉದ್ಯೋಗ ಅವಕಾಶಗಳನ್ನು ಸೃಷ್ಟಿಸುವ ಉದ್ದೇಶದಿಂದಲೂ ನಾವು ವಿಶಿಷ್ಟ ಕ್ರಮ ಕೈಗೊಳ್ಳಬೇಕಾಗಿದೆ . ಜೊತೆಗೆ, ಉದ್ದಿಮೆ ಕ್ಷೇತ್ರದಲ್ಲಿರುವ ಸಣ್ಣವರಿಗೆ, ದುರ್ಬಲರಿಗೆ ಸಹಾಯದ ಹಸ್ತ ಚಾಚಿರಬೇಕು. ನಮ್ಮ ಸಣ್ಣ ಪ್ರಮಾಣದ ಉದ್ದಿಮೆಯ ಜನರಿಗೆ ಯಾವುದೇ ಸಾಲ ಸೌಲಭ್ಯದ ಸಹಾಯ, ಕಚ್ಚಾ ವಸ್ತುಗಳ ಲಭ್ಯತೆ, ಇತ್ಯಾದಿ ವಿಷಯದಲ್ಲಿ ಸಾಕಷ್ಟು ಅನುಕೂಲ ಇಲ್ಲವೆಂದು ನಮಗೆ ಗೊತ್ತು ಅವರಿಗೆ ಬೇಕಾಗುವ ಒಂದಿಷ್ಟು ವಿದೇಶಿ ವಿನಿಮಯ ಅವರ ಕೈಗೆ ಎಟುಕಲಾರದು. ಅವರು ತಯಾರಿಸಿದ ಪದಾರ್ಥಗಳನ್ನು ವಿತರಿಸುವ, ವಿಕ್ರಯಿಸುವ ಸಮಯದಲ್ಲಿಯೂ ಅವರಿಗೆ ಯಾವುದೇ

ಸಹಾಯ ಸಿಗುವುದಿಲ್ಲ. ಬ್ಯಾಂಕುಗಳ ರಾಷ್ಟ್ರೀಕರಣದ ಮೇಲೂ ಅವರ ದುಃಸ್ಥಿತಿ ದೂರವಾಗಿಲ್ಲ, ಆದ್ದರಿಂದ ಸಣ್ಣ ಮತ್ತು ಮಧ್ಯಮ ಉದ್ದಿಮೆಗಳನ್ನು ಅಭಿವೃದ್ಧಿಪಡಿಸುವ ಪ್ರಕ್ರಿಯೆಯನ್ನು ಉದ್ಯೋಗ ಅವಕಾಶಗಳ ಸೃಷ್ಟಿಗೆ ಸುಲಗ್ನಗೊಳಿಸಲು ಸರ್ಕಾರ ಸತತ ಪ್ರಯತ್ನ ಮಾಡಬೇಕು ಅಷ್ಟೇ ಯಾಕೆ, ಯಾವುದೇ ತರಹದ ಉದ್ದಿಮೆ ಸ್ಥಾಪನೆಗೆ ಅದೊಂದು ಮೂಲಭೂತ ನಿಬಂಧನೆಯಾಗಿರಬೇಕು.

ಕೊನೆಯದಾಗಿ, ಉದ್ದಿಮೆಗಳನ್ನು ಮುಚ್ಚುವ ಕಾರ್ಮಿಕರನ್ನು ವಜಾಗೊಳಿಸುವ ಅಥವಾ ಸಂಖ್ಯೆ ತಗ್ಗಿಸುವ, ಇವೆಲ್ಲ ಸಂಗತಿಗಳ ಮೇಲೆ ಸರ್ಕಾರ ಕಟ್ಟುನಿಟ್ಟಾಗಿ ನಿಗಾಯಿಟ್ಟು, ಅವಶ್ಯಬಿದ್ದರೆ ಸಕಾಲದಲ್ಲಿ ಸೂಕ್ತ ಕ್ರಮ ಕೈಗೊಳ್ಳಬೇಕು, ಬಂಡವಾಳಶಾಹಿ ವರ್ಗ, ಏಕಸ್ವಾಮ್ಯ ಪ್ರಭುಗಳು ನಮ್ಮ ಅರ್ಥ ವ್ಯವಸ್ಥೆ ಕೊಳ್ಳೆ ಹೊಡೆದು ಸಾಮಾಜಿಕ ಸಮಸ್ಯೆಗಳನ್ನು ಸೃಷ್ಟಿಸುವುದಕ್ಕೆ ಸರ್ಕಾರ ಅವಕಾಶ ನೀಡಬಾರದು.

ಮಾನ್ಯರೆ, ನಾನು ಕೂಡುವ ಮುಂಚೆ ಇನ್ನೊಂದು ಮಾತು ಹೇಳಬಯಸುತ್ತೇನೆ; ನಾನು ಈವರೆಗೆ ಕೆಲವು ಸಲಹೆಗಳನ್ನು ನೀಡಿದ್ದೇನೆ; ಮತ್ತು ಅವು ಮೂಲ ಸಲಹೆಗಳೆಂದು ನನ್ನ ಅನಿಸಿಕೆ. ಆದರೆ, ಅವುಗಳನ್ನು ಅವರು ಸ್ವೀಕರಿಸುವುದಿಲ್ಲವೆಂದೂ ನನಗೆ ಗೊತ್ತು. ಒಟ್ಟಾರೆಯಾಗಿ ಆಗಿದ್ದೇನೆಂದರೆ, ನಾನು ಮಾತಾಡಿದ್ದೇನೆ, ನೀವು ಆಲಿಸಿದ್ದೀರಿ ನೀವು ಗಂಟೆ ಬಾರಿಸಿದ್ದೀರಿ, ನಾನು ನನ್ನ ಮಾತು ಮುಗಿಸಿ, ಕುಳಿತುಕೊಳ್ಳುತ್ತೇನೆ. ಆದರೆ, ಇದರಿಂದ ಏನೂ ಹೊರಬರಬಾರದು. ಈ ಸರ್ಕಾರ ತೀರ ಅಸಮರ್ಥವಾಗಿದೆ. ಅದಕ್ಕೆ ತನ್ನದೇಯಾದ ಒಂದು ಕಾರ್ಮಿಕ ಧೋರಣೆಯಿಲ್ಲ, ಅದರ ಯೋಜನೆ ದೋಷಪೂರ್ಣವಾಗಿ, ಅಷ್ಟೇಯಲ್ಲ, ಇನ್ನೊಂದು ಹೆಜ್ಜೆ ಮುಂದೆ ಹೋಗಿ, ಅವು ಯೋಜನೆಗಳೇ ಅಲ್ಲವೆಂದು ಹೇಳಬಹುದು ; ಇಂಥವುಗಳಿಗೆ ಯೋಜನಾ ಆಯೋಗವೆಂದೂ ಮತ್ತು ಉದ್ಯೋಗ ಭವನವೆಂದೂ ಕರೆಯುವುದು ಅಭಿವ್ಯಕ್ತಿಯ ಮಹಾ ದುರಪಯೋಗವಾದೀತು.

## 8. ಪಾಕಿಸ್ತಾನಕ್ಕೆ ಅಮೇರಿಕೆಯ ಮಿಲಿಟರಿ ಸಹಾಯ

ಮಹನೀಯ ಉಪಾಧ್ಯಕ್ಷರೆ,

ನಮ್ಮ ದೇಶಕ್ಕೆ ಅಮೇರಿಕೆಯ ರಾಜದೂತನಾಗಿ, ಹೊಸದಾಗಿ ಬಂದಿರುವ ಮಿಸ್ಟರ್ ವಿಲಿಯಂ ಸ್ಯಾಕ್ಸ್‌ಬಿ ಕಳೆದ ಶನಿವಾರ ರಾಷ್ಟ್ರಪತಿ ಭವನದಲ್ಲಿ ತಮ್ಮ ಅಧ್ಯಕ್ಷರಿಗೆ ತನ್ನ ಪರಿಚಯ ಪತ್ರವನ್ನು ನಿವೇದಿಸುವಾಗ ಹೇಳಿದ್ದು :

"ನಮ್ಮ ಎರಡೂ ರಾಷ್ಟ್ರಗಳು ಇತ್ತೀಚಿನ ವರ್ಷಗಳಲ್ಲಿ ಅನೇಕ ಸಮಸ್ಯೆಗಳನ್ನು ಪರಿಹರಿಸುವ ದಾರಿಯಲ್ಲಿ ಘನತೆಯಿಂದ ಮತ್ತು ನಿರ್ಭೀತಿಯಿಂದ ಮುನ್ನಡೆದಿವೆ ; ಮತ್ತು ಪ್ರಬುದ್ಧ ಸಮಾನತೆ ಹಾಗೂ ಪರಸ್ಪರ ಗೌರವದಿಂದ ಕೂಡಿದ ಒಂದು ಹೊಸ ನೆಲೆಯ ಮೇಲೆ ನಮ್ಮ ಸಂಬಂಧಗಳನ್ನು ಸಂಸ್ಥಾಪಿಸಲಾಗಿದೆ. ವಿಜ್ಞಾನ, ಮತ್ತು ತಂತ್ರಜ್ಞಾನ, ಆರ್ಥಿಕತೆ, ವಾಣಿಜ್ಯ, ಶಿಕ್ಷಣ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ನಮ್ಮ ವ್ಯವಹಾರಿಕ ಸಂಬಂಧಗಳನ್ನು ಸೃಷ್ಟಿಸುವ, ವಿಸ್ತೃತಗೊಳಿಸುವ ಒಂದು ಆಶಾಭಾವನೆಯನ್ನು ನಾವು ಹೊಂದಿದ್ದೇವೆ ಈ ಪ್ರಕ್ರಿಯೆಯನ್ನು ಇನ್ನೂ ಗಟ್ಟಿಗೊಳಿಸಲು ನನಗೆ ಸಾಧ್ಯವಿರುವ ಕಾಣಿಕೆ ನೀಡುವುದು, ಸಂತೋಷದ ಸಂಗತಿ ಅಷ್ಟೆಯಲ್ಲ, ಅದು ನನ್ನ ಕರ್ತವ್ಯವೂ ಆಗಿದೆಯೆಂದು ನನ್ನ ಭಾವನೆ".

ಆಮೇಲೆ ಅವರು ಮುಂದುವರೆದು ಹೇಳುತ್ತಾರೆ; ನಮಗೆ ಇಂದು ಎದುರಾಗಿರುವ ಸಮಸ್ಯೆಯನ್ನು ಪರಿಹರಿಸಿಕೊಂಡು, ನಮಗೆ ಇಬ್ಬರಿಗೂ ಸಾಮಾನ್ಯವಾಗಿರುವ ಗುರಿಯನ್ನು ತಲುಪುವ ಕಡೆಗೆ, ಸಮಾನವಾದ ಸಾಧನೆಗಳನ್ನು ನೆರವೇರಿಸುವ ಕಡೆಗೆ, ನಾವಿಬ್ಬರೂ ಕೂಡಿ, ದುಡಿಯಬೇಕಾಗಿದೆ. ಇವುಗಳಲ್ಲಿ ಅತ್ಯಂತ ಮಹತ್ವದ ಸಂಗತಿಯೆಂದರೆ, ಶಾಂತಿ; ನೆರೆ-ಹೊರೆಯ ರಾಷ್ಟ್ರಗಳೊಂದಿಗೆ ಶಾಂತಿ ಮತ್ತು ಇಡೀ ಜಗತ್ತಿನಾದ್ಯಂತ ನೆಲೆಸ ಬೇಕಾಗಿರುವ ಶಾಂತಿ.

ತನ್ನ ಸರ್ಕಾರ ಪಾಕಿಸ್ತಾನಕ್ಕೆ ಮತ್ತೆ ಶಸ್ತ್ರಾಸ್ತ್ರಗಳನ್ನು ಒದಗಿಸುವ, ತೀರ್ಮಾನ ತೆಗೆದುಕೊಂಡಿರುವುದನ್ನು ವಿಲಿಯಂ ಸ್ಯಾಕ್ಸ್‌ಬಿ ಮರೆತಂತೆ ಕಾಣುತ್ತದೆ. ಇದರಿಂದ ಅಮೇರಿಕೆ ಮತ್ತು ನಮ್ಮ ರಾಷ್ಟ್ರದ ನಡುವೆ ಇರುವ ಸಂಬಂಧಗಳನ್ನು ಸುಧಾರಿಸುವ ಸಾಧ್ಯತೆಯ ಮೇಲೆ ಗಂಭೀರವಾದ ಪ್ರತ್ಯಾತ್ಮಕ ಪರಿಣಾಮವಾಗಿದೆ. ಮೇಡಂ ಅಮೇರಿಕೆಯೂ ತನ್ನ ವೈರಿ ಧೋರಣೆಗಳನ್ನು ಬಿಟ್ಟು ಕೊಡದ ಹೊರತು, ನಮ್ಮ ದೇಶದ ವಿರುದ್ಧ ಚಿತಾವಣೆ ನಡೆಸುವುದನ್ನು ನಿಲ್ಲಿಸುವುದರ ಹೊರತು, ಭಾರತ ಮತ್ತು ಅಮೇರಿಕ ನಡುವಿನ ಸಂಬಂಧಗಳನ್ನು ಗಟ್ಟಿ ನೆಲೆಯ ಮೇಲೆ ನಿಲ್ಲಿಸಲು ಸಾಧ್ಯವಿಲ್ಲ. ನಮ್ಮ ನೆರೆಹೊರೆಯ ರಾಷ್ಟ್ರಗಳಿಗೆ ಯುದ್ಧಾಸ್ತ್ರ

ಸರಬರಾಜು ಮಾಡಿ, ನಮ್ಮ ಸ್ವಾತಂತ್ರಕ್ಕೆ, ಸುಭದ್ರತೆಗೆ ಭೀತಿ ಒಡ್ಡುವುದನ್ನು ನಿಲ್ಲಿಸುವವರೆಗೆ ನಮ್ಮ ಮೇಲೆ ಸಲ್ಲದ ಒತ್ತಡ ತಂದು, ಬ್ಲಾಕ್ ತಂತ್ರವನ್ನು ಬಿಟ್ಟು ಕೊಡುವವರೆಗೆ ನಮ್ಮಿಬ್ಬರ ನಡುವೆ ನಿರಾಳ ಮತ್ತು ನಿರಾತಂಕವಾದ ಸಂಬಂಧ ಸಾಧ್ಯವಿಲ್ಲ. ರಾಜ ತಾಂತ್ರಿಕತೆ ಹಾಗೂ ಆಷಾಡಭೂತಿಯ ಔದ್ಧತ್ಯದ ನಡುವೆ ಇರುವ ಗೆರೆಯನ್ನು ವಿಲಿಯಂ ಸ್ಯಾಕ್ಸ್‌ಬಿ ಮರೆತಿರುವುದು ಸ್ಪಷ್ಟವಾಗಿದೆ. ಇಂತಹ ಅಪ್ರಾಮಾಣಿಕ ಹೇಳಿಕೆಗಳನ್ನು ನಾವು ಈ ಹಿಂದೆ ರೆಸ್ಸೆಂಜಿರ್, ಇತರರಿಂದ ಕೇಳಿದ್ದೇವೆ. ವಿಶೇಷವಾಗಿ, ಕಳೆದ ವರ್ಷ ಅಕ್ಟೋಬರ್‌ನಲ್ಲಿ ರೆಸ್ಸೆಂಜರ್ ನಮ್ಮ ದೇಶಕ್ಕೆ ಬಂದಾಗ ಇಂತಹ ಮಾತುಗಳನ್ನು ಆಡಿದ್ದರು. ಅವು ಇನ್ನೂ ಮನಸ್ಸಿನಲ್ಲಿ ಮಾಸದೇ ಉಳಿದುಕೊಂಡಿವೆ. ರೆಸ್ಸೆಂಜರ್ ಜೊತೆ ಮಾತಾಡಿದ ನಂತರ ಶ್ರೀ ಚೌವ್ವಾಣ್ ಅವರು ಕೂಡ ಅವರ ಅಪ್ರಾಮಾಣಿಕತೆ ಕಂಡು ಒಂದಿಷ್ಟು ದಿಗಿಲುಗೊಂಡಿದ್ದರು. ಶ್ರೀ ಚೌವ್ವಾಣ್ ಅವರನ್ನು ದೂಷಿಸುವುದು ನನ್ನ ಉದ್ದೇಶವಲ್ಲ. ಆದರೆ, ನಾವು ನಮ್ಮ ಬದುಕಿನಿಂದ ಪಾಠ ಕಲಿಯಬೇಕು, ಭಾರತ ಮತ್ತು ಅಮೇರಿಕೆಯ ಜಂಟಿ ಆಯೋಗದ ಹೇಳಿಕೆಯಲ್ಲಿ ಶ್ರೀ ಚೌವ್ವಾಣ್ ಅವರು ಹೀಗೆ ಹೇಳಿದ್ದರು.

"ಮಾನ್ಯ ಕಾರ್ಯದರ್ಶಿಗಳೇ, ಈ ಒಪ್ಪಂದಕ್ಕೆ ಇಂದು ನಾವು ಸಹಿ ಹಾಕುವುದರ ಮೂಲಕ ನಮ್ಮಿಬ್ಬರ ನಡುವಿನ ಸಂಬಂಧಗಳಿಗೆ ಒಂದು ಉದ್ದೇಶಪೂರ್ವಕ ದೆಸೆ ತೋರುವಲ್ಲಿ ವಾಸ್ತವವಾದ ಪ್ರಗತಿಯನ್ನು ಸಾಧಿಸಿ ದಾಖಲಿಸಿದ್ದೇವೆ. ಮುಂಬರುವ ತಿಂಗಳು, ವರ್ಷಗಳಲ್ಲಿ, ಈ ಸಂಬಂಧಗಳು ಇನ್ನೂ ವೃದ್ಧಿಗೊಳ್ಳುವವು ಎಂಬ ಆಶಯ ನನ್ನದಾಗಿದೆ ಎಂದು ಹೇಳಬಯಸುತ್ತೇನೆ. ಶಾಂತಿ ಮತ್ತು ಸ್ಥಿರತೆಯನ್ನು ಸಂವರ್ಧಿಸುವ, ಪರಸ್ಪರರ ಸಹಕಾರಕ್ಕೆ ಇಂಬುಗೊಡುವ ಅಷ್ಟೆಯಲ್ಲ, ಸ್ಥಳೀಯವಾಗಿ ಮತ್ತು ಇಡೀ ಪ್ರಪಂಚಕ್ಕೆ ಸಂಬಂಧಿಸಿದಂತೆ, ಮುನ್ನಡೆಯುವ ಸದ್ಭಾವ ನಮ್ಮಿಬ್ಬರ ಸಮಾನ ಉದ್ದೇಶವಾಗಿದ್ದರಿಂದ ನಮ್ಮ ನಡುವಿನ ಸಂಬಂಧಗಳು ಅಬಾಧಿತವಾಗಿ ಮುನ್ನಡೆಯುವುವು ಎಂಬ ವಿಶ್ವಾಸ ನನಗಿದೆ.

ಶ್ರೀ ಚೌವ್ವಾಣ್ ಅವರ ಪ್ರಿಯವಾದ ಈ ಆಶೆಗಳೆಲ್ಲ ನೆಲಕಚ್ಚಿದುವು, ಹೆನ್ರಿ ರೆಸ್ಸೆಂಜರರ ಅಪ್ರಾಮಾಣಿಕ , ಬೆದರಿಕೆಯ ರಾಜನೀತಿಯಿಂದಾಗಿ, ಶ್ರಿ ಚೌವ್ವಾಣ್‌ರ ಆಶಾಗೋಪುರ ನೆಲಕ್ಕೆ ಕುಸಿಯಿತು. ಆದ್ದರಿಂದ ನಾವು ಈಗ ಮಿ. ಸ್ಯಾಕ್ಸ್‌ಬಿಗೆ ಸ್ಪಷ್ಟವಾದ ಮಾತುಗಳಲ್ಲಿ ಹೇಳಬೇಕಾಗಿದೆ. ಈ ಕುರಿತು ಅವರಿಗೆ ಯಾವುದೇ ಸಂಶಯ ಇರದಂತೆ, ನಮ್ಮ ನಿಲುವನ್ನು ಸ್ಪಷ್ಟಪಡಿಸಬೇಕಾಗಿದೆ. ನಾವು ಭೌತಿಕ ದೃಷ್ಟಿಯಿಂದ ಒಂದು ಬಡ ರಾಷ್ಟ್ರವಾಗಿದ್ದಿರಬಹುದು, ಆದರೆ, ಒಂದು ಮಹಾನ್ ಪರಂಪರೆಯನ್ನು ಒಂದು ಮಹಾನ್ ಪ್ರತಿಭಾ ಸಂಪನ್ನತೆಯನ್ನು ಹೊಂದಿರುವ ರಾಷ್ಟ್ರ ನಮ್ಮದಾಗಿದೆ. ಇದೆಲ್ಲಕ್ಕೂ, ಮಿಗಿಲಾಗಿ ಇಡೀ ವಿಶ್ವವನ್ನೇ ಅದರ ಮಹಾ ಔನ್ನತ್ಯದಲ್ಲಿ ಪರಿಭಾವಿಸಿದ ರಾಷ್ಟ್ರ ನಮ್ಮದಾಗಿದೆ. ಇಡೀ, ಮನು ಕುಲದ ಬಗ್ಗೆ ಸಹಾನುಭೂತಿ, ಹೊಂದಿರುವ ನಾವು ಶಾಂತಿ, ಸ್ಥಿರತೆಯ ಮಹಾ ಕಾರಣಕ್ಕೆ

ಸಮರ್ಪಿಸಿಕೊಂಡಿದ್ದೇವೆ. ನಾವೇನು ಆ ಸಂದರ್ಭದಲ್ಲಿ ಉಪದೇಶ ಮಾಡಬೇಕಾಗಿಲ್ಲ. ಅಮೇರಿಕೆಯು ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರ ಸರಬರಾಜು ಮಾಡುವ ನಿರ್ಧಾರ ತೆಗೆದುಕೊಂಡಾಗ ಸ್ವತಃ ಸ್ಯಾಕ್ಸ್‌ಬಿ ಅವರಿಗೇ ಅಷ್ಟೇನು ಸಂತೋಷವಾಗಲಿಲ್ಲ.

ಆದರೆ, ಮಾನ್ಯ ಉಪಾಧ್ಯಕ್ಷರೆ , ಈ ನಿರ್ಧಾರದಿಂದ ನಮಗೆ ಆಶ್ಚರ್ಯವೇನೂ ಆಗಿಲ್ಲ; ಯಾಕೆಂದರೆ, ಈಗ ಈ ಶಸ್ತ್ರಾಸ್ತ್ರ ಸರಬರಾಜು ಯಾವುದೇ ಮುಚ್ಚುಮರೆಯಿಲ್ಲದೆ, ಢಾಣಾ ಢಂಗುರವಾಗಿ ನಡೆಯುವುದು ಅಷ್ಟೇ. ವಾಸ್ತವವೆಂದರೆ, ಪಾಕಿಸ್ತಾನಕ್ಕೆ ಅಮೇರಿಕೆಯ ಯುದ್ಧಾಸ್ತ್ರಗಳು ಸತತವಾಗಿ ಸಾಗಿಬರುತ್ತಲೇ ಇವೆ. 1965ರಲ್ಲಿ ಭಾರತ - ಪಾಕಿಸ್ತಾನ ಯುದ್ಧದ ಸಂದರ್ಭದಲ್ಲಿ ಪಾಕಿಸ್ತಾನದ ಮೇಲೆ ಹೇರಲಾಗಿದ್ದ ತಾತ್ಕಾಲಿಕ ನಿಷೇಧದ ಕಾಲದಿಂದಲೂ ಗೌಪ್ಯವಾಗಿ ಈ ಶಸ್ತ್ರ ಸರಬರಾಜಿನ ಕೆಲಸ ನಡೆದಿದೆ. ಈ ಶಸ್ತ್ರಾಸ್ತ್ರಗಳು ತುರ್ಕಿ, ಇರಾನ್, ಸೌದಿ ಅರೇಬಿಯಾ. ಜೋರ್ಡಾನ್, ಮುಂತಾದ ರಾಷ್ಟಗಳ ಮೂಲಕ ಪಾಕಿಸ್ತಾನದ ಮಿಲಿಟರಿ ಉಗ್ರಾಣಕ್ಕೆ ಬಂದು ಸೇರುತ್ತಿದ್ದವು. ಈ ರಾಷ್ಟಗಳಿಂದ ಪಾಕಿಸ್ತಾನಕ್ಕೆ ಹರಿದು ಬರುತ್ತಿದ್ದ ಶಸ್ತ್ರಾಸ್ತ್ರಗಳ ಸರಬರಾಜು ಅಮೇರಿಕೆಯ ನಿರ್ದೇಶನದ ಮೇರೆಗೆ ನಡೆಯುತ್ತಿತ್ತು ಎಂಬುದು ಎಲ್ಲರಿಗೂ ಗೊತ್ತಿದ್ದ ಸಂಗತಿ, ಇದೇನೇ ಇದ್ದರೂ, ಅಮೇರಿಕೆಯ ನಾಟೋ (ನಾಟೋ) ಮಿತ್ರರು ಹಾಗೂ ಸೆಂಟೋ ಪಾರ್ಟಿಗಳ ನಿಷೇಧದ ಹೊರತಾಗಿಯೂ ಪಾಕಿಸ್ತಾನಕ್ಕೆ ಅಮೇರಿಕೆಯ ಅಸ್ತ್ರಗಳು ಬಂದು ತಲುಪುತ್ತಿದ್ದವು.

ಈ ನಿಷೇಧಕ್ಕೆ ಸಂಬಂಧಿಸಿ ಹೇಳುವುದಾದರೆ, ಅದನ್ನು 1973 ಜನವರಿ - ಮಾರ್ಚ್‌ನಲ್ಲಿ ಆಂಶಿಕವಾಗಿ ತೆಗೆದುಹಾಕಲಾಯಿತು. ಬಿಡಿ ಭಾಗಗಳನ್ನು ಸರಬರಾಜು ಮಾಡುವ ನೆಪದಲ್ಲಿ ಶಸ್ತ್ರಾಸ್ತ್ರಪೂರೈಕೆ ಮತ್ತೇ ಆರಂಭಿಸಲಾಯಿತು. ಇವುಗಳನ್ನು ಅವರು ಅನಪಾಯಕಾರಿ ಅಸ್ತ್ರಗಳೆಂದು ಕರೆದರೂ, ಅವುಗಳಲ್ಲಿ ಶಸ್ತ್ರ ಸನ್ನದ್ಧ ಕಾರುಗಳು, ಇನ್ನಿತರ ಮಾರಕಾಸ್ತ್ರಗಳು ಇದ್ದುವುವೆಂಬುದು ಸರ್ವವಿದಿತ. ಇವುಗಳನ್ನು ಬಲೂಚಿಸ್ತಾನ, ಈಶಾನ್ಯ ಗಡಿ ಪ್ರದೇಶ, ಇತರ ಸ್ಥಳಗಳಲ್ಲಿಯ ಜನರನ್ನು ಬಗ್ಗು ಬಡೆಯಲು ಬಳಸಲಾಯಿತು; ಮತ್ತು ಈ ಕಾರ್ಯ ಇವತ್ತಿಗೂ ಮುಂದುವರೆಯುತ್ತಿದೆ.

ಇದಲ್ಲದೇ ಚೀನಾ ಕೂಡಾ ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರಗಳನ್ನು ಒದಗಿಸುತ್ತಿದೆ , ಶಸ್ತ್ರಾಸ್ತ್ರ ಮಾಡುವುದು ಚೀನಾದ ಧೋರಣೆಗೆ ವಿರುದ್ಧವಾಗಿದ್ದರಿಂದ, ಅದು ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರಗಳನ್ನು ಉಡುಗೊರೆಯಾಗಿ ನೀಡುತ್ತಿದೆ ಎಂದು ತಿಳಿಯಬಹುದು. ಈ ಉಡುಗೊರೆ, ಒಂದು ಅಂದಾಜಿನ ಪ್ರಕಾರ, ಈಗಾಗಲೇ 312 ಮಿಲಿಯನ್ ಡಾಲರಿಗೆ ತಲುಪಿದೆ;

ಈ ಶಸ್ತ್ರಾಸ್ತ್ರಗಳಲ್ಲಿ ಫೈಟರ್ಸ್, ಇತ್ಯಾದಿ ಒಳಗೊಂಡಂತೆ ಅತ್ಯಂತ ಆಧುನಿಕ ಅಸ್ತ್ರಗಳಿವೆ, ಇದರ ಜೊತೆಗೆ ಫ್ರಾನ್ಸ್ ಕೂಡಾ ಸುಮಾರು 214 ಮಿಲಿಯನ್ ಡಾಲರ್ ಬೆಲೆಯ ಯುದ್ಧಾಸ್ತ್ರಗಳನ್ನು ಒದಗಿಸುತ್ತಿದೆ. ಇವುಗಳಲ್ಲಿ ಮಿರಾಜ್ ವಿಮಾನಗಳು ಮತ್ತು ಇನ್ನಿತರ ಅನೇಕ ಆಧುನಿಕ ಶಸ್ತ್ರಾಸ್ತ್ರಗಳೂ ಇವೆ. ಅಮೇರಿಕೆಯು ಶಸ್ತ್ರಾಸ್ತ್ರ ಸರಬರಾಜಿನ ನಿಷೇಧ ಹೇರಿದ್ದರಿಂದಲೇ ಪಾಕಿಸ್ತಾನವೂ ಕಳೆದ ಅನೇಕ ವರ್ಷಗಳಿಂದ ಚೀನಾದಿಂದ ಶಸ್ತ್ರಾಸ್ತ್ರ ಪಡೆಯುತ್ತಿದೆ. ಈ ವಿಷಯದಲ್ಲಿ ಚೀನಾ ಅಮೇರಿಕೆಯೊಂದಿಗೆ ಗುಪ್ತವಾಗಿ ಕೈಗೂಡಿಸಿದೆ. ಫ್ರಾನ್ಸ್ ಗೂಢಾಚಾರಿ ಪ್ರಮಾಣದ ಶಸ್ತ್ರ ಸರಬರಾಜು ಮಾಡಿ, ಸಾಕಷ್ಟು ವ್ಯವಹಾರ ಕುದುರಿಸಿಕೊಂಡಿದೆ. ಇದು ಯಾವ ಮಟ್ಟಿಗೆ ಹೋಗಿದೆ ಎಂದರೆ, ಕಳೆದ ವರ್ಷ ಪಾಕಿಸ್ತಾನ ಪ್ರಧಾನ ಮಂತ್ರಿ ಶ್ರೀ ಭುಟ್ಟೋ ಅವರು ಪಾಕಿಸ್ತಾನವೂ ವಾಸ್ತವವಾಗಿ, ಹಿಂದೆಂದಿಗಿಂತಲೂ ಉತ್ತಮವಾದ ಮಿಲಿಟರಿ ಶಕ್ತಿಯನ್ನು ಒಗ್ಗೂಡಿಸಿಕೊಂಡಿದೆ ಎಂದು ಸಾರ್ವಜನಿಕವಾಗಿ ಬಡಾಯಿ ಕೊಚ್ಚಿಕೊಂಡರು. 1971ರ ಇಂಡೋ - ಪಾಕ್ ಯುದ್ಧದ ಸಂದರ್ಭದಲ್ಲಿ ಅದ ಹಾನಿ ತುಂಬಿಕೊಳ್ಳುವುದು ಅಷ್ಟೆಯಲ್ಲ, ಆಗಿನಗಿಂತಲೂ ಈಗ ಪಾಕಿಸ್ತಾನ ಹೆಚ್ಚು ಸುಸಜ್ಜಿತವಾಗಿದೆ ಎಂದು ಘೋಷಿಸಿದರು. ಆದ್ದರಿಂದ ಈಗ ಇರುವ ಪ್ರಶ್ನೆ. ಪಾಕಿಸ್ತಾನಕ್ಕೆ ಹೊಸ ಶಸ್ತ್ರಾಸ್ತ್ರ ಸರಬರಾಜು ಮಾಡುವ ಮೂಲಕ ಅದನ್ನು 1971ರ ಮಟ್ಟಕ್ಕೆ ತರುವುದು. ಆ ಮಟ್ಟವನ್ನು ಅದು ಎಷ್ಟೋ ಹಿಂದೆಯೇ ತಲುಪಿದೆ ; ಅಷ್ಟೆಯಲ್ಲ, ಅದು ಆ ಮಟ್ಟ ಮೀರಿ ಬಹುದೂರ ಮುಂದೆ ಸಾಗಿ ಬಂದಿದೆ. ಆದರೆ ಈ ಮನ್ನಣೆಗೆ ಕೆಲವು ಇತರ ರಾಷ್ಟ್ರಗಳನ್ನು ಒಳಗೊಂಡು ಅಮೇರಿಕೆಯ ಕಾಣಿಕೆ ಮಹತ್ತರವಾಗಿದೆ, ಈ ದಿಸೆಯಲ್ಲಿ ಚೀನಾ ದೇಶದ ಕಾಣಿಕೆಯೂ ಅಷ್ಟೇ ಇದೆ.

ಯು.ಎಸ್. ಪಾಕ್ ಮಿಲಿಟರಿ ಒಪ್ಪಂದದ ಅಡಿಯಲ್ಲಿ ಅಮೇರಿಕೆಯು ಪಾಕಿಸ್ತಾನಕ್ಕೆ 2.5 ಬಿಲಿಯನ್ ಡಾಲರ್ ಬೆಲೆಯ ಶಸ್ತ್ರಾಸ್ತ್ರಗಳನ್ನು ಕಾಣಿಕೆಯಾಗಿ ನೀಡಿದೆ ಎಂಬುದು ನಿಮಗೆ ಚೆನ್ನಾಗಿ ಗೊತ್ತಿದೆ. ನಮ್ಮ ದೇಶದ ಲೆಕ್ಕಾಚಾರದಲ್ಲಿ ಅದು ಸುಮಾರು ಎರಡು ಸಾವಿರ ಕೋಟಿ ರೂಪಾಯಿಗಳಾಗುತ್ತದೆ. ಮೊನ್ನಿನ ಒಂದು ವರದಿ ಹೇಳಿದಂತೆ, ಇರಾನ್ ಪಾಕಿಸ್ತಾನಕ್ಕೆ ಕನಿಷ್ಠ 50 ಎಫ್ - 5 ಯುದ್ಧ ವಿಮಾನಗಳನ್ನು ಒದಗಿಸುವ ನಿರ್ಧಾರ ತೆಗೆದುಕೊಂಡಿದೆ. ಹಳೆಯದಾಗಿರುವ ಸೆಂಬಿರ್ ಎಫ್ - 80ಗಳ ಸ್ಥಾನ ತುಂಬುವುದು ಇದರ ಉದ್ದೇಶವಾಗಿದೆ. ಇಷ್ಟೇಯಲ್ಲ, ಪಾಕಿಸ್ತಾನದಲ್ಲಿ ಮಿಲಿಟರಿಯ ವ್ಯವಸ್ಥೆಯನ್ನು ಸಬಲಗೊಳಿಸುವ ಉದ್ದೇಶದಿಂದ ಜಂಟಿ ಫ್ಯಾಕ್ಟರಿಗಳನ್ನು ಆರಂಭಿಸುವ ತೀರ್ಮಾನವನ್ನು ಇರಾನ್ ತೆಗೆದುಕೊಂಡಿದೆ. ವಾಸ್ತವವಾಗಿ, ಇರಾನ್ ತನ್ನೆಲ್ಲ ಸಂಪನ್ಮೂಲವನ್ನು ಬೃಹತ್ ಪ್ರಮಾಣದಲ್ಲಿ ಬಳಸಿ ಪಾಕಿಸ್ತಾನದ ಕೈ ಬಲಪಡಿಸುವ ಮೂಲಕ ಅಲ್ಲಿ ಶಸ್ತ್ರಾಸ್ತ್ರ ಪೈಪೋಟಿಗೆ ಬುನಾದಿ ಹಾಕುತ್ತಿದೆ. ಅಮೇರಿಕೆಯೂ ತೆಗೆದುಕೊಂಡಿರುವ ಹೊಸ ಕ್ರಮದ ಉದ್ದೇಶ ನಿಜವಾಗಿಯೂ ಪಾಕಿಸ್ತಾನದಲ್ಲಿ ಶಸ್ತ್ರಾಸ್ತ್ರ ಪೈಪೋಟಿ ನಡೆಸುವುದೇ ಆಗಿದೆ. ಅಮೇರಿಕೆಯ

ಪರವಾಗಿ , ಪಾಕಿಸ್ತಾನ ಈ ಕೆಲಸ ಮಾಡಬೇಕೆಂಬುದೇ ಅದರ ಉದ್ದೇಶವಾಗಿದೆ. ನಮ್ಮ ಭೂ ಪ್ರದೇಶದಲ್ಲಿ ಮಿಲಿಟರಿ ಶಕ್ತಿಯ ಒಂದು ಹೊಸ ಸಮತೋಲನವನ್ನು ಅಮೇರಿಕೆ ನಿರ್ಮಿಸಬಯಸುತ್ತಿರುವುದು ಇಂದು ಜಗಜ್ಜಾಹೀರಾಗಿದೆ. ಆದ್ದರಿಂದಲೇ, ಅವರು ಪಾಕಿಸ್ತಾನವನ್ನು ಒಂದು ಮಿಲಿಟರಿ ನೆಲೆಯಾಗಿ ಬಳಸುವುದರಲ್ಲಿ ಆಸಕ್ತರಾಗಿದ್ದಾರೆ. ಹೀಗಾಗಿ, ಕೇವಲ ಪಾಕಿಸ್ತಾನ ಮಾತ್ರ ಶಸ್ತ್ರಾಸ್ತ್ರ ಪೈಪೋಟಿಯಲ್ಲಿ ತೊಡಗಿದೆ ಎಂದು ತಿಳಿಯುವುದು ಭೋಳೀತನವಾದೀತು;.

ಯಾಕೆಂದರೆ, ಅಮೇರಿಕೆಯೂ ಶಸ್ತ್ರಾಸ್ತ್ರಗಳನ್ನು ಕೇವಲ ಮಾರುವುದರಲ್ಲಿ ಮಾತ್ರ ಆಸಕ್ತವಾಗಿಲ್ಲ. ಅದರಾಚೆಯ ಹಲವಾರು ಉದ್ದೇಶಗಳು ಇವೆ. ವಾಸ್ತವವೆಂದರೆ, ಶ್ರೀ ಭುಟ್ಟೋ ಅವರು- ನಮಗೂ, ಪಾಕಿಸ್ತಾನದ ಜನತೆಗೂ ದುರ್ದೈವದ ಸಂಗತಿ - ಅಮೇರಿಕೆಯ ಕುತಂತ್ರಕ್ಕೆ ಬಲಿ ಬಿದ್ದಿದ್ದಾರೆ. ಹೀಗಾಗಿ, ಅವರು ತಮ್ಮ ದೇಶವನ್ನು, ತಮ್ಮ ದೇಶದ ಸಂಪನ್ಮೂಲವನ್ನು, ತಮ್ಮ ದೇಶದ ಮನುಷ್ಯ ಶಕ್ತಿಯನ್ನು ಅಮೇರಿಕೆಯ ಸಾಮ್ರಾಜ್ಯಶಾಹಿಗಳು ದುರುಪಯೋಗಿಸುವುದಕ್ಕೆ ಅವಕಾಶ ಮಾಡಿಕೊಡುತ್ತಿದ್ದಾರೆ. ಅಮೇರಿಕೆಯ ಸಾಮ್ರಾಜ್ಯಶಾಹಿಗಳು ಇದನ್ನು ನಮ್ಮ ವಿರುದ್ಧ ಈ ಭಾಗದ ರಾಷ್ಟ್ರಗಳ ವಿರುದ್ಧ ಬಳಸಲಿದ್ದಾರೆ. ಆದ್ದರಿಂದ, ನಮ್ಮ ಇಂದಿನ ತುರ್ತು ಅವಶ್ಯಕತೆಯೆಂದರೆ, ಅಮೇರಿಕೆಯೂ ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರ ಸಹಾಯ ಮಾಡಲು ತೆಗೆದುಕೊಂಡಿರುವ ನಿರ್ಧಾರವನ್ನು ನಾವು ಸರಿಯಾಗಿ ಮೌಲ್ಯಮಾಪನ ಮಾಡಬೇಕಾದದ್ದು; ಅಷ್ಟೇಯಲ್ಲ, ಅದು ತೆಗೆದುಕೊಂಡಿರುವ ತೀರ್ಮಾನದ ಈ ಬಗ್ಗೆಯೂ ನೀವೂ ಕೂಲಂಕುಷವಾಗಿ ಚಿಂತಿಸಬೇಕಿದೆ. ನಮ್ಮ ಮೌಲ್ಯಮಾಪನ ತುಂಬ ವ್ಯಾಪಕವಾಗಿದ್ದು, ಅದು ರಾಜಕೀಯ - ಆರ್ಥಿಕ, ಮತ್ತು ಮಿಲಿಟರಿ ಆಯಾಮಗಳನ್ನು ಒಳಗೊಳ್ಳಬೇಕು. ಆ ತೀರ್ಮಾನದ ಎಲ್ಲ ಧ್ವನಿ, ಪ್ರಭಾವಗಳನ್ನು ಜಾಗರೂಕತೆಯಿಂದ ಅಧ್ಯಯನಿಸಬೇಕು.

ಈ ಪರಿಸ್ಥಿತಿಯನ್ನು ಅರಿಯಲು ನಮಗೆ ಒಂದು ಬಹು ವ್ಯಾಪಕವಾದ ಧೋರಣೆಯ ಅವಶ್ಯಕತೆಯಿದೆ. ಇಂತಹ ಸಮಗ್ರವೂ, ಸರ್ವಗ್ರಾಹಿಯೂ ಆದ ನಿರ್ದಿಷ್ಟ ಧೋರಣೆಯ ಮೂಲಕ ಮಾತ್ರ ನಾವು ನಮ್ಮ ಕಾರ್ಯಾಚರಣೆಯನ್ನು ರೂಪಿಸಿಕೊಳ್ಳಬಹುದು, ಕಳೆದ ಜನವರಿಯಲ್ಲಿ ಶ್ರೀ ಟಿ.ಎನ್. ಕೌಲ್ ಅವರು ಕೊಟ್ಟ ಹೇಳಿಕೆಯನ್ನು ನಾನಿಲ್ಲಿ ಉದ್ಧರಿಸಬಯಸುತ್ತೇನೆ. ಅವರು ಹೇಳಿದ್ದು; "ಸಾರ್ವಭೌಮ ಸ್ವಾತಂತ್ರ" ಜಗತ್ತಿನ ಎರಡು ರಾಷ್ಟ್ರಗಳ ನಡುವಿನ ವಿಶೇಷವಾಗಿ, ಭಾರತ - ಅಮೇರಿಕೆಯಂತಹ ಬೃಹತ್ ರಾಷ್ಟ್ರಗಳ ನಡುವಿನ ಸಂಬಂಧಗಳನ್ನು ಕುರಿತು ಜಿಜ್ಞಾಸೆ ನಡೆಸುವ ಸಂದರ್ಭದಲ್ಲಿ ಕೇವಲ ವರ್ತಮಾನ ಅಥವಾ ಇತ್ತೀಚಿನ ಗತಕಾಲವನ್ನು ಮಾತ್ರ ಪರಿಗಣನೆಗೆ ತೆಗೆದುಕೊಂಡರೆ ಸಾಲದು. ಬದಲಿಗೆ, ವ್ಯಾಪಕವಾದ ಚಾರಿತ್ರಿಕ ಪರಿಪ್ರೇಕ್ಷಿ ಮತ್ತು ಭವಿಷ್ಯತ್ತಿನ ಸಾಧ್ಯತೆಗಳನ್ನೂ ಗಮನದಲ್ಲಿಟ್ಟುಕೊಂಡು ನಾವು ಈ ಕೆಲಸಕ್ಕೆ ತೊಡಗಬೇಕಾಗುತ್ತದೆ."

ಕಳೆದ ವರ್ಷ (ಅಕ್ಟೋಬರ್, 1974), ಮುಂಬೈಯಲ್ಲಿ ಶ್ರೀ ಟಿ.ಎಲ್. ಕೌಲ್ ಅವರು ಒಂದು ಹೇಳಿಕೆಯನ್ನು ನೀಡಿದ್ದರು. ಅವರ ಪ್ರಕಾರ, ಭಾರತಕ್ಕೆ ರೆಸ್ಸಿಂಜರ್ ಅವರು ನೀಡಿದ ಭೇಟಿಯಿಂದ, ಎರಡೂ ರಾಷ್ಟ್ರಗಳ ನಡುವಿನ ಪರಸ್ಪರ ತಿಳಿವಳಿಕೆ ಉತ್ತಮಗೊಳ್ಳುವುದೆಂದು ತಮ್ಮ ವಿಶ್ವಾಸ ವ್ಯಕ್ತಪಡಿಸಿದ್ದರು. ಆ ಸಮಯದಲ್ಲಿ ಮಿ. ರೆಸ್ಸಿಂಜರ್ ಎರಡು ರಾಷ್ಟ್ರಗಳ ನಡುವಿನ ಪ್ರಬುದ್ಧ ಸಂಬಂಧಗಳ ಕುರಿತು ಮಾತನಾಡುತ್ತಿದ್ದರು. ವಿದೇಶ ಮಂತ್ರಾಲಯದ ಜವಾಬ್ದಾರಿ ಹೊತ್ತಿದ್ದ ಸರ್ದಾರ್ ಸ್ವರ್ಣಸಿಂಗ್ ಅವರು 1974ರ ಸೆಪ್ಟೆಂಬರ್‌ದಲ್ಲಿ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಿಗೆ ಭೇಟಿ ನೀಡಿ, ಆಗ ಅದರ ಅಧ್ಯಕ್ಷರಾಗಿದ್ದ ಫೋರ್ಡ್ ಅವರೊಡನೆ ಮಾತುಕತೆಯಾದ ನಂತರ ಒಂದು ಹೇಳಿಕೆಯನ್ನು ಪ್ರಕಟಿಸಿದ್ದರು. " ನನಗೆ ಈ ಮಾತುಕತೆಯಿಂದ ಸಂತೃಪ್ತಿಯಾಗಿದೆ, ಯಾಕೆಂದರೆ, ಸಮಸ್ಯೆಗಳ ಬಗ್ಗೆ ಅವರ ನಿಲುವು ಇತ್ಯಾತ್ಮಕ ಅಷ್ಟೇಯಲ್ಲ, ಸಹಾಯಕವೂ ಆಗಿತ್ತು".

ನಾವು ಸರ್ದಾರ್ ಸ್ವರ್ಣಸಿಂಗ್ ಅವರ ಹೇಳಿಕೆಯನ್ನು ಇದೇ ಸದನದಲ್ಲಿ ವಿಮರ್ಶೆಗೆ ಗುರಿಮಾಡಿ, ಖಂಡಿಸಿದ್ದೆವು. ನೀವು ತಪ್ಪು ಭಾವಿಸುವುದಿಲ್ಲ ಎಂದರೆ, ಒಂದು ಮಾತನ್ನು ಹೇಳಬಯಸುತ್ತೇನೆ. ಕಾಲಕ್ರಮದಲ್ಲಿ ನಮ್ಮ ಅಂದಿನ ನಿಲುವು ಸರಿ ಎಂದು ಈಗ ಸಾಬೀತಾಗಿದೆ. ಆದರೆ ಜ್ಞಾನಿಗಳಾದ ವಿದೇಶ ಮಂತ್ರಿಗಳ ನಿಲುವನ್ನು ಬದುಕಿನ ವಾಸ್ತವಗಳು ತಿರಸ್ಕರಿಸಿವೆ; ಹಾಗೆಂದ ಮಾತ್ರಕ್ಕೆ ವಿದೇಶ ಮಂತ್ರಾಲಯದಲ್ಲಿ ಇರುವುದೆಲ್ಲವೂ ತಪ್ಪೆಂದು ನನ್ನ ಇಂಗಿತವಲ್ಲ, ಅದು ಹಾಗೆನ್ನುವುದು ನನ್ನ ಉದ್ದೇಶವೂ ಅಲ್ಲ.

ದುಃಖದ ಸಂಗತಿಯೆಂದರೆ, ನಮ್ಮ ವಿದೇಶ ಮಂತ್ರಿಗಳು ಅಮೇರಿಕೆಯ ಶ್ವೇತ ಭವನಕ್ಕೆ ಹೋಗಿ, ಅಲ್ಲಿಯ ಅಧ್ಯಕ್ಷರ ಮುಖ ನೋಡಿದೊಡನೆಯೇ - ಕೆಲವೊಮ್ಮೆ ಮೋಸ ಹೋಗುತ್ತಾರೆ. ತಾವು ಯಾವುದೋ ದೈವ ಭೋಧಕನ ಸಮ್ಮುಖದಲ್ಲಿ ನಿಂತಿದ್ದೇವೆಂದು ಭಾವಿಸುತ್ತಾರೆ ; ಅಧ್ಯಕ್ಷನ ಬಾಯಿಯಿಂದ ಬರುವ ಪ್ರತಿಯೊಂದು ಮಾತನ್ನು ದಿವ್ಯ ಆಶೀರ್ವಾದವೆಂದು ಪರಿಗಣಿಸಿ, ಅರ್ಥವಿಲ್ಲದ ಆಲಾಪದಂತೆ ಮಾತನಾಡತೊಡಗುತ್ತಾರೆ; ಆದ್ದರಿಂದ, ನಾವು ನಮ್ಮ ದೇಶದ ಬಗ್ಗೆ ಇಟ್ಟುಕೊಂಡಿರುವ ಎಚ್ಚರ ದುರ್ಬಲಗೊಳ್ಳುತ್ತದೆ, ಆದ್ದರಿಂದ, ನಮ್ಮ ಜನತೆಯ ಐಕ್ಯತೆ ಮತ್ತು ಘನತೆಗೆ ಚ್ಯುತಿಯುಂಟಾಗುತ್ತದೆ, ಇದಾಗಬಾರದು.

ಮೇಡಂ ಅವರೆ, ಅದೇ ಭೇಟಿಯ ವೇಳೆಯಲ್ಲಿ ಮಿ. ರೆಸ್ಸಿಂಜರ್ ಹೇಳಿದ್ದರು ; "ಪಾಕಿಸ್ತಾನದ ಯುದ್ಧಾನಂತರ ಭಾರತದೊಂದಿಗಿನ ಸಂಬಂಧಗಳು ಈಗಾಗಲೇ ಸುವ್ಯವಸ್ಥಿತವಾಗಿ ಸುಧಾರಿಸಿವೆ".

1973ರ 74ರಲ್ಲಿ ಶ್ರೀ ಟಿ.ಎನ್. ಕೌಲ್ ಅವರು ಅಮೇರಿಕಾವನ್ನು ಹಾಡಿ ಹೊಗಳಿ, ಹೆಚ್ಚು ಕಡಿಮೆ ಪ್ರತಿದಿನವೂ ಹೇಳಿಕೆಗಳನ್ನು ಕೊಡುತ್ತಿದ್ದುದು ಎಂಬುದು ನಿಮಗೆ ನೆನಪಿರಬಹುದು.

ಅವರು ಮಿ. ರೆಸ್ಸೆಂಜರ್ ನಮ್ಮ ದೇಶದ " ತುಂಬಾ ಪ್ರಿಯ ಹಾಗೂ-ನೆಚ್ಚಿನ ಗೆಳೆಯರೆಂದು" ಹೇಳಿದ್ದಾಗಿ ವರದಿಯಾಗಿತ್ತು ; ಅಷ್ಟೆಯಲ್ಲ, ಪಾಕಿಸ್ತಾನದ ಕಡೆಗೆ ಇದ್ದ "ವಾಲುವಿಕೆ" ಕೂಡ ಮಾಯವಾಗಿದೆ ಎಂದು ಹೇಳಿದ್ದಾಗಿ ವರದಿಯಾದದ್ದನ್ನು ನೆನಪಿಸಿಕೊಳ್ಳಬಹುದು. ಅದರ ಅರ್ಥವೇನೆಂದು ನನಗೆ ಗೊತ್ತಿಲ್ಲ, ಅದೇ ಶಬ್ದ ಬಳಸಿ ಹೇಳುವುದಾದರೆ, ಆ "ವಾಲುವಿಕೆ" ಎಂಬುವುದು ಒಂದು ಇದ್ದಿದ್ದರೆ, ಅದು ಹೋಗಿಲ್ಲ, ಅಷ್ಟೇಯಲ್ಲ, ಅದಕ್ಕೆ ವ್ಯತಿರಿಕ್ತವಾಗಿ, ಪರಸ್ಪರ ಅಪ್ಪುಗೆ ಆರಂಭವಾಗಿದೆ ಎಂಬುದು ಶ್ರೀ ಚೌವ್ಹಾಣ್ ಅವರಿಗೇ ಗೊತ್ತಿಲ್ಲ. ಈ ಪರಸ್ಪರ ಅಪ್ಪುಗೆಯ ಪರಿಣಾಮವಾಗಿಯೇ ಹಡಗು-ಹಡಗುಗಟ್ಟಲೆ ಶಸ್ತ್ರಾಸ್ತ್ರಗಳು ಪಾಕಿಸ್ತಾನಕ್ಕೆ ಸರಬರಾಜು ಆಗುತ್ತಿವೆ. ಇವೆಲ್ಲ ಶಸ್ತ್ರಾಸ್ತ್ರಗಳು ಇನ್ನೂ ಕೆಲವು ದೇಶಗಳ ಜೊತೆಗೆ ನಮ್ಮ ದೇಶದ ಕಡೆಗೂ ಮುಖಮಾಡಿ ನಿಂತಿವೆ; ಆದ್ದರಿಂದ ನಾವು ತುಂಬಾ ಎಚ್ಚರಿಕೆಯಿಂದ ಇರಬೇಕಾಗಿದೆ. ನಾವು ಪ್ರಸಕ್ತ ಸ್ಥಿತಿಯ ಚಿಂತನೆ ನಡೆಸುವಾಗ, ಅಮೇರಿಕೆಯು ಜಾಗತಿಕ ಮಟ್ಟದಲ್ಲಿ ತಳೆಯುತ್ತಿರುವ ನಿಲುವಿನ ವಿಶಾಲ ಸಂದರ್ಭದ ಹಿನ್ನಲೆಯಲ್ಲಿ ಚಿಂತನೆ ನಡೆಸಬೇಕಾಗಿದೆ. ವಿಶೇಷವಾಗಿ, ಅದು ದಕ್ಷಿಣ ಏಷ್ಯ ಮತ್ತು ತೃತೀಯ ಜಗತ್ತಿನ ರಾಷ್ಟ್ರಗಳ ವಿರುದ್ಧ ಮಾಡುತ್ತಿರುವ ಸಂಚನ್ನು ಗಮನದಲ್ಲಿಟ್ಟುಕೊಂಡೇ ನಾವು ಜಿಜ್ಞಾಸೆ ನಡೆಸಬೇಕಾಗಿದೆ. ನಾವು ತೃತೀಯ ಜಗತ್ತಿನ ಒಂದು ಹೆಮ್ಮೆಯ ರಾಷ್ಟ್ರವಾಗಿದ್ದೇವೆ. ಈ ದೃಷ್ಟಿಯಿಂದಲೇ ಸದ್ಯದ ಪರಿಸ್ಥಿತಿಯನ್ನು ನಾವು ವಿಮರ್ಶಿಸಬೇಕು. ವಿಯಟ್ನಾಂದಲ್ಲಿ ಅಮೇರಿಕೆಯು ತನ್ನ ದುರಾಕ್ರಮಣದ ಕಾರ್ಯಾಚರಣೆಯನ್ನು ನಡೆಸುವುದರ ಜೊತೆಗೆ ನೇರವಾಗಿ ವಿಯಟ್ನಾಂದ ಮೇಲೆ ತನ್ನ ಬಾಂಬ್‌ಗಳ ಧಾಳಿ ನಡೆಸಿತು. ವಿಯಟ್ನಾಂನ ಕ್ರಾಂತಿಗಾಗಿ ಹಂಗಾಮಿ ಸರ್ಕಾರದ ಮೇಲೆ ತನ್ನ ವ್ಯಕ್ತಿತ್ವವನ್ನು ಪ್ರದರ್ಶಿಸಿತು. ಅವರು ಪ್ರತಿದಿನವೂ 1973ರ ಪ್ಯಾರಿಸ್ ಒಪ್ಪಂದವನ್ನು ಉಲ್ಲಂಘಿಸುತ್ತಿದ್ದಾರೆ ; ಅವರು ಯಾವು- ಯಾವುದಕ್ಕೆ ಬದ್ಧರೆಂದು ಸಹಿ ಹಾಕಿದ್ದಾರೆಯೋ ಅದೆಲ್ಲವನ್ನು ಉಲ್ಲಂಘಿಸುತ್ತಿದ್ದಾರೆ. ಅವರು ಕಾಂಬೋಡಿಯಾದ ಮೇಲೆ ಮಹಾ ಕಾರ್ಯಾಚರಣೆಯನ್ನು ಆರಂಭಿಸಿದ್ದಾರೆ. ಅವರ ಸೇನಾಪಡೆ ಈಗಾಗಲೇ ಅಲ್ಲಿ ಹೋಗಿ ಇಳಿದಿದೆ; ಎಂದು ವರದಿಯಾಗಿದೆ. ಇನ್ನೂ ತೈವಾನಿನ ಸೇನಾಪಡೆ ಆ ದಾರಿಯಲ್ಲಿ ಹೆಜ್ಜೆ ಹಾಕಲಿವೆ. ನವೆಂಬರ್ ತಿಂಗಳಲ್ಲಿ ಅವರು ಹಿಂದೂ ಮಹಾಸಾಗರದಲ್ಲಿ ತಮ್ಮ ಮಿಲಿಟರಿ ಕವಾಯತು ನಡೆಸಿದ್ದರು. ಮಹಾಸಾಗರದ ಈ ಭಾಗವನ್ನು ಮಿಲಿಟರೀಕರಣಗೊಳಿಸುವ ಉದ್ದೇಶ ಅವರಿಗೆ ಇದೆ. ಅವರು ಈಗಾಗಲೇ ಡಿಗೋವಾರ್ಸಿಯಾದಲ್ಲಿ ತಮ್ಮ ನೆಲೆಯನ್ನು ಸ್ಥಾಪಿಸಿದ್ದಾರೆ. ಅಷ್ಟೇಯಲ್ಲ, ಅವರು ಎಲ್ಲಾ ಕಡೆಗೂ ತಮ್ಮ ಮಿಲಿಟರಿ ನೆಲೆಗಳ ಸರಣಿಯನ್ನೇ ನಿರ್ಮಿಸುತ್ತಿದ್ದಾರೆ; ನಮ್ಮ ದೇಶಕ್ಕೆ ಭಯವೊಡ್ಡುವ ದೃಷ್ಟಿಯಿಂದ ಅವರು ಪರ್ಶಿಯನ್ ಗಲ್ಫ್ ಸುತ್ತಲೂ ಸುಳಿದಾಡುತ್ತಿದ್ದಾರೆ.

ಅಮೇರಿಕೆಯ ಈ ಚಟುವಟಿಕೆಗಳು ತೃತೀಯ ಜಗತ್ತಿನ ರಾಷ್ಟ್ರಗಳ ವಿರುದ್ಧವೇ ಹೆಚ್ಚಾಗಿ ನಡೆಯುತ್ತಿವೆ ಎಂಬುದು ತಮಗೆ ಈಗ ಚೆನ್ನಾಗಿ ಗೊತ್ತಿದೆ. ವಿಶೇಷವಾಗಿ, ಭಾರತ

ಮತ್ತು ಅರಬ್ ಜಗತ್ತಿನ ವಿರುದ್ಧ ಅವರ ಚಟುವಟಿಕೆಗಳು ಗುರಿಯಿಟ್ಟಿವೆ. ಯಾಕೆಂದರೆ, ಇವು ಸಾಮ್ರಾಜ್ಯಶಾಹಿ ವಿರೋಧಿ ರಾಷ್ಟ್ರಗಳಾಗಿವೆ. ಅರಬ್ ರಾಷ್ಟ್ರಗಳಿಗೆ ಒಡ್ಡಲಾಗುತ್ತಿರುವ ಬೆದರಿಕೆ; ತೀರ ಸ್ಪಷ್ಟವಾಗಿದೆ; ಮತ್ತು ಅದಕ್ಕೆ ತನ್ನದೆ ಆದ ಮಹತ್ವವಿದೆ. 1974ರ ಸೆಪ್ಟೆಂಬರ್ 23ರಂದು ಡೆಟ್ರಾಯಿಟ್ "ವರ್ಲ್ಡ್ ಎನರ್ಜ್ ಕಾನ್‌ಫರೆನ್ಸ್"ನಲ್ಲಿ ಮಾಡಿದ ತಮ್ಮ ಭಾಷಣದಲ್ಲಿ ಅಧ್ಯಕ್ಷ ಫೋರ್ಡ್ ಅವರು ಹೀಗೆ ಘೋಷಿಸಿದ್ದರು.

"ಕೃತ್ರಿಮವಾಗಿ, ಹಸ್ತಕ್ಷೇಪ ಮಾಡುವ ಮೂಲಕ ತೈಲದ ಬೆಲೆಗಳನ್ನು ನಿಯಂತ್ರಿಸುವ ಮತ್ತು ಜಾಗತಿಕ ಮಾರುಕಟ್ಟೆಯನ್ನು ಉದ್ವಸ್ಥಗೊಳಿಸುವ ತೀರ್ಮಾನಗಳು ತಮ್ಮ ಧೋರಣೆಗಳ ಮೇಲೆ ಪ್ರಭಾವ ಬೀರುವುದಕ್ಕೆ ಸಾರ್ವಭೌಮ ರಾಷ್ಟ್ರಗಳು ಅವಕಾಶ ಮಾಡಿಕೊಡುವುದು ಸಾಧ್ಯವಿಲ್ಲ".

ಅವರು ಮುಂದುವರೆದು ಹೇಳಿದ್ದರು;

"ಜಾಗತಿಕ ಇತಿಹಾಸದ ಆದಿಯಿಂದಲೂ ಅನೇಕ ರಾಷ್ಟ್ರಗಳು ನೀರು, ಆಹಾರ, ಅಥವಾ ಅನುಕೂಲಕರವಾದ ಭೂಮಾರ್ಗ ಅಥವಾ ಸಮುದ್ರ ಮಾರ್ಗದ ಸೌಲಭ್ಯಗಳಂತಹ ನೈಸರ್ಗಿಕ ಸಂಪತ್ತಿಗಾಗಿಯೇ ಸಾಕಷ್ಟು ಯುದ್ಧಗಳನ್ನು ಮಾಡಿದ್ದೇವೆ".

ಇದು ತೈಲ ಉತ್ಪಾದನೆಯ ಅರಬ್ ರಾಷ್ಟ್ರಗಳಿಗೆ ಖುಲ್ಲಾ ಒಡ್ಡಲಾಗಿರುವ ಬೆದರಿಕೆಯಲ್ಲವೇ? ಅಲ್ಲವೆಂದಾದರೆ, ಅದು ಮತ್ತೇನು? ಇಂದಿನ ಆಶ್ಚರ್ಯಕರ ಸಂಗತಿಯೆಂದರೆ, ಇಂದಿನ ಬದಲಾದ ಅಂತರಾಷ್ಟ್ರೀಯ ಪರಿಸ್ಥಿತಿಯಲ್ಲಿಯ ಜನರಲ್ ಫೋರ್ಡ್ ಅವರು ಇತ್ತೀಚೆಗೆ ಸ್ವತಂತ್ರ್ಯವಾಗಿರುವ ಅರಬ್ ರಾಷ್ಟ್ರಗಳ ವಿರುದ್ಧ ಸಶಸ್ತ್ರ ಹಸ್ತಕ್ಷೇಪದ ಧರ್ಮ ಹಾಕುವ ಧೈರ್ಯ ತೋರಿಸುತ್ತಿದ್ದಾರೆ. ಸ್ವಾತಂತ್ರ್ಯ ಸಾರ್ವಭೌಮ ರಾಷ್ಟ್ರವಾಗಿರುವ ಅರಬ್ ದೇಶಗಳು ತಮ್ಮ ಸಂಪನ್ಮೂಲಗಳನ್ನು ತಮ್ಮ ಮನಬಂದಂತೆ ಬಳಸುವ ಹಕ್ಕು ಪಡೆದಿವೆ. ಈಗ ಅಮೇರಿಕೆಯು ಪಾಕಿಸ್ತಾನ, ಡಿಗೋಗಾರ್ಸಿಯಾ ಮತ್ತು ಇತರ ಪ್ರದೇಶಗಳಲ್ಲಿ ನಡೆಸುತ್ತಿರುವ ಕಾರ್ಯಾಚರಣೆಗಳಿಗೂ ಅರಬ್ ದೇಶದ ವಿರುದ್ಧ ಒಡ್ಡಿರುವ ಬೆದರಿಕೆಗೂ ಇರುವ ಸಂಬಂಧವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಇವೆಲ್ಲವು ಅವರ ಜಾಗತಿಕ ಮಿಲಿಟರಿ ತಂತ್ರಗಾರಿಕೆಯ ಭಾಗಗಳೇ ಆಗಿವೆ. ಭಾರತದ ಮಿತ್ರರ ಮೇಲೆ ಅಮೇರಿಕೆಯ ಅಧ್ಯಕ್ಷನಂತಹ ವ್ಯಕ್ತಿಯೇ ಧಾಳಿ ನಡೆಸಿ, ಭಯ ಒಡ್ಡುತ್ತಿದ್ದಾನೆ. ನಾನು ಇದೆಲ್ಲವನ್ನು ಯಾಕೆ ಹೇಳುತ್ತಿದ್ದೇನೆಂದರೆ, ಇದಕ್ಕೆ ಅತ್ಯಂತ ಮಹತ್ವವಿದೆ. ಇದಕ್ಕೆ ಸಂಬಂಧಿಸಿ ನಾನು ಇನ್ನೂ ಕೆಲವು ವಿಷಯಗಳನ್ನು ನಿಮ್ಮ ಮುಂದೆ ಇಡಬಯಸುತ್ತೇನೆ. ಅವರು ಸಹಜವಾಗಿಯೇ ಅರಬ್ ಜಗತ್ತನ್ನು ಒಡೆದು ಛಿದ್ರಗೊಳಿಸಲು ಬಯಸುತ್ತಿದ್ದಾರೆ. ಅದರ ಅವಿಭಾಜ್ಯ ಅಂಗವೇ

ಈ ಬೆದರಿಕೆ. ಅವರ ತಂತ್ರೋಪಾಯದ ಭಾಗವಾಗಿಯೇ ಇದೆಲ್ಲವನ್ನು ನಡೆಸಲಾಗುತ್ತಿದೆ. ಇರಾನ್‌ಗೆ ಈಗಾಗಲೇ ಸಾಕಷ್ಟು ಶಸ್ತ್ರಾಸ್ತ್ರಗಳನ್ನು ಒದಗಿಸಲಾಗಿದೆ. ಈ ಶಸ್ತ್ರ ಸರಬರಾಜಿನ ಕೆಲಸ ಇನ್ನೂ ಮುಂದುವರೆಯುತ್ತಲೇ ಇದೆ. ಅಮೇರಿಕೆಯ 'ಟೈಂ ಮ್ಯಾಗ್ನಿನ್' ಪ್ರಕಾರ, ಹಾಗೂ ಇತರ ಮೂಲಗಳ ಪ್ರಕಾರ ಇರಾನ್ 7,600 ಮಿಲಿಯನ್ ಡಾಲರ್ ಬೆಲೆಯ ಶಸ್ತ್ರಾಸ್ತ್ರಗಳನ್ನು ಖರೀದಿಸಿದೆ. ಜೊತೆಗೆ ಈ ಖರೀದಿ ಕ್ರಿಯೆ ಇನ್ನು ಮುಂದುವರೆಯುತ್ತಲೇ ಇವೆ. ಇದಲ್ಲದೆ ಇಸ್ರೇಲ್‌ಗೂ ಸಾಕಷ್ಟು ಶಸ್ತ್ರಾಸ್ತ್ರಗಳು ಈಗಾಗಲೇ ತಲುಪಿವೆ. 1974 - 75ರ ವರ್ಷಕ್ಕೆ ಇಸ್ರೇಲ್ 2,000 ಮಿಲಿಯನ್ ಡಾಲರ್ ಬೆಲೆಯ ಶಸ್ತ್ರಾಸ್ತ್ರಗಳನ್ನು ಖರೀದಿಸುವ ಸಲುವಾಗಿ ಆದೇಶ ನೀಡಿದೆ. ಇವೆಲ್ಲ ಶಸ್ತ್ರಾಸ್ತ್ರಗಳೂ ಹೆಚ್ಚಾಗಿ ಅಮೇರಿಕೆಯಿಂದಲೇ ಬರುತ್ತಿವೆ ಎಂದು ಬೇರೆ ಹೇಳಬೇಕಿಲ್ಲ. ತೃತೀಯ ಜಗತ್ತಿನ ರಾಷ್ಟ್ರಗಳ ವಿರುದ್ಧವೇ ಅಮೇರಿಕೆ ತನ್ನ ಆಕ್ರಮಣಕಾರಿ ಸನ್ನದ್ಧತೆಯನ್ನು ಮಾಡಿಕೊಳ್ಳುತ್ತಿದೆ, ಅದರಲ್ಲಿಯೂ ವಿಶೇಷವಾಗಿ, ಭಾರತಕ್ಕೆ ತನ್ನ ಗುರಿ ಇಡುತ್ತಿದೆ. ಈ ಸಂಗತಿಯನ್ನು ಬಹು ಗಂಭೀರವಾಗಿ ನಿಮ್ಮ ಗಮನಕ್ಕೆ ತರುತ್ತಿದ್ದೇನೆ. ಭಾರತದ ಮೇಲೆಯೇ ಯಾಕೆ ಅಮೇರಿಕೆಯ ಕೆಂಗಣ್ಣು? ಇದಕ್ಕೆ ಕಾರಣವೇನು ಗೊತ್ತೆ?

ಭಾರತವೇ ಅವರ ಮುಖ್ಯ ಗುರಿಯಾಗಲು ಕಾರಣ; ನಾವು ಸಾಮ್ರಾಜ್ಯಶಾಹಿ ವಿರೋಧಿ ಮಹಾನ್ ಪರಂಪರೆಯ ಒಂದು ಬೃಹತ್ ರಾಷ್ಟ್ರವಾಗಿದ್ದೇವೆ. ಅಷ್ಟೇಯಲ್ಲ, ಈ ಭಾರತದಲ್ಲಿ ನಾವು ಅತ್ಯಂತ ಆಯಕಟ್ಟಿನ ಸ್ಥಾನದಲ್ಲಿದ್ದೇವೆ. ಇದಕ್ಕೂ ಮಿಗಿಲಾಗಿ, ನಮ್ಮ ಸುಸಂಬದ್ಧ ವಿದೇಶ ನೀತಿಯ ಮೂಲಕ, ಸಮಾಜವಾದಿ ರಾಷ್ಟ್ರಗಳ ಇತರ ಶಾಂತಿ ಪರಶಕ್ತಿಗಳ ಜೊತೆಗೂಡಿ ಜಾಗತಿಕ ಬೆಳವಣಿಗೆಯನ್ನು ವಿಶೇಷವಾಗಿ ರೂಪಿಸುವಲ್ಲಿ ನಾವು ಅನೇಕ ರೀತಿಯಿಂದ ಮಹತ್ವದ ಪಾತ್ರ ವಹಿಸುತ್ತಿದ್ದೇವೆ. ನಮ್ಮ ದೇಶದ ಒಳಗೂ ಹೊರಗೂ ವಸಾಹತುವಾದ, ನವವಸಾಹತುವಾದ ವಿರುದ್ಧ ವಿಶೇಷವಾಗಿ ನವವಸಾಹತುವಾದದ ವಿರುದ್ಧ ನಾವು ಸಮರ ಸಾರಿದ್ದೇವೆ. ಸಂಯುಕ್ತ ರಾಷ್ಟ್ರದಲ್ಲಿಯಾಗಲಿ, ಅಥವಾ ಅಲಿಪ್ತ ರಾಷ್ಟ್ರಗಳ ಶೃಂಗ ಸಭೆಯಲ್ಲಾಗಲೀ, (ಅಲ್ಜಿಯರ್ಸ್)ನಲ್ಲಿರುವಂತೆ ನಮ್ಮ ದೇಶ ಸಹಜವಾಗಿಯೇ ಹೊಸದಾಗಿ - ಸ್ವತಂತ್ರ್ಯಗೊಂಡ ರಾಷ್ಟ್ರಗಳ ಸಾರ್ವಭೌಮ ಹಕ್ಕನ್ನು ರಕ್ಷಿಸುವ ದೃಢವಾದ ನಿಲುವನ್ನು ತೆಗೆದುಕೊಂಡಿದೆ. ಇವೆಲ್ಲ ಕಾರಣಗಳಿಂದಾಗಿ ಭಾರತವು ಅಮೇರಿಕೆಯ ಕೆಂಗಣ್ಣಿಗೆ ಗುರಿಯಾಗುತ್ತಿರುವುದು ಸಹಜವಾಗಿದೆ; ಭಾರತವನ್ನು ಹೆದರಿಸಿ, ಬೆದರಿಸಿ, ಹದ್ದುಬಸ್ತಿನಲ್ಲಿ ಇಡದೆ ಹೋದರೆ, ದಕ್ಷಿಣ ಏಷ್ಯಾ ಭಾಗದಲ್ಲಿ ತಮ್ಮ ಅಧಿನಾಯಕತ್ವ ಸಂಸ್ಥಾಪಿಸುವುದು ಸಾಧ್ಯವಿಲ್ಲ ಎಂಬ ಸಂಗತಿ ಅಮೇರಿಕೆಯ ಸಾಮ್ರಾಜ್ಯಶಾಹಿಗಳಿಗೆ ಚೆನ್ನಾಗಿ ಗೊತ್ತಿದೆ. ಭಾರತವನ್ನು ಬಗ್ಗುಬಡಿಯುವ ಹೊರತು, ಈ ಭಾಗದಲ್ಲಿ ತಮ್ಮ ಬೇಳೆ ಬೇಯಲಾರದು; ಎಂಬುದು ಅವರಿಗೆ ಖಚಿತವಾಗಿದೆ. ಆದ್ದರಿಂದಲೇ ಅವರು ಭಾರತವನ್ನು ತಮ್ಮ ಮುಖ್ಯ ಗುರಿಯಾಗಿ ಮಾಡಿಕೊಂಡು ಪಾಕಿಸ್ತಾನಕ್ಕೆ ಮತ್ತೆ ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡುತ್ತಿದ್ದಾರೆ. ಜೊತೆಗೆ, ಹಿಂದೂ ಮಹಾಸಾಗರದಲ್ಲಿ ತಮ್ಮ ಮಿಲಿಟರಿ ನೆಲೆಯನ್ನು ಸ್ಥಾಪಿಸಲು

ಪ್ರಯತ್ನಿಸುತ್ತಿದ್ದಾರೆ. ಇವೆಲ್ಲ ಸಂಗತಿಗಳನ್ನು ಗಮನದಲ್ಲಿಟ್ಟುಕೊಂಡು ನಾವು ಅಮೇರಿಕೆಯ ಚಟುವಟಿಕೆಯನ್ನು ವಿಮರ್ಶಿಸಬೇಕಾಗಿದೆ. ಇದು ಅತ್ಯಂತ ತುರ್ತಿನ ಕೆಲಸ; ಈ ವಿಷಯದಲ್ಲಿ, ವಿಳಂಬಕ್ಕೆ ಅವಕಾಶ ಕೊಡುವಂತಿಲ್ಲ. ದಕ್ಷಿಣದ ಬಣ (ಸೌತ್‌ಬ್ಲಾಕ್) ವು ಬದುಕಿನ ಈ ಸತ್ಯ ಸಂಗತಿಯನ್ನು ಮನಗಂಡು ಅದರ ಕುರಿತು ಸರಿಯಾದ ತಿಳುವಳಿಕೆ ಹೊಂದಿ, ಸೂಕ್ತ ಕಾರ್ಯಾಚರಣೆಗೆ ದಾರಿ ಸುಗಮವಾಗುವ ರೀತಿಯಲ್ಲಿ ಇದೆಲ್ಲವನ್ನೂ ವ್ಯಾಖ್ಯಾನಿಸಬೇಕಾಗಿದೆ.

ಅಮೇರಿಕೆಯ ಶಸ್ತ್ರಾಸ್ತ್ರಗಳ ಉದ್ದೇಶ ಭಾರತ ಮತ್ತು ಅಫ್ಘಾನಿಸ್ತಾನದ ವಿರುದ್ಧ ಬಳಸುವುದಾಗಿದೆ. ನಾವು ಯಾರೂ ಪಾಕಿಸ್ತಾನಕ್ಕೆ ಬೆದರಿಕೆ ಒಡ್ಡಿಲ್ಲ, ಬದಲಾಗಿ ಅದರೊಂದಿಗೆ ಸಿಮ್ಲಾ ಒಪ್ಪಂದ ಮಾಡಿದ್ದೇವೆ. ಅಷ್ಟೇ ಏಕೇ, ಯುದ್ಧ ಮಾಡೋದಿಲ್ಲ ಎಂಬ ಒಪ್ಪಂದವನ್ನು ಮಾಡಿಕೊಂಡಿದ್ದೇವೆ. ಪಾಕಿಸ್ತಾನದ ಜೊತೆಗೆ ನಮಗೆ ಯುದ್ಧ ಬೇಕಿಲ್ಲ, ನಾವು ಶಾಂತಿಯುತ ಧೋರಣೆಗಳನ್ನು ಅನುಸರಿಸುತ್ತಿದ್ದೇವೆ; ಮತ್ತು ಸಿಮ್ಲಾ ಒಪ್ಪಂದ ಶಾಂತಿಯುತವಾಗಿ ಜಾರಿಗೊಳ್ಳಬೇಕೆಂದು ಬಯಸುತ್ತಿದ್ದೇವೆ. ಅಫ್‌ಘಾನಿಸ್ತಾನದಲ್ಲಿಯೂ ಇದೇ ಮಾತನ್ನು ಹೇಳಬಹುದು. ಅದು ಕೂಡಾ ಪಾಕಿಸ್ತಾನದೊಂದಿಗೆ ಶಾಂತಿಯುತ, ಸಹಜ ಸಂಬಂಧಗಳನ್ನು ಬಯಸುತ್ತದೆ. ಅದರೆ, ಪಾಕಿಸ್ತಾನದ ಆಳರಸರು ಶಾಂತಿಪ್ರಿಯ, ಸ್ನೇಹ ಹಸ್ತದ, ಈ ರಾಷ್ಟ್ರದ ವಿರುದ್ಧ ಮೇಲಿಂದ ಮೇಲೆ ಕಾಲು ಕೆದರಿ ನಿಲ್ಲುತ್ತಿದ್ದಾರೆ.

ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರ ಸರಬರಾಜು ಮಾಡುವ ಅಮೇರಿಕೆಯ ಈ ತೀರ್ಮಾನದಿಂದಾಗಿ ಸಿಮ್ಲಾ ಒಪ್ಪಂದದ ಉಲ್ಲಂಘನೆಯಾಗಿರುವುದು ಸ್ಪಷ್ಟವಾಗಿದೆ. ಸಿಮ್ಲಾ ಒಪ್ಪಂದದ ಮೊದಲನೆಯ ವಿಧಿಯನ್ನೇ ಉಲ್ಲಂಘಿಸಲಾಗಿದೆ. ಅ ಒಪ್ಪಂದದಲ್ಲಿ ಏನು ಹೇಳಲಾಗಿದೆ ಎಂಬುದನ್ನು ಸನ್ಮಾನ್ಯ ಸದಸ್ಯರ ಗಮನಕ್ಕೆ ನಾನು ತರಬಯಸುತ್ತೇನೆ. ಆ ಒಪ್ಪಂದದ ಘೋಷಣೆ ತುಂಬ ಸರಳವಾಗಿದೆ. ಅದರ ಪ್ರಕಾರ ಎರಡೂ ರಾಷ್ಟ್ರಗಳು ದ್ವಿಪಕ್ಷೀಯ ಸಂಬಂಧಗಳನ್ನು ಶಾಂತಿಯ ಸಂಪಾದನೆಗೆ ಬಳಸಬೇಕೆಂಬುದಾಗಿದೆ, ಒಪ್ಪಂದದ ಮೊದಲನೆಯ ವಿಧಿ ಹೀಗೆ ಹೇಳುತ್ತದೆ.

ಭಾರತ ಮತ್ತು ಪಾಕಿಸ್ತಾನದ ಸರ್ಕಾರಗಳು ತಮ್ಮ ನಡುವಿನ ಹೊಡೆದಾಟ ಮತ್ತು ಸಂಘರ್ಷವನ್ನು ಕೊನೆಗೊಳಿಸಿ, ಸ್ನೇಹಯುತ, ಸೌಹಾರ್ದಯುತವಾದ ಸಂಬಂಧಗಳನ್ನು ಸ್ಥಾಪಿಸಲು ತೀರ್ಮಾನಿಸಿವೆ. ಈ ಉಪಖಂಡದಲ್ಲಿ ನಿರಂತರ ಶಾಂತಿ ಸ್ಥಾಪಿಸಿ, ಎರಡು ರಾಷ್ಟ್ರಗಳು ಇನ್ನು ಮುಂದೆ ತಮ್ಮ ಶಕ್ತಿ ಸಂಪನ್ಮೂಲಗಳನ್ನು ತಮ್ಮ ಜನತೆಯ ಕಲ್ಯಾಣಕ್ಕಾಗಿ ಮುಡುಪಾಗಿಡಲು ತೀರ್ಮಾನಿಸಿವೆ.

ಇದು ಆ ಒಪ್ಪಂದದ, ಆದರೆ ಅಮೇರಿಕೆಯು ಪಾಕಿಸ್ತಾನವನ್ನು ಎಂತಹ ಸ್ಥಿತಿಗೆ ತಂದು, ಸಿಲುಕಿಸಿದೆಯೆಂದರೆ ಅದು ಈ ಅಂತರರಾಷ್ಟ್ರೀಯ ಒಪ್ಪಂದವನ್ನು ನಾಚಿಕೆಯಿಲ್ಲದೆ

ಉಲ್ಲಂಘಿಸುತ್ತಿವೆ. ರೆಸ್ಸೆಂಜರ್ ಮಾತ್ರ ಈ ಒಪ್ಪಂದಕ್ಕೆ ಬಾಯಿ ಮಾತಿನ ಸಹಾನುಭೂತಿ ತೋರಿಸುತ್ತಲೇ ಇದ್ದಾರೆ. ಆದರೆ ಅವರ ಕೃತಿ ಮಾತ್ರ ಸಿಮ್ಲಾ ಒಪ್ಪಂದದ ಆಸೆಯನ್ನು ನಾಶಗೊಳಿಸುತ್ತಲೇ ಇದೆ. ಅವರ ಉದ್ದೇಶವೂ ಇದೆ ಆಗಿದೆ; ಶಾಂತಿ, ಸದ್ಭಾವದ ಸತ್ವವನ್ನು ಧ್ವಂಸಗೊಳಿಸುವುದು - ಅವರ ಪರಮ ಗುರಿಯಾಗಿದೆ. ಸಿಮ್ಲಾ ಒಪ್ಪಂದದಲ್ಲಿ ನಮಗೆ ದೃಢವಾದ ನಂಬುಗೆಯಿದೆ. ಆದ್ದರಿಂದ ನಾವು ಅದರಿಂದ ದೂರ ಸರಿಯಲು ಬಯಸುವುದಿಲ್ಲ. ಶಾಂತಿ ಮತ್ತು ಸೌಹಾರ್ದದ ಈ ಒಪ್ಪಂದದ ಪದ್ಧತಿಯಲ್ಲಿ ಸಾಗುವ ಅಚಲ ನಿಷ್ಠೆ ನಮ್ಮದು. ಆದ್ದರಿಂದ, ಪದಭ್ರಷ್ಟರಾಗುವ ಮನಸ್ಸು ನಮಗೆ ಇಲ್ಲ ಅವಶ್ಯ ಬಿದ್ದರೆ, ಈ ಭಾಗದ ಎಲ್ಲಾ ಶಾಂತಿಪ್ರಿಯ ದೇಶಗಳನ್ನು ಒಗ್ಗೂಡಿಸಿ, ಅಮೇರಿಕಾ ಒಡ್ಡಿರುವ ಈ ಪಂಥ ಆಹ್ವಾನವನ್ನು ನಾವು ಸ್ವೀಕರಿಸಬೇಕಾಗಿದೆ.

ರಾಜಕೀಯವಾಗಿ, ಇದು ನಮ್ಮ ದೇಶದ ಮೇಲೆ ಒತ್ತಡ ಹೇರುವ ತಂತ್ರವಾಗಿದೆ ಎಂಬುದು ನಿಚ್ಚಳ. ನಮ್ಮ ದೇಶದಲ್ಲಿಯ ಪ್ರತಿಗಾಮಿ ಮತ್ತು ಸಾಮ್ರಾಜ್ಯಶಾಹಿಪರ ಶಕ್ತಿಗಳಿಗೆ ಉತ್ತೇಜನ ನೀಡುವ ಉದ್ದೇಶ ಇದಾಗಿದೆ. ಈ ವಿಷಯ ಕುರಿತು ತುಸು ನಂತರ ನಾನು ವಿವರವಾಗಿ ಮಾತಾಡುತ್ತೇನೆ. ಅಮೇರಿಕೆಯ ರಾಜನೀತಿ, ಅದರ ಮಿಲಿಟರಿ ಕಾರ್ಯಾಚರಣೆಯಿಂದ ಭಿನ್ನವಾಗಿಲ್ಲ, ಅಥವಾ ಅದರ ಮಿಲಿಟರಿ ಕಾರ್ಯಾಚರಣೆಯೇ ಅದರ ವಿದೇಶ ನೀತಿಯನ್ನು ರೂಪಿಸುತ್ತದೆ.

ಆರ್ಥಿಕವಾಗಿ, ಅದು ಭಾರತದ ಮೇಲೆ ಹೆಚ್ಚಿನ ಹೊರೆ ಹೇರಬಯಸುತ್ತದೆ, ಎಂಬುದನ್ನು ನಾನು ಸರ್ಕಾರದ ಗಮನಕ್ಕೆ ತರಬಯಸುತ್ತೇನೆ. ಭಾರತವು ತನ್ನ ಸಂಪನ್ಮೂಲಗಳನ್ನು ರಕ್ಷಣೆಗಾಗಿಯೇ ವ್ಯಯ ಮಾಡುವಂತೆ ಒತ್ತಡ ಹೇರುವ ತಂತ್ರ ಇದಾಗಿದೆ. ರಕ್ಷಣೆಗಾಗಿ ಈಗಾಗಲೇ ಪ್ರತಿವರ್ಷ ಸುಮಾರು 2,500 ಕೋಟಿ ರೂಪಾಯಿ ಖರ್ಚು ಮಾಡುತ್ತಿದ್ದೇವೆ. ನಾವು ಇದಕ್ಕಿಂತಲೂ ಹೆಚ್ಚು ಖರ್ಚು ಮಾಡಬೇಕೆಂಬುದು ಅಮೇರಿಕೆಯ ಬಯಕೆ. ಯಾಕೆಂದರೆ, ರಕ್ಷಣಾ ವೆಚ್ಚ ಸರಿದೂಗಿಸುವುದರಲ್ಲಿಯೇ ಹಣ್ಣು ಹಣ್ಣಾಗಿ ಹೋಗುವ ನಾವು, ನಮ್ಮ ಅಭಿವೃದ್ಧಿ ಚಟುವಟಿಕೆಗಳಿಗೆ ಸಂಪನ್ಮೂಲದ ಕೊರತೆಯುಂಟಾಗಿ, ನಮ್ಮ ಆರ್ಥಿಕ ಕ್ಷೇತ್ರ ಕುಸಿಯಬೇಕೆಂಬುದೇ ಅವರ ಹೆಬ್ಬಯಕೆ. ಇಂತಹ ಕ್ರಮಗಳ ಮೂಲಕ ನಮ್ಮ ಆರ್ಥಿಕ ಅಭಿವೃದ್ಧಿಯ ದಾರಿಯಲ್ಲಿ ಸಾಕಷ್ಟು ಸಂಕಟ ಸೃಷ್ಟಿಸಿ, ಬಿಕ್ಕಟ್ಟು ಉಲ್ಬಣಗೊಳ್ಳುವಂತೆ ಮಾಡುವ ಹಿರಿಯಾಸೆ ಅವರದು. ಈ ಎಲ್ಲ ಸಂಗತಿಗಳನ್ನು ಗಮನದಲ್ಲಿಟ್ಟು ನಾವು ಮುನ್ನಡೆಯಬೇಕಾಗಿದೆ.

ಮಿಲಿಟರಿಯ ದೃಷ್ಟಿಯಿಂದ ಅವರು ಈ ಭಾಗದ ಶಕ್ತಿ ಸಮತೋಲನವನ್ನು ಕದಡುವ ಹವಣಿಕೆಯಲ್ಲಿದ್ದಾರೆ, ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರಗಳನ್ನು ಯಾವ ಎಗ್ಗಿಲ್ಲದೆ ಸರಬರಾಜು ಮಾಡಿ,

ಈ ಭಾಗವನ್ನು ಕೃತ್ರಿಮವಾಗಿ, ಒಡೆಯಬೇಕೆಂಬುದು ಅವರ ಆಕಾಂಕ್ಷೆಯಾಗಿದೆ. ಈ ಎಲ್ಲ ಉದ್ದೇಶಗಳನ್ನು ಅವರು ಪಾಕಿಸ್ತಾನದ ಮೂಲಕ ಈಡೇರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಅಮೇರಿಕೆಯ ನೌಕಾ ನೆಲೆಗೂ ಪಾಕಿಸ್ತಾನ ಅವಕಾಶ ಮಾಡಿ ಕೊಡುತ್ತಿದೆ ಎಂದು ತಿಳಿದುಬಂದಿದೆ. ಹೀಗಾದಲ್ಲಿ ಇದು ಅತ್ಯಂತ ವಿಚಿತ್ರ ಹಾಗೂ ಅಷ್ಟೇ ಗಂಭೀರ ಪರಿಸ್ಥಿತಿಯೆಂದು ನಾವು ತಿಳಿಯಬೇಕಿದೆ.

ರಾಜಕೀಯವಾಗಿ ಇದೆಲ್ಲದರ ಅರ್ಥ ಏನೆಂಬುದನ್ನು ನಾನು ಈಗ ಸ್ಪಷ್ಟಪಡಿಸುತ್ತೇನೆ, ರಾಜಕೀಯವಾಗಿ ಅದರ ಅರ್ಥ: ಅಭದ್ರತೆ, ಅಸ್ಥಿರತೆ, ಅಮೇರಿಕೆಯ ಈ ಚಟುವಟಿಕೆಯನ್ನು ಹೊಸದಾಗಿ ಸ್ವತಂತ್ರ್ಯಗೊಂಡ ರಾಷ್ಟ್ರಗಳನ್ನು, ಅಸ್ಥಿರಗೊಳಿಸುವ ಅದರ ರಾಜಕೀಯ ತಂತ್ರಗಾರಿಕೆಯಿಂದ ಭಿನ್ನವಾಗಿ ನೋಡಲು ಸಾಧ್ಯವಿಲ್ಲ. 1974ರ ಸೆಪ್ಟೆಂಬರ್ 16ರಂದು ನಡೆದ ಒಂದು ಪತ್ರಿಕಾಗೋಷ್ಠಿಯಲ್ಲಿ ಅಧ್ಯಕ್ಷ ಜರಾಲ್ಡ್‌ಫೋರ್ಡ್‌ರನ್ನು ಕೇಳಲಾಯಿತು. “ಒಂದು ಸಂವಿಧಾನಬದ್ಧವಾಗಿ ಚುನಾಯಿತರಾದ ಸರ್ಕಾರವನ್ನು ಉರುಳಿಸುವ ಅಥವಾ ಆದೇಶವನ್ನು ಅಸ್ಥಿರಗೊಳಿಸುವ ಹಕ್ಕನ್ನು ಯಾವ ಅಂತರಾಷ್ಟ್ರೀಯ ಕಾಯ್ದೆಯಡಿ ನೀವು ಪಡೆದುಕೊಂಡಿದ್ದೀರಿ? ಕೆನಡಾ ಅಥವಾ ಅಮೇರಿಕೆಯಲ್ಲಿ ಇಂಥದ್ದೇ ಕ್ರಮ ಕೈಗೊಳ್ಳಲು ಸೋವಿಯತ್ ಯೂನಿಯನ್ನಿಗೂ ಇಂತಹ ಹಕ್ಕು ಇದೆಯೇ? ಇದಕ್ಕೆ ಆ ಅಧ್ಯಕ್ಷರ ಉತ್ತರ;” ಯಾವುದೇ ಅಂತರಾಷ್ಟ್ರೀಯ ಕಾಯ್ದೆಯಡಿ ಇಂತಹ ಕ್ರಿಯೆಗೆ ಅವಕಾಶವಿದೆ, ಇಲ್ಲವೆಂದು ಈ ಕುರಿತು ನಾನು ನ್ಯಾಯ ತೀರ್ಮಾನ ನೀಡಬಯಸುವುದಿಲ್ಲ. ಆದರೆ ಚಾರಿತ್ರಿಕವಾಗಿ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಕೂಡ ಇಂತಹ ಕ್ರಮಗಳನ್ನು ಸಂಬಂಧಪಟ್ಟ ರಾಷ್ಟ್ರಗಳ ಹಿತದೃಷ್ಟಿಯಿಂದಲೇ ತೆಗೆದುಕೊಳ್ಳಲಾಗುತ್ತದೆ ಎಂಬುದು ಸರ್ವಮಾನ್ಯವಾದ ಸಂಗತಿಯಾಗಿದೆ.

ಆದ್ದರಿಂದಲೇ, ಅಸ್ಥಿರತೆಯ ಅವರ ಸಿದ್ಧಾಂತ ಅಸ್ತಿತ್ವದಲ್ಲಿದೆ, ಯಾವುದೇ ದೇಶದಲ್ಲಿ ಅಸ್ಥಿರತೆಗೊಳಿಸುವ ಕಾರ್ಯಾಚರಣೆ ನಡೆಸುವ ಹಕ್ಕು ತಮಗೆ ಇದೆ ಎಂಬುದನ್ನು ಅವರು ಆ ಪತ್ರಿಕಾಗೋಷ್ಠಿಯಲ್ಲಿ ಜಗಜ್ಜಾಹೀರಗೊಳಿಸಿದರು. ಸಿ.ಐ.ಎ. ನಿರ್ದೇಶಕರಾಗಿರುವ ಮಿ.ಕಾಲ್ಬಿ, ಈ ಸಂಗತಿಯನ್ನು ಇನ್ನೂ ಇನ್ನೂ ಸ್ಪಷ್ಟವಾಗಿ ಎದೆಗಾರಿಕೆಯಿಂದ ಬಿಚ್ಚಿಟ್ಟಿದ್ದಾರೆ, ಅವರು ಹೇಳಿರುವುದು ತುಂಬಾ ಕುತೂಹಲಕಾರಿಯಾಗಿದೆ.

“ಅಮೇರಿಕೆಯು ಕೆಲವು ಗೆಳೆಯರಿಗೆ, ಅಥವಾ ಕೆಲವು ದೇಶಗಳಲ್ಲಿ ನಿರ್ದಿಷ್ಟ ಧೋರಣೆ ಅಥವಾ ಒಂದು ಕಾರ್ಯಾಕ್ರಮವನ್ನು ಅನುಸರಿಸುವ ಜನರಿಗೆ ಒದಗಿಸುವ ವಿವೇಚನಾಯುತವಾದ ಒಂದಿಷ್ಟು ಸಹಾಯ, ನಾವು ಅಲ್ಲಿಯ ಸ್ಥಳೀಯ ಪರಿಸ್ಥಿತಿಯ ಮೇಲೆ ಪ್ರಭಾವ ಬೀರುವುದಕ್ಕೆ ಅನುಕೂಲ ಮಾಡಿಕೊಡುವುದು ಮತ್ತು ಆ ಮೂಲಕ, ಭವಿಷ್ಯತ್ತಿನಲ್ಲಿ ಅಲ್ಲಿ ಸಂಬಂಧಿಸಲಿರುವ ಗಂಭೀರ ಬಿಕ್ಕಟ್ಟನ್ನು ಪೂರ್ವಭಾವಿಯಾಗಿ ನಿವಾರಿಸಲು

ಸಾಧ್ಯವಾಗುತ್ತದೆ. ಇಂತಹ ಕೆಲವು ಸಂದರ್ಭಗಳು ಆಗಾಗ ಕಾಣಿಸಿಕೊಳ್ಳುತ್ತವೆ." ಯಾರನ್ನು ಗಮನದಲ್ಲಿಟ್ಟುಕೊಂಡು, ಮಿ.ಕಾಲ್ಬಿ ಈ ಮಾತನ್ನು ಹೇಳಿದರು ಎಂಬುದು ನನಗೆ ಗೊತ್ತಿಲ್ಲ. ಆದರೆ ಅವರ ಕಾರ್ಯಾಚರಣೆಯ ವ್ಯಾಪ್ತಿಯೊಳಗೆ ಭಾರತೀಯರು ಇದ್ದಂತೆ ಕಾಣುತ್ತದೆ. ಅವರು ನಮ್ಮ ದೇಶದಲ್ಲಿಯ ಕೆಲವು ಗೆಳೆಯರಿಗೆ - ಹಾಗೆಂದು ತೋರುತ್ತದೆ, ಇಂತಹ ಚೂರು - ಪಾರು ಸಹಾಯ ಮಾಡುತ್ತಿದ್ದಾರೆಂದು ನಾವು ಭಾವಿಸಬಹುದೆ? ಆ ಸಹಾಯ ಯಾವುದು? ಎಂಥದ್ದು? ಅದರ ರೂಪ, ಸ್ವರೂಪವೆಂಥದ್ದು? ಎಂಬುದನ್ನು ನಮ್ಮ ಗೆಳೆಯರೇ ಹೇಳಬೇಕು. ಆದರೆ ಆ ಸಹಾಯ ಮಾತ್ರ ಬಂದಿದೆ; ಎಂಬುದು ಖಚಿತ. ಅಮೇರಿಕಾ ಸಹಾಯದಿಂದ ಒಂದು ಚಳುವಳಿ ಇಲ್ಲಿ ನಡೆದಂತೆ ಕಾಣುತ್ತದೆ. ಈ ಚಳುವಳಿಯಲ್ಲಿ ನಮ್ಮ ದೇಶದ ಅಮೇರಿಕೆಯ ಗೆಳೆಯರು ಮತ್ತು ಅಮೇರಿಕಾ ಪರ ಶಕ್ತಿಗಳು ಕೈಗೂಡಿಸಿದ್ದಾರೆ ಎನ್ನುವುದು ಸ್ಪಷ್ಟವಾಗಿದೆ. ಅಲ್ಲದೆ, ಮಿ.ಕಾಲ್ಬಿಯ ಗೆಳೆಯರು ಇದರಲ್ಲಿದ್ದಾರೆ. ಇದೆಲ್ಲದರ ಬಗ್ಗೆ ಶೋಧನೆ ನಡೆಸುವ ಕೆಲಸ ಶ್ರೀ ಚೌವ್ಹಾನ ಅವರದು. ಆದ್ದರಿಂದ ನಾವು ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರ ಸರಬರಾಜು ಕುರಿತು ಮಾತನಾಡುವಾಗ [illegible] ಈ ಆಯಾಮದ ಬಗ್ಗೆಯೂ ಗಮನ ಹರಿಸಬೇಕು. ಅಂದರೆ, ಶಸ್ತ್ರ ಸರಬರಾಜಿನ [illegible]ಪಕೀಯ ಆಯಾಮ ಕುರಿತು ನಾವು ಗಂಭೀರವಾಗಿ ಚಿಂತಿಸಬೇಕು. ಯಾಕೆಂದರೆ, [illegible] ಬೆಳೆಸುವ ಸಿದ್ಧಾಂತವು ಈಗಾಗಲೇ ನಮ್ಮ ದೇಶದಲ್ಲಿ ಕಾರ್ಯಾಚರಣೆಗೆ ತೊಡಗಿವೆ. ಮಿ.ಮೊನ್ನಿಹಾನ್ ಅವರು, ರಾಜ ಕಾರ್ಯದರ್ಶಿಗಳಾಗಿರುವ ಡಾ.ರೆಸ್ಲೆಂಜರ್ ಅವರಿಗೆ ಕಳೆದ ವರ್ಷ ಒಂದು ತಂತಿ ಸಂದೇಶ ಕಳಿಸಿ, ಅದರಲ್ಲಿ ಸಿ.ಐ.ಎ. ಇಲ್ಲಿ ಕೆಲಸ ಮಾಡುತ್ತಿರುವ ವೈಖರಿಯ ಬಗ್ಗೆ ತಮ್ಮ ಭೀತಿ, ದುಗುಡವನ್ನು ಅಭಿವ್ಯಕ್ತಗೊಳಿಸಿದ್ದುದು ಒಂದು ನಿಜ ಸಂಗತಿಯಲ್ಲವೇ? ಇಲ್ಲಿ ಬಂಧನಕ್ಕೆ ಒಳಗಾಗಿ ಜಾಮೀನು ಪಡೆದಿದ್ದ ವೆಸ್ಟಿಂಗ್ ಹೌಸ್‌ನ ಮಿ.ರೋಬೋಟ್ ಅದು ಹೇಗೋ ತಪ್ಪಿಸಿಕೊಂಡು ಅಮೇರಿಕೆಗೆ ಓಡಿ ಹೋಗಿರುವ ಸುದ್ದಿ ಇವತ್ತೇ ವರದಿಯಾಗಿದೆ. ಅನೇಕ ಅರ್ಥಿಕ ಮತ್ತು ಇನ್ನಿತರ ಅಪರಾಧಿಗಳಿಗಾಗಿ ಬಂಧಿಸಲ್ಪಟ್ಟಿದ್ದ ವೆಸ್ಟಿಂಗ್ ಹೌಸ್‌ನ ಈ ನಿರ್ದೇಶಕ ಕಾನೂನಿನ ಕೈಯಿಂದ ತಪ್ಪಿಸಿಕೊಂಡು ಪರಾರಿ ಅಗಬಹುದೆಂಬ ನಮ್ಮ ಅತಂಕವನ್ನು ನಾವು ಈ ಮೊದಲೇ ವ್ಯಕ್ತಪಡಿಸಿದ್ದೆವು. ನಮ್ಮ ಭಯ ಇಂದು ಸತ್ಯವಾಗಿದೆ, ಅವನು ಕಾನೂನಿನ ಕೈಯಿಂದ ತಪ್ಪಿಸಿಕೊಂಡು ಪಲಾಯನಗೈದಿದ್ದಾನೆ. ವಿದೇಶಾಂಗ ವ್ಯವಹಾರದ ಮಂತ್ರಾಲಯವು ಮಿ.ಡ್ರೋಬಾಟನು ಬಂಧಿಸಬಾರದೆಂದು ಆರ್ಥಿಕ ಮಂತ್ರಾಲಯದ ಮೇಲೆ ಒತ್ತಡ ಹೇರುತ್ತಿತ್ತು ಎಂಬುದು ನಮಗೆ ಗೊತ್ತಾಗಿದೆ; ಯಾಕೆಂದರೆ, ಅವನ ಬಂಧನದಿಂದ ಇನ್ನೂ ಅನೇಕ ಜಟಿಲ ಸಮಸ್ಯೆಗಳು ಉದ್ಭವಿಸಬಹುದೆಂಬುದು ಅವರ ಆತಂಕವಾಗಿತ್ತು, ಈಗ ನಾವು ಕೊಟ್ಟ ಎಚ್ಚರಿಕೆ ನಿಜವಾಗಿದೆ; ಅವನು ತಪ್ಪಿಸಿಕೊಂಡು ಓಡಿ ಹೋಗಿದ್ದಾನೆ. ಈ ಕುರಿತು ಶ್ರೀ ಚೌವ್ಹಾಣ್ ಅವರು ನಮಗೆ ವಿವರಣೆ ಕೊಡಬೇಕು, ಮತ್ತು ಶ್ರೀ ಸುಬ್ರಮಣ್ಯಂ ಅವರು ಇಡೀ ಪ್ರಕರಣ ಕುರಿತು ಮಾಹಿತಿ ನೀಡಬೇಕು.

ನಾವು ಅಸ್ಥಿರತೆಯ ಮಧ್ಯದಲ್ಲಿದ್ದೇವೆಂದು ನಾನೀಗ ಹೇಳಬಯಸುತ್ತೇನೆ; ಆದ್ದರಿಂದ, ಈಗ ದೇಶದ ಒಳಗೆ ಮತ್ತು ಹೊರಗೆ ನಡೆಯುತ್ತಿರುವ ಘಟನೆಗಳನ್ನು ಭಿನ್ನ - ಭಿನ್ನವಾಗಿ ನೋಡಲು ಸಾಧ್ಯವಿಲ್ಲ. ನಾನೀಗಾಗಲೇ ಹೇಳಿದ್ದಂತೆ, ಅದು ನಮ್ಮ ದೇಶದ ಮೇಲಿನ ದ್ವಿವಿಧದ ಧಾಳಿಯಾಗಿದೆ; ಹೊರಗಿನಿಂದ ಬೆದರಿಕೆ ಒಡ್ಡುವುದು, ನಮ್ಮಲ್ಲಿ ಭೀತಿ ಹುಟ್ಟಿಸಿ, ನಮ್ಮ ಮೇಲೆ ಒತ್ತಡ ಹಾಕಿ, ಬ್ಲಾಕ್‌ಮೇಲ್ ಮಾಡುವುದು; ಒಳಗಿನಿಂದ ರಾಜಕೀಯ ಪಲ್ಲಟಕ್ಕೆ ಪರಿಸ್ಥಿತಿ ಸೃಷ್ಟಿಸುವುದು; ಆ ಮೂಲಕ, ಅಮೇರಿಕೆಯ ಪರಮ ಮಿತ್ರರಾದ ಬಲಪಂಥೀಯರು, ಅಧಿಕಾರದ ಗದ್ದುಗೆಗೆ ಬರುವಂತೆ ಮಾಡುವುದು, ಇಷ್ಟಾದರೆ ಸಾಕು, ಮಿ.ಕಾಲ್ಬಿ, ಡಾ.ಕಿಸ್ಸೆಂಜರ್, ಮತ್ತು ಪ್ರೆಸಿಡೆಂಟ್ ಫೋರ್ಡ್, ಈ ಎಲ್ಲರಿಗೂ ಎಲ್ಲಿಲ್ಲದ ಸಂತೋಷ; ಯಾಕೆಂದರೆ, ನಮ್ಮ ಸರ್ಕಾರದ ಮೇಲೆ ತಮ್ಮ ಮನಬಂದಂತೆ, ಪ್ರಭಾವ ಬೀರುವ ಸುವರ್ಣ ಅವಕಾಶ; ಆದ್ದರಿಂದ ಇಂದು ಹಿಂದೆಂದಿಗಿಂತಲೂ ಹೆಚ್ಚು ಗಂಭೀರವಾದ ಪರಿಸ್ಥಿತಿ ನಮಗೆ ಎದುರಾಗಿದೆ.

ಈಗ ಇನ್ನಿತರ ವಿಷಯ ಕುರಿತು ಒಂದೆರಡು ಮಾತುಗಳು; ಅಮೇರಿಕೆಯು ಪಾಕಿಸ್ತಾನಕ್ಕೆ ಪುನಃ ಶಸ್ತ್ರಾಸ್ತ್ರ ಸರಬರಾಜು ಮಾಡುತ್ತಿರುವುದನ್ನು ಶ್ರೀ ಜಯಪ್ರಕಾಶ್ ನಾರಾಯಣ ಅವರು ಖಂಡಿಸಿರುವುದು ನಮಗೆ ಒಂದಿಷ್ಟು ಸಮಾಧಾನ ತಂದಿದೆ. ಯಾರೇ ಯಾವಾಗಲಾದರೂ ಅದನ್ನು ಖಂಡಿಸಿದರೂ ಆದರಿಂದ ನಮಗೆ ತೃಪ್ತಿಯಾಗುತ್ತದೆ. ಆದರೆ ನೀವು ಏಕಕಾಲಕ್ಕೆ ಎರಡು ಕುದುರೆಯ ಸವಾರಿ ಮಾಡಲಾಗುವುದಿಲ್ಲ. ನೀವು ಅಮೇರಿಕೆಯ ಈ ಕ್ರಮವನ್ನು ಖಂಡಿಸುವುದಾದರೆ, ಅದರೊಂದಿಗೇ ನೀವು ಕೆಲವು ರಾಜಕೀಯ ತೀರ್ಮಾನಗಳಿಗೆ ಬರಬೇಕಾಗುತ್ತದೆ. ದೇಶದಲ್ಲಿ ಅಮೇರಿಕೆಯ ಪರವಾಗಿರುವ ಪ್ರತಿಗಾಮಿ ಶಕ್ತಿಗಳಿಗೆ ಉತ್ತೇಜನ ಕೊಡಬಹುದಾದ ಎಲ್ಲಾ ಆಂದೋಲನಗಳನ್ನು ನೀವು ನಿಲ್ಲಿಸಬೇಕಾಗುತ್ತದೆ. ಈ ಪ್ರಗತಿ ವಿರೋಧಿ ಶಕ್ತಿಗಳ ಬುಡಮೇಲು ಕೃತ್ಯಗಳ ಸಾಧ್ಯತೆಗಳನ್ನು ಮೊಟಕುಗೊಳಿಸಬೇಕಾಗುತ್ತದೆ; ಅಷ್ಟೇಯಲ್ಲ, ಸೋವಿಯತ್ ವಿರೋಧಿ ಪ್ರಚಾರವನ್ನು ನಿಲ್ಲಿಸಬೇಕಾಗುತ್ತದೆ. ಯಾಕೆಂದರೆ, ಭಾರತ ಮತ್ತು ಸೋವಿಯತ್ ಒಪ್ಪಂದ ಅಮೇರಿಕೆಯ ಮರ್ದಾಳಿಯ ವಿರುದ್ಧವೇ ಇದೆ. ಬಾಂಗ್ಲಾ ದೇಶದ ವಿಮೋಚನೆಯ ಸಮಯದಲ್ಲಿ ಇದು ಸಾಬೀತಾಗಲಿಲ್ಲವೇ? ಸೋವಿಯತ್ ನಾಡಿನ ರಕ್ಷಣಾಮಂತ್ರಿ, ಮಾರ್ಸೆಲ್ ಗ್ರೆಚ್‌ರೋ, ಭಾರತಕ್ಕೆ ಬಂದಾಗ ಎರಡೂ ದೇಶಗಳು ಕೂಡಿ ಬಿಡುಗಡೆ ಮಾಡಿದ ಜಂಟಿ ಹೇಳಿಕೆಯಿಂದ ಇದು ರುಜುವಾತಾಗಿಲ್ಲವೇ? ಆ ಜಂಟಿ ಹೇಳಿಕೆಯಲ್ಲಿ ನೀವು ಕಾಣುವುದೇನು? ಆ ಹೇಳಿಕೆ ಹೀಗಿದೆ:

"ಎರಡೂ ಪಕ್ಷಗಳು ತಮ್ಮ ನಡುವಿನ ಕನಿಷ್ಠ, ಸಂಬಂಧ, ದೃಢವಾದ ಮೈತ್ರಿ ಮತ್ತು ಪ್ರವಾರ್ಧಮಾನಕ್ಕೆ ಬರುತ್ತಿರುವ ಸಹಕಾರವನ್ನು ಬಹು ಉನ್ನತವಾಗಿ ಶ್ಲಾಘಿಸುತ್ತವೆ,

ಮತ್ತು ಏಷ್ಯಾದಲ್ಲಿ ಅಷ್ಟೇಯಲ್ಲ, ಇಡೀ ಜಗತ್ತಿನಾದ್ಯಂತ ಶಾಂತಿ, ಸ್ಥಿರತೆಯನ್ನು ಸ್ಥಾಪಿಸಿ, ಅದನ್ನು ಸಬಲಗೊಳಿಸುವ ದೃಷ್ಟಿಯಿಂದ ಭಾರತ ಸೋವಿಯತ್ ಮೈತ್ರಿಗೆ ಅತ್ಯಂತ ಹೆಚ್ಚಿನ ಮಹತ್ವ ಇದೆ".

ನೀವು ಇದನ್ನು ಅಲ್ಲಗಳೆಯುವಿರಾ? ಅದು ಮುಂದುವರೆದು ಮತ್ತೆ ಹೇಳುತ್ತದೆ:

"ಎರಡೂ ಪಕ್ಷಗಳು ತಮ್ಮ ಜಂಟಿ ಪ್ರಯತ್ನಗಳ ಮೂಲಕ ಏಷ್ಯಾದಲ್ಲಿ ಶಾಂತಿ ಮತ್ತು ಸ್ಥಿರತೆಯನ್ನು ಸ್ಥಾಪಿಸಿ ಅದರ ರಕ್ಷಣೆಗಾಗಿ, ಬಲಸಂವರ್ಧನೆಗಾಗಿ ಈ ಭಾಗದ ಎಲ್ಲಾ ರಾಜ್ಯಗಳಲ್ಲಿ ಸಹಕಾರದೊಂದಿಗೆ ವಿಶೇಷ ಪ್ರಯತ್ನ ಮಾಡುವ ಪ್ರಶ್ನೆಗೆ ಹೆಚ್ಚಿನ ಮಹತ್ವ ಕೊಡುತ್ತದೆ".

ಆಮೇಲೆ ಅದು; "ಸೋವಿಯತ್ ನಾಡು ತನ್ನ ಕಡೆಯಿಂದ, ಸಾಮ್ರಾಜ್ಯಶಾಹೀ ವಿರೋಧಿ ಮತ್ತು ಪ್ರಗತಿಪರ ದಿಕ್ಕಿನಲ್ಲಿ ನಡೆದಿರುವ ಅಲಿಪ್ತ ಚಳುವಳಿಗೆ ಇತ್ಯಾತ್ಮಕವಾದ ಮಹತ್ವ ನೀಡುತ್ತದೆ. ಭಾರತವು ಅಲಿಪ್ತ ಚಳುವಳಿಯ ನೇತಾರದಲ್ಲಿ ಒಂದಾಗಿರುವುದು ಮಹತ್ವದ ಸಂಗತಿಯಾಗಿದೆ. ಸೋವಿಯತ್ ನಾಡು ಅಲಿಪ್ತ ಚಳುವಳಿಯ ಆಸೆ - ಆಕಾಂಕ್ಷೆಗಳಿಗೆ ತನ್ನ ಬೆಂಬಲ ನೀಡುವುದಲ್ಲದೇ ಜಾಗತಿಕ ಶಾಂತಿ, ಭದ್ರತೆ ಮತ್ತು ಸಹಕಾರದ ಪ್ರಯತ್ನಗಳನ್ನು ಸ್ವಾಗತಿಸುತ್ತದೆ". ಇವು ಜಾಗತಿಕ ಶಾಂತಿಯನ್ನು ಕಾಪಾಡುವ ನಮ್ಮ ರಾಷ್ಟ್ರೀಯ ಆಸಕ್ತಿಗೆ ಸಂಪೂರ್ಣವಾಗಿ ಹೊಂದುವ ಮಾತುಗಳಲ್ಲವೇ?

ನಾನು ನನ್ನ ಮಾತನ್ನು ಮುಗಿಸುವ ಹಂತಕ್ಕೆ ಬಂದಿದ್ದೇನೆ, ಪಾಕಿಸ್ತಾನದ ವಿಷಯವನ್ನೇ ತೆಗೆದುಕೊಳ್ಳಿ, ಅಲ್ಲಿ ಸಂಭವಿಸುತ್ತಿರುವುದಕ್ಕೆ ತುಂಬ ತುಂಬ ಮಹತ್ವವಿದೆ. ನಾವೇನೂ ಕಾಲು ಕೆದರಿ ಪಾಕಿಸ್ತಾನದೊಂದಿಗೆ ಜಗಳ ತೆಗೆಯುತ್ತಿಲ್ಲ, ಪಾಕಿಸ್ತಾನದ ಸ್ಥಿತಿ ನೋಡಿ ನನಗೂ ದುಃಖವಾಗುತ್ತದೆ. ಯಾಕೆಂದರೆ, ಇದರಿಂದ ಅವರು ಸಂಕಷ್ಟಕ್ಕೆ ಈಡಾಗುತ್ತಿದ್ದಾರೆ. ಈ ಶಸ್ತ್ರಾಸ್ತ್ರ ಸರಬರಾಜಿನ ಹೊಸ ವ್ಯವಹಾರ ಕುದುರಿದ್ದೇ ತಡ, ಹೆಚ್ಚು ಕಡಿಮೆ ಅದೇ ವೇಳೆಗೆ ಉತ್ತರ ಪ್ರಾಂತ ಮತ್ತು ಇತರ ಭಾಗಗಳಲ್ಲಿ ಪಾಶವೀ ದಬ್ಬಾಳಿಕೆ ಆರಂಭಿಸಲಾಯಿತು; ಅಲ್ಲಿ ಪ್ರಮುಖ ವಿರೋಧಿ ಪಕ್ಷವಾಗಿರುವ ನ್ಯಾಷನಲ್ ಅವಾಮಿ ಪಾರ್ಟಿಯನ್ನು ತುಳಿದು ಹಾಕಲಾಯಿತು; ಅದರ ನೇತಾರರಾದ ಮಿ.ವಲಿಖಾನ್‌ರನ್ನು ಬಂಧಿಸಲಾಯಿತು. ಈಗ ಅವರ ವಿರುದ್ಧ ಮೊಕದ್ದಮೆ ಹೂಡಲಾಗಿದೆ. ಇಂತಹ ಸಂಗತಿಗಳು ಹಿಂದೆಯೂ ನಡೆದಿರುವುದು ತಮಗೆ ನೆನಪಿರಬಹುದು, 1954ರಲ್ಲಿ ಅಮೇರಿಕೆಯೊಂದಿಗೆ ಮಿಲಿಟರಿ ಒಪ್ಪಂದಕ್ಕೆ ಸಹಿ ಹಾಕಿದೊಡನೆಯೇ ಪೂರ್ವ ಬಂಗಾಳದ, ವಿಧಾನ ಸಭೆಯನ್ನು ವಿಸರ್ಜಿಸಿ, ಅಯೂಬ್ ನಿರಂಕುಶ ಅಧಿಕಾರಕ್ಕೆ ಹಾದಿ ಸುಗಮಗೊಳಿಸಲಾಯಿತು. ಅಮೇಲೆ ಅದು ಅಂತಿಮವಾಗಿ,

ಒಂದು ಪಕ್ಕಾ ಪ್ರತಿಗಾಮಿ ಆಡಳಿತಕ್ಕೆ ದಾರಿ ಮಾಡಿಕೊಟ್ಟಿದೆ. ಇವೆಲ್ಲ ಸಂಗತಿಗಳು ಈಗ ಸುಪರಿಚಿತವಾಗಿವೆ. ಈಗ ಅಮೇರಿಕೆಯ ಈ ಹೊಸ ಕ್ರಮದಿಂದಾಗಿ, ಪ್ರತಿಗಾಮಿಗಳ ಕೈ ಬಲಪಡಿಸಲಾಗುತ್ತಿದೆ. ಅಷ್ಟೇಯಲ್ಲ, ಭಾರತ ವಿರೋಧಿ ಶಕ್ತಿಗಳು ಇನ್ನೂ ಪುಷ್ಟಿಗೊಳ್ಳುತ್ತಿವೆ, ಇತ್ತೀಚೆಗೆ ಮಿ.ಭುಟ್ಟೋ ಅವರು ಬಳಸುತ್ತಿರುವ ಯುದ್ಧ ಕೋರ ಭಾಷೆಯನ್ನಾಗಲೀ, ಅವರು ಕಾಶ್ಮೀರದಲ್ಲಿ ಹರತಾಳಕ್ಕೆ ಕೊಟ್ಟ ಕರೆಯನ್ನಾಗಲಿ, ನಾವು ಪರಭಾಷೆಯಾಗಿ ಭಾವಿಸಲು ಸಾಧ್ಯವಿಲ್ಲ. ಇವೆಲ್ಲವೂ ಪಾಕಿಸ್ತಾನದ ಮೂಲಕ ಅಮೇರಿಕಾ ನಡೆಸುತ್ತಿರುವ ಹಸ್ತಕ್ಷೇಪವಿಲ್ಲದೆ ಮತ್ತೇನೂ ಅಲ್ಲ, ನಾವು ಅದನ್ನು ಈ ರೀತಿಯಾಗಿಯೇ ನೋಡಬೇಕಾಗಿದೆ; ಅವುಗಳ ಬಳಕೆಗೆ ಬೇಕಾಗಬಹುದಾದ ಪರಿಸ್ಥಿತಿಯ ನಿರ್ಮಾಣಕ್ಕೆ ಉತ್ತೇಜನ ಕೊಡಲಾಗುತ್ತಿದೆ. ಪಾಕಿಸ್ತಾನವು ತನ್ನ ರಾಷ್ಟ್ರೀಯ ಒಟ್ಟು ಆದಾಯದ ಶೇಕಡ 10 ಮಿಲಿಟರಿಗಾಗಿ ಖರ್ಚು ಮಾಡುತ್ತಿದೆ ಎಂಬುದನ್ನು ತಾವು ನೆನಪಿಡಬೇಕು. ಕಳೆದ ವರ್ಷದ ಬಜೆಟ್ಟಿನಲ್ಲಿ 500 ಕೋಟಿ ರೂಪಾಯಿ ಈ ಬಾಬತ್ತಿಗೆ ಮೀಸಲಿಡಲಾಗಿದೆ. ಇಷ್ಟೇಯಲ್ಲದೆ, ಅಮೇರಿಕೆಯು ಶಸ್ತ್ರಾಸ್ತ್ರಗಳನ್ನು ಇನ್ನೂ ಸರಬರಾಜು ಮಾಡುತ್ತಿದೆ. ಇದು ಕೇವಲ ಶಸ್ತ್ರಾಸ್ತ್ರ ಸರಬರಾಜಿನ ಪ್ರಶ್ನೆಯಲ್ಲ ಪಾಕಿಸ್ತಾನವು ಇಷ್ಟೊಂದು ಬೃಹತ್ ಮೊತ್ತದ ಹಣ ಮಿಲಿಟರಿ ಬಜೆಟ್ಟಿಗಾಗಿ ಖರ್ಚು ಮಾಡುವಂತೆ ಅಮೇರಿಕೆಯು ಯೋಜಿಸುತ್ತಿದೆಯಲ್ಲ ಇದು ಮಹತ್ವದ ಸಂಗತಿ. ಪ್ರತಿಗಾಮಿ ಶಕ್ತಿಗಳನ್ನು ಪ್ರೋತ್ಸಾಹಿಸಿ, ಭಾರತ ವಿರೋಧಿ ದಾಳಿಕೋರ ಶಕ್ತಿಗಳಿಗೆ ಬೆಂಬಲಿಸುವ ಉದ್ದೇಶದಿಂದಲೇ ಅಮೇರಿಕೆಯು ಪಾಕಿಸ್ತಾನಕ್ಕೆ ಸಹಾಯ ಮಾಡುತ್ತಿದೆ; ಈ ಭಾಗದಲ್ಲಿ ಮಿಲಿಟರೀಕರಣಕ್ಕೆ ಇಂಬು ಕೊಡುತ್ತಿದೆ; ಈ ಉಪಖಂಡದಲ್ಲಿಯ ಶಾಂತಿಯನ್ನು ಕದಡಬಯಸುವ ದುಷ್ಟ ಶಕ್ತಿಗಳಿಗೆ ಅದು ಬೆಂಬಲವಾಗಿ ನಿಲ್ಲುತ್ತದೆ. ಆದ್ದರಿಂದ, ಈ ಭಾಗದಲ್ಲಿಯ ಎಲ್ಲಾ ಆಗು - ಹೋಗುಗಳನ್ನು ನಾವು ಈ ನಿಟ್ಟಿನಿಂದಲೇ ನೋಡಬೇಕಾಗಿದೆ.

ಇದು ಅಂತರರಾಷ್ಟ್ರೀಯ ಸೌಹಾರ್ದತೆಗೂ ವಿರುದ್ಧವಾದದ್ದು, ಅಮೇರಿಕೆಯ ಈ ಕ್ರಮ ಶಾಂತಿಪರಶಕ್ತಿಗಳಿಗೆ, ಶಾಂತಿಯ ಮಹಾನ್ ಕಾರಣಕ್ಕಾಗಿ ದುಡಿಯುವವರಿಗೆ, ಒಂದು ನೇರ ಅಪಮಾನವಾಗಿದೆ. ಅದರ ಈ ನಿಲುವು ಅಂತರರಾಷ್ಟ್ರೀಯ ಸೌಹಾರ್ದತೆಗೆ ವ್ಯತಿರಿಕ್ತವಾಗಿದೆ. ಸೌಹಾರ್ದತೆಯು ನಮ್ಮ ಪ್ರದೇಶಗಳಿಗೆ ಹಬ್ಬಿ, ಹರಡಿ, ಗಲಭೆಗೊಳ್ಳದ ಹೊರತು, ಅದು ಒಂದು ನೈಜ ಶಕ್ತಿಯಾಗಲಾರದು. ಅಮೇರಿಕನ್ನರು ಈಗಾಗಲೇ ಹಿಂದೆಂದಿಗಿಂತಲೂ ಬಹುಮೊತ್ತದ ಹಣವನ್ನು ಮಿಲಿಟರಿ ಬಜೆಟ್ಟಿಗಾಗಿ ಬಳಸುತ್ತಿದ್ದಾರೆ. ಅದು ಪ್ರತಿವರ್ಷ 86 ಸಾವಿರ ಮಿಲಿಯನ್ ಡಾಲರನ ದರದಲ್ಲಿ ಮುಂದುವರಿಯುತ್ತಿದೆ. ಅವರು ಶಸ್ತ್ರಾಸ್ತ್ರ ಪೈಪೋಟಿ ನಿರ್ಮಿಸುತ್ತಾರೆಂಬುದು ಸುವೇದ್ಯ. ಅಭಿವೃದ್ಧಿಶೀಲ ರಾಷ್ಟ್ರಗಳ ಒಟ್ಟು ಆದಾಯದ ಎಷ್ಟೋ ಪಟ್ಟು ಹಣ ಅವರು ಕೇವಲ ತಮ್ಮ ಮಿಲಿಟರಿಗಾಗಿ ಖರ್ಚು ಮಾಡುತ್ತಿದ್ದಾರೆಂಬುದನ್ನು ತಾವು ಕಲ್ಪಿಸಿಕೊಳ್ಳಬಹುದು. ಅವರು ಜಗತ್ತಿನಾದ್ಯಂತ ವಿಶೇಷವಾಗಿ, ನಮ್ಮ ಭಾಗದಲ್ಲಿ 300 ಬೃಹತ್ ಪ್ರಮಾಣದ ಮತ್ತು 3000 ಸಣ್ಣ ಪ್ರಮಾಣದ ಮಿಲಿಟರಿ

ನೆಲೆಗಳನ್ನು ಸ್ಥಾಪಿಸಿದ್ದಾರೆ, ಆದ್ದರಿಂದಲೇ ನಾನು ಹೇಳುತ್ತಿರುವುದು; ಅಮೇರಿಕೆಯ ಈ ಕ್ರಮ ಅಂತರರಾಷ್ಟ್ರೀಯ ಶಾಂತಿಗೆ, ಶಾಂತಿ ಶಕ್ತಿಗಳಿಗೆ, ಮತ್ತು ವಿಮೋಚನಾ ಶಕ್ತಿಗೆ ಒಂದು ಆಹ್ವಾನವಾಗಿದೆ; ಸಂಯುಕ್ತ ರಾಷ್ಟ್ರ ಸಂಘದ ಶಾಸನ ಅವಹೇಳನವಾಗಿದೆ. ಆದ್ದರಿಂದ, ನಮ್ಮ ಭಾಗದಲ್ಲಿ ಅಷ್ಟೇಯಲ್ಲ, ಇಡೀ ಪ್ರಪಂಚದ ಎಲ್ಲಾ ಶಾಂತಿಪ್ರಿಯ ಶಕ್ತಿಗಳು ಅದರ ಈ ಕ್ರಮವನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ.

ಈಗ ಸರ್ಕಾರ ತೆಗೆದುಕೊಳ್ಳಬೇಕಾದ ಕ್ರಮದ ಕುರಿತು ಒಂದೆರಡು ಸಲಹೆ ನೀಡಬಯಸುತ್ತೇನೆ. ಮೊಟ್ಟ ಮೊದಲಿಗೆ, ಶ್ರೀ ಚವ್ಹಾನ್‌ರವರ ನಿಲುವನ್ನು ಸ್ವಾಗತಿಸಿ, ಅವರಿಗೆ ಅಭಿನಂದಿಸಬೇಕು. ಅವರು ನಮ್ಮ ವಿದೇಶಾಂಗ ವ್ಯವಹಾರದ ಹೊಸ ಮಂತ್ರಿಗಳಾಗಿ ತೆಗೆದುಕೊಂಡ ಕ್ರಮ ಅತ್ಯಂತ ಬುದ್ದಿವಂತಿಕೆಯದು ಮತ್ತು ಸಕಾಲಿಕವಾದದ್ದು. ಭಾರತ - ಅಮೇರಿಕೆಯ ಜಂಟಿ ಆಯೋಗದ ವಾಷಿಂಗ್‌ಟನ್ ಸಭೆಗೆ ಹಾಜರಾಗುವುದನ್ನು ಅವರು ರದ್ದುಪಡಿಸಿದ್ದಾರೆ. ಅದಕ್ಕಾಗಿ ಸಂಸತ್ತು ಅವರಿಗೆ ಹಾರ್ದಿಕವಾಗಿ ಅಭಿನಂದಿಸಬೇಕು. ಜಾಣತನದ ಸಕಾಲಿಕವಾದ ನಿರ್ಧಾರದಿಂದ ಅವರು ನಮ್ಮ ಗೌರವವನ್ನು ಹೆಚ್ಚಿಸಿದ್ದಾರೆ. ಅದಕ್ಕಾಗಿ ಅವರು ಅಭಿನಂದನಾರ್ಹರು. ಆದರೆ, ಅಮೇರಿಕೆಯು ಇತ್ತೀಚೆಗೆ ತೆಗೆದುಕೊಂಡ ಕ್ರಮದಿಂದಾಗಿ ಇಂಡೋ-ಅಮೇರಿಕಾ ಜಂಟಿ ಆಯೋಗವು ತನ್ನ ಅಸ್ತಿತ್ವದ ಹಕ್ಕನ್ನು ಕಳೆದುಕೊಂಡಿದೆ ಎಂದು ನಾನು ಹೇಳಬಯಸುತ್ತೇನೆ. ಜಂಟಿ ಆಯೋಗದ ಒಪ್ಪಂದದ ಪ್ರತಿ ನನ್ನ ಬಳಿಯಿದೆ. ಆ ಜಂಟಿ ಆಯೋಗದ ಉದ್ದೇಶವೇ ಎರಡೂ ದೇಶಗಳ ನಡುವಿನ ಸಂಬಂಧವನ್ನು ಸಾಮಾನ್ಯ ಸ್ಥಿತಿಗೆ ತಂದು ಸುಧಾರಿಸುವುದಾಗಿತ್ತು. ಒಂದೆಡೆ ಪಾಕಿಸ್ತಾನರನ್ನು ಶಸ್ತ್ರ ಸನ್ನದ್ಧಗೊಳಿಸುತ್ತಾ, ಅಲ್ಲಿ ಮಿಲಿಟರಿ ನೆಲೆಯನ್ನು ನಿರ್ಮಿಸುತ್ತಾ, ನಮ್ಮೆದುರಿಗೆ ಬಂದೂಕಿನ ಗುರಿಯಿಟ್ಟು ಬೆದರಿಸುವುದು, ಇನ್ನೊಂದೆಡೆ, ನಮ್ಮ ಜೊತೆ ಆರ್ಥಿಕ ಮತ್ತು ಸಾಂಸ್ಕೃತಿಕ ಸಹಕಾರದ ನಾಟಕವಾಡುವುದು ; ಇದು ಅಮೇರಿಕೆಯ ನೀತಿಯಾಗಿದೆ. ಇದು ಅಪ್ರಾಮಾಣಿಕತೆಯ ಪರಮ ಮಾದರಿಯಲ್ಲವೇ ಇಂತಹ ಒಪ್ಪಂದಗಳನ್ನು ತಿಪ್ಪೆಗೆಸೆಯಬೇಕು; ಈ ಕುರಿತು ಆರ್ಥಿಕ ಕ್ರಮಗಳನ್ನು ನಾವು ತೆಗೆದುಕೊಳ್ಳಬೇಕು, ನಾನು ಈಗಾಗಲೇ ಹೇಳಿದಂತೆ, ಅದರ ಈ ಕ್ರಮಗಳಿಗೆ ಆರ್ಥಿಕ ದ್ವಂದ್ವಾರ್ಥಗಳಿವೆ. ಅವರು ನಮ್ಮ ದಾರಿಯಲ್ಲಿ ಆರ್ಥಿಕ ಸಂಕಷ್ಟ ಸೃಷ್ಟಿಸಲು ಬಯಸುತ್ತಿದ್ದಾರೆ. ಆದ್ದರಿಂದಲೇ ನಾನು ನಮ್ಮ ಆರ್ಥಿಕ ಮಂತ್ರಿಗಳಿಗೆ, ಜೊತೆಗೆ ಇತರ ಮಂತ್ರಿಗಳಿಗೆ, ಹೇಳಬಯಸುವುದೇನೆಂದರೆ, ಅಮೇರಿಕೆಯ ಸಹಾಯ ಇತ್ಯಾದಿ ಕುರಿತು ಯಾವುದೇ ಪ್ರಕಾರದ ಹುಮ್ಮಸ್ಸಿನ ಭ್ರಮೆ ಇಟ್ಟುಕೊಳ್ಳಬೇಡಿರಿ. ಅಮೇರಿಕೆಯ ಬಹುರಾಷ್ಟ್ರೀಯ ಕಾರ್ಪೊರೇಷನ್‌ಗಳು ನಮ್ಮ ದೇಶದಲ್ಲಿ ಪ್ರವೇಶಿಸುವುದಕ್ಕೆ ಅವಕಾಶ ಕೊಡಬಾರದು. ಇದಕ್ಕೆ ಪ್ರತಿಯಾಗಿ, ಈಗಾಗಲೇ ಅಸ್ತಿತ್ವದಲ್ಲಿರುವ ಕಾರ್ಪೊರೇಷನ್‌ಗಳು ನಮ್ಮ ದೇಶದಲ್ಲಿ ಗಿಟ್ಟಿಸಲಾಗುವ ಲಾಭಾಂಶವನ್ನು ತಮ್ಮ ದೇಶಗಳಿಗೆ ಕಳುಹಿಸುವುದನ್ನು ಕೂಡಲೇ ತಡೆಗಟ್ಟಬೇಕು. ಲಾಭ, ಡಿವಿಡೆಂಟ್, ರಾಯಲ್ಟಿ, ಇತ್ಯಾದಿ ಯಾವುದೇ ರೂಪದಲ್ಲಿ

ನಮ್ಮ ದೇಶದ ಹಣ ಅಮೇರಿಕೆಗೆ ಹರಿಯಲು ಬಿಡಬಾರದು. ಸಿ.ಐ.ಎ ನಡೆಸುತ್ತಿರುವ ಎಲ್ಲ ಬುಡಮೇಲು ಕೃತ್ಯಗಳನ್ನು ಕೂಡಲೇ ತಡೆಗಟ್ಟಬೇಕು. ನಮ್ಮ ದೇಶದಲ್ಲಿರುವ ಅನೇಕ ಜನ ತಜ್ಞರು ಸಂಶೋಧನಾ ಪಂಡಿತರು, ಇತ್ತೀಚಿನ ಒಂದು ಗ್ರಂಥದ ಪ್ರಕಾರ, ಸಿ.ಐ.ಎ ಏಜೆಂಟರಾಗಿ ಕೆಲಸ ಮಾಡುತ್ತಿದ್ದಾರೆ. ಇವರೆಲ್ಲ ವಿದ್ರೋಹಿಗಳು, ಇವರು ನಮ್ಮ ದೇಶದ ಪ್ರತಿಗಾಮಿ ಶಕ್ತಿಗಳೊಂದಿಗೆ ಕೈಗೂಡಿಸಿದ್ದಾರೆ. ಇವರೆಲ್ಲರೂ ಸಂಪೂರ್ಣ ಕ್ರಾಂತಿಯ ಬೆಂಬಲಿಗರಾಗಿದ್ದಾರೆ. ಅವರು ನಮ್ಮ ಪ್ರಜಾ ಪ್ರಭುತ್ವವನ್ನು ಸಂಪೂರ್ಣ ನಾಶಗೊಳಿಸಿದ್ದಾರೆ. ಆದ್ದರಿಂದ ಅವರೆಲ್ಲರ ವಿರುದ್ಧ ತುರ್ತು ಕ್ರಮ ಕೈಗೊಳ್ಳುವುದು. ಅತ್ಯಂತ ಜರೂರಿನ ಅವಶ್ಯಕತೆಯಾಗಿದೆ, ಹಿಂದೂ ಮಹಾಸಾಗರವನ್ನು ಶಾಂತಿ ವಲಯವನ್ನಾಗಿ ಮಾಡಬೇಕು. ಈ ಕುರಿತು ಈಗಾಗಲೇ ತೀರ್ಮಾನ ತೆಗೆದುಕೊಂಡಾಗಿದೆ. ಆದ್ದರಿಂದ ಸರ್ಕಾರ ಈ ದಾರಿಯಲ್ಲಿ ಸಾಧ್ಯವಾದಷ್ಟು ಬೇಗನೇ ಕ್ರಮ ಕೈಗೊಳ್ಳಬೇಕೆಂದು ನಾನು ವಿನಂತಿಸುತ್ತೇನೆ. ಅಲಿಪ್ತ ರಾಷ್ಟ್ರಗಳ 4 ನೇ ಶೃಂಗ ಸಭೆಯ ಕಾರ್ಯಕ್ರಮವನ್ನು ಜಾರಿಗೊಳಿಸಲು ಸರ್ಕಾರ ಮುಂದಾಗಬೇಕು. ಒಂದು ಬಲಿಷ್ಠ ಅಲಿಪ್ತ ರಾಷ್ಟ್ರವಾಗಿರುವ ನಾವು ಸ್ವಂತ ಪ್ರೇರಣೆಯಿಂದ ಮುಂದಡಿ ಇಟ್ಟು, ಆ ಕಾರ್ಯಕ್ರಮ ಜಾರಿಗೊಳಿಸುವುದಕ್ಕೆ ಅವಶ್ಯವಿರುವ ಸಹಕಾರವನ್ನು ಕ್ರೋಢೀಕರಿಸಬೇಕು. ಸಂಯುಕ್ತ ರಾಷ್ಟ್ರದ ಸಾಮಾನ್ಯ ಸಭೆಯು ತನ್ನ 6 ನೇ ವಿಶೇಷ ಅಧಿವೇಶನದಲ್ಲಿ ಒಂದು ದೇಶದ ಹಕ್ಕು ಮತ್ತು ಕರ್ತವ್ಯ ಕುರಿತು ಸಾಮಾನ್ಯ ಗೊತ್ತುವಳಿಯೊಂದನ್ನು ಪಾಸು ಮಾಡಿದೆ. ವಸಾಹತುಶಾಹಿ ನವ್ಯ ವಸಾಹತುಶಾಹೀ ಮತ್ತು ಸಾಮ್ರಾಜ್ಯಶಾಹಿ ವಿರುದ್ಧ ಅಲಿಪ್ತ ರಾಷ್ಟ್ರಗಳನ್ನು ಸಂಘಟಿಸುವ ಒಂದು ಅವಕಾಶವನ್ನು ಈ ಗೊತ್ತುವಳಿಯು ನಮಗೆ ಕೊಟ್ಟಿದೆ ಎಂದು ನನ್ನ ಅನಿಸಿಕೆ. ನಮ್ಮ ಮಂತ್ರಾಲಯ ದೀರ್ಘ ಮತ್ತು ಅಲ್ಪಕಾಲಿನ ಧೋರಣೆ, ಯೋಜನೆಗಳನ್ನು ರೂಪಿಸಬೇಕು, ಧೋರಣೆ, ಯೋಜನೆಗಳನ್ನು ರೂಪಿಸಲು ನಿಮ್ಮಲ್ಲಿ ಒಂದು ವ್ಯವಸ್ಥೆಯೇ ಇದೆ ಎಂದು ನನಗೆ ಗೊತ್ತಿದೆ, ಆದರೆ ಸೌತ್ ಬ್ಲಾಕ್‌ನಲ್ಲಿರುವ ನಿಮ್ಮ 'ಲಾಯ' ವನ್ನು ಮೊದಲು ಸ್ವಚ್ಛಗೊಳಿಸುವ ಅವಶ್ಯಕತೆಯಿದೆ. ಆ ಮೇಲೆ ದೀರ್ಘ ಮತ್ತು ಅಲ್ಪಕಾಲೀನ ಧೋರಣೆಗಳನ್ನು ರೂಪಿಸಬೇಕು.

ಮಹನೀಯ ಉಪಾಧ್ಯಕ್ಷರೆ, ಈ ಎಲ್ಲ ವಿಷಯಕ್ಕೆ ಸಂಬಂಧಿಸಿ ನಾನು ಹೇಳುವುದೇನೆಂದರೆ, ಸಾಮ್ರಾಜ್ಯಶಾಹೀ ವಿರೋಧಿ ಶಕ್ತಿಗಳು, ಅವು ಹೇಗೇ ಇರಲಿ, ಏಕತೆಗೊಳ್ಳುವಂತೆ ಒಂದು ಸಾಮಾನ್ಯ ಕಾರ್ಯಾಚರಣೆಗೆ ತೊಡಗುವಂತೆ ಮಾಡುವುದು ಇಂದು ಅತ್ಯಂತ ತುರ್ತಿನ ಮತ್ತು ಮಹತ್ವದ ಕೆಲಸವಾಗಿದೆ. ತೃತೀಯ ಜಗತ್ತು ಒಂದು ಸಾಮ್ರಾಜ್ಯಶಾಹೀ ವಿರೋಧಿ ಶಕ್ತಿಯಾಗಿದೆ ; ಎಂಬುದರಲ್ಲಿ ಎರಡು ಮಾತಿಲ್ಲ. ಒಂದು ಪ್ರಮುಖ ಅಲಿಪ್ತ ರಾಷ್ಟ್ರವಾಗಿರುವ ನಾವು ಸಾಮ್ರಾಜ್ಯಶಾಹೀ ಮತ್ತು ನವ ವಸಾಹತುಶಾಹೀಗಳ ವಿರುದ್ಧ ಒಂದು ಸರ್ವಾನುಮತದ ಕಾರ್ಯಾಚರಣೆಗೆ ಎಲ್ಲರನ್ನೂ ಅಣಿಗೊಳಿಸುವ ಕರ್ತವ್ಯವನ್ನು ನಿರ್ವಹಿಸಬೇಕಾಗಿದೆ. ಭಾರತ ಸರ್ಕಾರವು, ಪಕ್ಷದ ಸಾಮೂಹಿಕ ಭದ್ರತೆಯ ಒಂದು

ವ್ಯವಸ್ಥೆ ಸ್ಥಾಪಿಸಲು ಅವಶ್ಯವಿರುವ ಸಾಧ್ಯತೆಗಳನ್ನು ಶೋಧಿಸಬೇಕೆಂದು ನಾನು ಹೇಳಬಯಸುತ್ತೇನೆ.

'ಏಷ್ಯದ ಸಾಮೂಹಿಕ ಭದ್ರತೆಯ ವ್ಯವಸ್ಥೆಯನ್ನು ಸ್ಥಾಪಿಸುವುದು, ಬಾಂಡುಂಗ್ ಸಮಾವೇಶದ 'ಸತ್ವ' ಮತ್ತು ನಮ್ಮ ಪಂಚಶೀಲ ತತ್ವಗಳಿಗೆ ಅನುಗುಣವಾಗಿಯೇ ಇರುತ್ತದೆ ಎಂಬುದು ನನ್ನ ಭಾವನೆ "ಪಂಚಶೀಲ" ತತ್ವಗಳನ್ನು ಚೀನಾ ಉಲ್ಲಂಘಿಸಬಹುದು, ಆದರೆ, ನಾವು ಅವುಗಳನ್ನು ಚಾಚೂ ತಪ್ಪದೇ ಅನುಸರಿಸಬೇಕು ; ಅಂತೆಯೇ, ನಾವು ಬಾಂಡುಂಗ್ ಘೋಷಣೆಯನ್ನು ಬೆಂಬಲಿಸಬೇಕು.

ಆದ್ದರಿಂದ, ಈಗ ನಡೆದಿರುವ ದಾಳಿಕೋರ ಕ್ರಮಗಳ ಹಿನ್ನಲೆಯಲ್ಲಿ ಸ್ವಾತಂತ್ರ್ಯಪ್ರಿಯ ಎಲ್ಲಾ ರಾಷ್ಟ್ರಗಳನ್ನು ಒಗ್ಗೂಡಿಸಿ, 'ಏಷ್ಯಾದ' ಸಾಮೂಹಿಕ ಭದ್ರತೆಯ ಸ್ಥಾಪನೆಗೆ ಸಾಧ್ಯವಿರುವ ಎಲ್ಲವನ್ನೂ ಶ್ರೀ ಚವ್ಹಾನ್ ಅವರು ಮಾಡಬೇಕಾದ ಕಾಲ ಈಗ ಬಂದಿದೆ. ಅವರು ಈ ಕುರಿತು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ನನ್ನ ಸಲಹೆ. ಬದಲಾದ ಇಂದಿನ ಜಾಗತಿಕ ಪರಿಸ್ಥಿತಿಯಲ್ಲಿ, ನಮ್ಮ ಸ್ಥಾನಮಾನವು ಉನ್ನತವಾಗಿಯೇ ಇದೆ. ಆದ್ದರಿಂದ ಸದ್ಯದ ಹೋರಾಟವನ್ನು ಮುಂದಕ್ಕೆ ತೆಗೆದುಕೊಂಡು ಹೋಗುವ ಅವಶ್ಯಕತೆ ಅಷ್ಟೇ ತುರ್ತಿನದಾಗಿದೆ. ಏಷ್ಯಾದಲ್ಲಿ, ಅಲಿಪ್ತ ರಾಷ್ಟ್ರಗಳು ಹಾಗೂ ಹೊಸದಾಗಿ ಸ್ವತಂತ್ರ್ಯಗೊಂಡ ರಾಷ್ಟ್ರಗಳ ಪರಸ್ಪರ ಸಮೀಪ ಒಂದು ಬಾಂಡುಂಗ್ ಸಮಾವೇಶ ಪರಂಪರೆಯನ್ನು ಮುಂದಕ್ಕೆ ತೆಗೆದುಕೊಂಡು ಹೋಗಲು ಸಿದ್ದವಾಗಿದೆ ಎಂಬ ನನ್ನ ಮಾತಿಗೆ ಶ್ರೀ ಚವ್ಹಾನ್ ಅವರ ಸಹಮತಿಯಿದೆ ಎಂದು ಭಾವಿಸುತ್ತೇನೆ. ನೀವು ' ಏಷ್ಯಾದ ಸಾಮೂಹಿಕ ಭದ್ರತೆಯ ವ್ಯವಸ್ಥೆಯನ್ನು ಸ್ಥಾಪಿಸಲು ಪ್ರಯತ್ನ ಮಾಡುವುದು ತುಂಬಾ ಔಚಿತ್ಯಪೂರ್ಣವಾದುದು. ವಿಶೇಷವಾಗಿ, ಅದು ಈಗಿನ ಅಮೇರಿಕಾದ ದಾಳಿಕೋರರ ಕ್ರಮಗಳಿಗೆ ಸಮುಚಿತವಾದ ಒಂದು ಪ್ರತ್ಯುತ್ತರವೂ ಆದೀತು. ಅಷ್ಟೇಯಲ್ಲ, ಅದು ಎಲ್ಲ ಸಾಮ್ರಾಜ್ಯಶಾಹಿ ವಿರೋಧಿ ಶಕ್ತಿಗಳನ್ನು ಒಗ್ಗೂಡಿಸುವಲ್ಲಿ ಅವುಗಳ ಮಧ್ಯೆ ಸದ್ಭಾವ ಕುದುರಿಸಿ, ತಮ್ಮ ತಮ್ಮ ರಕ್ಷಣೆಗಾಗಿ ಸ್ವಾತಂತ್ರ್ಯಕ್ಕಾಗಿ ಸನ್ನದ್ದರಾಗಿ ನಿಲ್ಲುವಂತೆ ಮಾಡುವಲ್ಲಿ ಮಹತ್ತರ ಪಾತ್ರ ವಹಿಸುತ್ತದೆ. ಮೇಲಾಗಿ ಇಡೀ ಭಾಗದ ಶಾಂತಿ ಸುಭದ್ರತೆಗೆ, ಆ ಮೂಲಕ ಸಮಗ್ರ ಜಗತ್ತಿನ ಶಾಂತಿ ಹಾಗೂ ಅಂತ ರಾಷ್ಟ್ರೀಯ ಭದ್ರತೆಗೆ ಅದು ಅಮೂಲ್ಯವಾದ ಕಾಣಿಕೆಯನ್ನು ನೀಡಬಲ್ಲುದು.

# 9. ಭಾರತದಲ್ಲಿ ಮಹಿಳೆಯ ಸ್ಥಾನ *

ಮಾನ್ಯ ಉಪಾಧ್ಯಕ್ಷರೆ, ನಾವು ಮತ್ತೇ ಮಹಿಳೆಯ ವಿಮೋಚನೆಯು "ಸಮಸ್ಯೆ" ಕುರಿತು ಚರ್ಚಿಸುತ್ತಿರುವುದು ಸಂತೋಷದ ಸಂಗತಿ. ನಮ್ಮ ಸಮಾಜದಲ್ಲಿ ಅವರು ನಿರ್ವಹಿಸುತ್ತಿರುವ ಪಾತ್ರ, ಪಡೆದಿರುವ ಹಕ್ಕುಗಳು, ಇತ್ಯಾದಿ ಕುರಿತು ಚರ್ಚಿಸುವುದು ನಮ್ಮ ದೃಷ್ಟಿಯಲ್ಲಿ ಅತ್ಯಂತ ಮಹತ್ವದ ವಿಷಯವಾಗಿದೆ. ಯಾವುದೇ ಒಂದು ಸಮಾಜದಲ್ಲಿ ಮಹಿಳೆಯರು ಪಡೆದಿರುವ ಸ್ಥಾನಮಾನಕ್ಕೆ ಅನುಗುಣವಾಗಿಯೇ ಆ ಸಮಾಜದ ನಾಗರಿಕತೆಯ ಮುಖ್ಯ ತೀರ್ಮಾನವಾಗುವುದು. ಒಂದು ಸಮಾಜದ ಗುಣಮಟ್ಟ ಮತ್ತು ಅದರ ಸ್ವರೂಪ ನಿರ್ಧಾರವಾಗುವುದು, ಆ ಸಮಾಜ ತನ್ನ ಮಹಿಳೆಯರಿಗೆ ನೀಡಿರುವ ಸ್ಥಾನಮಾನವನ್ನವಲಂಬಿಸಿದೆಯೇ. ಆದರೆ, ಇಂದು ನಾವು ನಮ್ಮ ಸಮಾಜದ ಮೇಲೆ ನಿಗಾ ಹಾಯಿಸಿದರೆ ನಮಗೆ ಕಾಣಿಸುವ ದೃಶ್ಯ ತೀರಾ ದಯನೀಯವಾಗಿದೆ; ಧನಿಕ ವರ್ಗದ ಮ. ನದುಂಡದಿಂದ ಅಳೆದರೂ ನಾವು ತೀರ ಹಿಂದೆ ಬಿದ್ದಿದ್ದೇವೆ. ಅಸಂಖ್ಯಾತ ಜನ ಬಡತನದಲ್ಲಿ ಬಳ 'ಬುತ್ತಿದ್ದಾರೆ, ಹಸಿವು, ದಾರಿದ್ರ್ಯದಿಂದ ಕಾಂಗಾಲಾಗಿದ್ದಾರೆ. ಆರ್ಥಿಕ ದುಃಸ್ಥಿತಿಯಲ್ಲಿರುವ ಅವ ರು ಹಲವು ವಿಧದಿಂದ ಅವಮಾನಿತರಾಗಿದ್ದಾರೆ. ಒಂದೆಡೆ ಈ ದಾರುಣ ದೃಶ್ಯ ಕಣ್ಣಿ ರಚುತ್ತಿದ್ದರೆ, ಇನ್ನೊಂದೆಡೆ ಇದೇ ಸಮಾಜದಲ್ಲಿ ಉಳ್ಳವರ ಆಟೋಪ, ಅಟ್ಟಹಾಸ ಮೆರವ ಣಿಗೆ ನಿತ್ಯ ನಡೆಯುತ್ತಿದೆ. ಸ್ಥಿತಿವಂತರ ಸ್ಥಾನ - ಮಾನ, ಸಂಪತ್ತು ಸಮೃದ್ಧಿಯ ಆಡಂಬರದ ಪ್ರದರ್ಶನ - ಜರಗುತ್ತಿದೆ. ಇಂತಹ ಸಮಯದಲ್ಲಿ ನಮ್ಮ ಜನ ವಿಭಾಗದ ಅತ್ಯಂತ ದುರ್ಬಲರಾಗಿರುವ ಮಹಿಳೆಯರು ಅನೇಕ ಅವಕಾಶಗಳಿಂದ ವಂಚಿತರಾಗಿ ಈ ವಿಷಯ ಕುರಿತು ಅನಂತರ ನಾನು ದೀರ್ಘವಾಗಿ ಪ್ರಸ್ತಾಪಿಸುತ್ತೇನೆ.

ಸಮಾಜದ ಉನ್ನತ ಸ್ಥಾನದಲ್ಲಿದ್ದವರಿಂದ ಅನೇಕ ವಿಧದಲ್ಲಿ ನಿರ್ಲಕ್ಷಕ್ಕೊಳಗಾಗಿ ತೀರ ದುರ್ಬರ ಬದುಕು ನಡೆಸುತ್ತಿದ್ದಾರೆ. ಆದಾಗ್ಯೂ ನಮ್ಮ ದೇಶದ ಮುನ್ನಡೆಗೆ, ನಮ್ಮ ಜನತೆಯ ಏಳಿಗೆಗೆ ಅವರು ಕೊಡುತ್ತಿರುವ ಕಾಣಿಕೆ ತುಂಬಾ ಮಹತ್ವದ್ದಾಗಿದೆ. ಮಾನ್ಯ ಉಪಾಧ್ಯಕ್ಷರೇ, ಕಾಲಾನುಕಾಲದಿಂದ ನಮ್ಮ ದೇಶಕ್ಕೆ ಮಹಿಳೆಯರು ನೀಡಿದ ಅಮೂಲ್ಯ ಕಾಣಿಕೆಯನ್ನು ಕಲ್ಪಿಸಿಕೊಳ್ಳದೆ, ನಾವು ನಮ್ಮ ನಾಗರಿಕತೆಯ ಬಗ್ಗೆ ಮಾತನಾಡಲು ಸಾಧ್ಯವಿಲ್ಲ, ಮಹಿಳೆಯರು ನೀಡಿದ ಕಾಣಿಕೆ ನಮ್ಮ ಸಾಹಿತ್ಯ, ಸಂಸ್ಕೃತಿ ಮತ್ತು ಇತಿಹಾಸ ಅವಿಭಾಜ್ಯ ಅಂಗಗಳಾಗಿವೆ. ಅಷ್ಟೇಯೇಕೆ, ನಿಜವಾಗಿ ಹೇಳುವುದಾದರೆ, ಅದು ನಮ್ಮ ಪರಂಪರೆಯ ಬಳುವಳಿಯ ಭಾಗವೇ ಆಗಿದೆ. ಮಾನ್ಯರೆ, ನಾವು ಈವೆಲ್ಲ ಸಮಸ್ಯೆಗಳನ್ನು 1975 ರ ಅಂತರರಾಷ್ಟ್ರೀಯ ಮಹಿಳಾ ವರ್ಷದ ಹಿನ್ನಲೆಯಲ್ಲಿ ಚರ್ಚಿಸುತ್ತಿದ್ದೇವೆ. ಹೀಗಾಗಿ, ನಾವು

---

* ಭಾರತದಲ್ಲಿ ಮಹಿಳೆಯ ಸ್ಥಾನ ಕುರಿತು ಸಮಿತಿಯ ವರದಿಯ ಮೇಲೆ ನಡೆಸಲಾದ ಚರ್ಚೆಯಿಂದ, ರಾಜ್ಯಸಭೆ, 13 ಮೇ 1975, ಸಿ.ಸಿ 185 - 199;

ಇಂದು ಮಹಿಳೆಯರ ಸಮಸ್ಯೆಯನ್ನು ನೇರವಾಗಿ ಎದುರಿಸಿ, ಅವುಗಳ ಪರಿಹಾರಕ್ಕೆ ಒಂದು ಯೋಜನೆಯನ್ನು ಹಾಕಿಕೊಳ್ಳಬೇಕಿದೆ. ಒಂದು ಕಾರ್ಯಕ್ರಮ ರೂಪಿಸಬೇಕಾಗಿದೆ. ಇವೆಲ್ಲವನ್ನು ಜಗತ್ತಿನ ಮುಂದೆ ಪ್ರದರ್ಶನ ಮಾಡುವುದಕ್ಕೆ ಅಲ್ಲ, ಬದಲಾಗಿ ವಾಸ್ತವ ಬದುಕಿನಲ್ಲಿ ಜಾರಿಗೊಳಿಸಲು ನಾವು ಕಾರ್ಯ ಪ್ರವೃತ್ತರಾಗಬೇಕಾಗಿದೆ.

ಮಾನ್ಯ ಉಪಾಧ್ಯಕ್ಷರೆ, ಇದಕ್ಕೆ ಸಂಬಂಧಿಸಿ, ಈಗಾಗಲೇ ತೆಗೆದುಕೊಳ್ಳಲಾದ ಕ್ರಮಗಳ ಬಗ್ಗೆ ನಾನೀಗ ಪ್ರಸ್ತಾಪಿಸಬಯಸುತ್ತೇನೆ. ಈ ವರದಿಯನ್ನು ತಯಾರಿಸಿದ ಮಹಿಳೆಯರು ಸಹಜವಾಗಿಯೇ ಸುಶಿಕ್ಷಿತ ಮತ್ತು ಕುಲೀನ ವರ್ಗಕ್ಕೆ ಸೇರಿದವರಾಗಿದ್ದಾರೆ. ಆದಾಗ್ಯೂ, ಮಹಿಳೆಯ ಬಗ್ಗೆ ಒಂದಿಷ್ಟು ತಿಳುವಳಿಕೆ, ಸಹಾನುಭೂತಿ ತೋರುವ ಒಂದು ವರದಿಯನ್ನು ಅವರು ತಯಾರಿಸಿದ್ದಾರೆ, ಮಹಿಳೆಯ ಸ್ಥಿತಿಗತಿಯ ಕುರಿತು ಈ ವರದಿಯಲ್ಲಿ ಕೆಲವು ಅನಿಷ್ಟಗಳನ್ನು, ಮಹಿಳೆಯರಿಗೆ ಕಾಡುವ ಕೆಲವು ರೋಗಗಳನ್ನು ಕುರಿತು ಎತ್ತಿ ತೋರಿಸಲಾಗಿದೆ. ಇವೆಲ್ಲ ಅನಿಷ್ಟ ಮತ್ತು ರೋಗಗಳಿಂದ ನಾವಿಂದು ಬಳಲುತ್ತಿದ್ದೇವೆ. ಈ ಸಂದರ್ಭದಲ್ಲಿ ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಮಹಿಳೆಯರ ಕಾರಣಕ್ಕಾಗಿ, ನಮ್ಮ ದೇಶದಾದ್ಯಂತ ಆಂದೋಲನ ನಡೆಸಿರುವ ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವುಮೆನ್, ಆಲ್ ಇಂಡಿಯಾ ವುಮೆನ್ಸ್ ಕಾನ್ಫರೆನ್ಸ್ ಮತ್ತು ಇತರ ಸಂಘಟನೆಗಳಿಗೆ ನಾನು ನನ್ನ ಅಭಿನಂದನೆಗಳನ್ನು ಸಲ್ಲಿಸದೆ ಇರಲಾರೆ. ಇವೆಲ್ಲಾ ಸಂಘಟನೆಯ ಪ್ರಯತ್ನಗಳಿಗೆ ಸರ್ಕಾರ ತಿಳುವಳಿಕೆ ಮತ್ತು ಸಹಾನುಭೂತಿಯಿಂದ ಸ್ಪಂದಿಸುತ್ತದೆಂದು ಆಶಿಸುತ್ತೇನೆ. ಈ ದಾರಿಯಲ್ಲಿ ಸರ್ಕಾರ ತನ್ನ ಔದಾರ್ಯ ದೊರೆಯುವುದೆಂಬ ಭರವಸೆ ನನಗೆ ಇದೆ. ಸರ್ಕಾರದ ಈ ಕ್ರಮದಿಂದ ಈ ಸಂಘಟನೆಗಳು ಒಟ್ಟಾಗಿ ಆಂದೋಲನ ಸಮಿತಿಯ ಪರವಾಗಿ, ಮಂಡಿಸಿದ ಕಾರ್ಯಕ್ರಮಗಳೆಲ್ಲ ಕಾಗದದ ಮೇಲೆ ಉಳಿಯದೆ, ಬದುಕಿನ ವಾಸ್ತವವಾಗಬೇಕು. ಇದರಿಂದ ಸಾಮಾಜಿಕ, ಆರ್ಥಿಕ ಗುಲಾಮಗಿರಿಯಿಂದ ವಿಮೋಚನೆ ಬಯಸುತ್ತಿರುವ ಮಹಿಳೆಯರ ಕಲ್ಯಾಣವಾಗಬೇಕು. ಮಾನ್ಯರೆ, ಈ ವಿಷಯದಲ್ಲಿ ನಮ್ಮ ಸರ್ಕಾರದ ಜವಾಬ್ದಾರಿ ನಿಜವಾಗಿಯೂ ಮಹತ್ತರವಾಗಿದೆ.

ನಮ್ಮ ದೇಶದಲ್ಲಿಂದು ಅಸ್ತಿತ್ವದಲ್ಲಿರುವ ಪಾಳೇಗಾರಿ ಶಕ್ತಿಗಳು, ಗ್ರಾಮೀಣ ಭಾರತದಲ್ಲಿ ನಡೆಸಿದ ಅಧ್ವಾನ ಅದ್ದರಿಂದ ಉದ್ವಸ್ಥಗೊಂಡ ಜನರ ಬದುಕು, ಅದರಲ್ಲಿಯೂ ವಿಶೇಷವಾಗಿ, ಅಲ್ಲಿಯ ಮಹಿಳೆಯರ ಬದುಕು, ನಮ್ಮ ಸಮಾಜದಲ್ಲಿ ಆಳುತ್ತಿರುವ ಬಂಡವಾಳಶಾಹಿ ವ್ಯವಸ್ಥೆ ಮತ್ತು ಅನೇಕ ಕ್ಷೇತ್ರದಲ್ಲಿ ದಯನೀಯವಾಗಿ ವಿಫಲವಾಗಿರುವ ಸರ್ಕಾರದ ಪ್ರಯತ್ನಗಳು, ಮುಂತಾದ ಈ ಎಲ್ಲ ಅಡ್ಡಿ ಅಡಚಣೆಯ ಮಧ್ಯೆಯೂ ಮಹಿಳೆಯರ ಸ್ಥಾನ-ಮಾನಕ್ಕೆ ಸಂಬಂಧಿಸಿದಂತೆ, ಸಾಕಷ್ಟು ಪ್ರಗತಿಯನ್ನು ಸಾಧಿಸಲಾಗಿದೆ. ಆದ್ದರಿಂದ ಸರ್ಕಾರವು ತನ್ನ ಜವಬ್ದಾರಿಯನ್ನು ನಿಭಾಯಿಸುವ ದಾರಿಯಲ್ಲಿ ದೃಢವಾದ ಹೆಜ್ಜೆ

ಇಡಬೇಕಾಗಿದೆ. ಹೀಗೆ ಮಾಡಬೇಕಾದರೆ, ಸರ್ಕಾರವು ತನ್ನ ವಿಫಲತೆಯನ್ನು ವಿಮರ್ಶಾತ್ಮಕ ದೃಷ್ಟಿಯಿಂದ ನೋಡಿ, ಅದರ ಕಾರಣ ತಿಳಿಯಲು ಪ್ರಯತ್ನಿಸಬೇಕು. ನೀವು ನಮ್ಮ ಸಮಾಜದೆಡೆಗೆ ಒಂದಿಷ್ಟು ದೃಷ್ಟಿ ಹಾಯಿಸಿದರೆ ಸಾಕು, ಕೋಟಿ ಕೋಟಿ ಜನ ನಮ್ಮ ತಾಯಂದಿರು, ಅಕ್ಕಂದಿರು ದಿನನಿತ್ಯ ಬಡತನದಿಂದ ಬಳಲುತ್ತಿರುವುದು ಎದ್ದು ಕಾಣುತ್ತದೆ. ಅವರ ಹಿಂದುಳಿದಿರುವಿಕೆ ನಮ್ಮ ಮುಖಕ್ಕೆ ರಾಚುತ್ತದೆ. 1971 ರ ಜನಗಣತಿಯ ಪ್ರಕಾರ, ನಮ್ಮ ದೇಶದ 548 ಮಿಲಿಯನ್ ಒಟ್ಟು ಜನಸಂಖ್ಯೆಯಲ್ಲಿ 264 ಮಿಲಿಯನ್ ಮಹಿಳೆಯರಿದ್ದಾರೆ, ಜಗತ್ತಿನ ಎಷ್ಟೋ ರಾಷ್ಟ್ರಗಳು 264 ಮಿಲಿಯನ್ "ಜನಸಂಖ್ಯೆ" ಹೊಂದಿದೆ. ಚೀನಾ ಒಂದು ಬಿಟ್ಟರೆ, ಉಳಿದ ಯಾವುದೇ ರಾಷ್ಟ್ರದಲ್ಲಿ ಇಷ್ಟು ಸಂಖ್ಯೆಯ ಜನರಿಲ್ಲ. ಆದ್ದರಿಂದ, ಮಾನವತೆಯ ಒಂದು ದೊಡ್ಡ ಜನವಿಭಾಗವೇ ನಮ್ಮಲ್ಲಿದೆ, ಇದು ಕೇವಲ ಭಾರತೀಯ ಮಹಿಳೆಯ ಸಮಸ್ಯೆಯಲ್ಲ, ಮಾನವತೆಯ ಬಹು ದೊಡ್ಡ ವಿಭಾಗವೇ ಪರಾವಲಂಬಿಯಾಗಿ ಹಿಂದುಳಿದ ಸ್ಥಿತಿಯಲ್ಲಿ ನರಳುತ್ತಿದೆ. ಅವರ ವಿಮೋಚನೆಗೆ ಸಾಮಾಜಿಕ ಮುನ್ನಡೆಯ ಕಾರ್ಯಕ್ರಮ ರೂಪಿಸಿ, ಅವರನ್ನು ಬಂಧನದಿಂದ ವಿಮುಕ್ತಿಗೊಳಿಸಿ, ಆಧುನಿಕ ಸಮಾಜದ ಮಟ್ಟಕ್ಕೆ ಎತ್ತದೆ ಹೋದರೆ, ನಮ್ಮ ದೇಶದಲ್ಲಿಯಾಗಲಿ, ನಿಜವಾದ ಪ್ರಗತಿ ಸಾಧ್ಯವಿಲ್ಲ ; ಮಹಿಳಾ ವಿಮೋಚನೆಯೆಂದರೆ, ಒಂದು ಜನವಿಭಾಗದ ವಿಮೋಚನೆಯ ಸಮಸ್ಯೆಯಲ್ಲ. ಬದಲಾಗಿ, ಅದು ಸತ್ವತಃ ಇಡೀ ಮಹಿಳಾ ಕುಲವನ್ನು ಅವನತಿ ಸ್ಥಿತಿಯಿಂದ ಮೇಲೆತ್ತುವ, ಬಂಧನದಿಂದ ಬಿಡುಗಡೆಗೊಳಿಸುತ್ತಿರುವ, ಅವರ ಸಂಕಟದಿಂದ ಪಾರು ಮಾಡುವ, ಅನ್ಯಾಯ, ಅತ್ಯಾಚಾರಗಳಿಂದ ಅವರನ್ನು ರಕ್ಷಿಸುವ, ಅಷ್ಟೆಯಲ್ಲ, ಅಂತಿಮವಾಗಿ ನಮ್ಮ ಸಾಮಾಜಿಕ ಬದುಕಿನ ನೆಲೆನಿಟ್ಟನ್ನು ನಾಶ ಮಾಡುವ ದುರ್ದೆಸೆಯಿಂದ ಅವರನ್ನು ರಕ್ಷಿಸುವ ಒಂದು ಸಂಕೀರ್ಣ ಕ್ರಿಯೆಯಾಗಿದೆ.

ಮಾನ್ಯ ಉಪಾಧ್ಯಕ್ಷರೆ, ನಾನು ಜನಸಂಖ್ಯೆಯ ಒಂದು ಅಂದಾಜು ವಿಚಾರವನ್ನು ತಮ್ಮ ಮುಂದೆ ಇಟ್ಟಿದ್ದೇನೆ ; ಮತ್ತು ಅದೇ ಸಮಯದಲ್ಲಿ ಮಹಿಳೆಯ ಸಂಖ್ಯೆಯ ಸಂಗತಿಯನ್ನು ಸಾದರಪಡಿಸಿದ್ದೇನೆ. 210 ಮಿಲಿಯನ್ ಮಹಿಳೆಯರು ನಮ್ಮ ಗ್ರಾಮಾಂತರ ಪ್ರದೇಶದಲ್ಲಿ ಮಹಿಳೆಯರ ಒಟ್ಟು 264 ಮಿಲಿಯನ್ ಮಹಿಳೆಯರಲ್ಲಿ 215.3 ಮಿಲಿಯನ್ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಸ್ವಾತಂತ್ರ್ಯೋತ್ಸವದ 25 ವರ್ಷಗಳ ನಂತರವೂ ಈ ಸ್ಥಿತಿಯಿದೆ ; ಸುಮಾರು 27 ವರ್ಷಗಳ ಈ ಅವಧಿಯಲ್ಲಿ ನಾವು ಸಾಧಿಸಿರುವ ಮಹಿಳಾ ಸಾಕ್ಷರತೆಯ ಪ್ರಮಾಣ, ಕೇವಲ ಶೇಕಡ 18.7 ರಷ್ಟು ಮಾತ್ರ ನಿರಪೇಕ್ಷವಾಗಿ ಹೇಳುವುದಾದರೆ, ನಮ್ಮ ಸ್ವಾತಂತ್ರ್ಯಪೂರ್ವದಲ್ಲಿ ಇದ್ದುದಕ್ಕಿಂತಲೂ ಹೆಚ್ಚಿನ ಸಂಖ್ಯೆಯ ಮಹಿಳೆಯರು ಇಂದು ಅನಕ್ಷರಸ್ಥರಾಗಿದ್ದಾರೆ. ಅನಕ್ಷರತೆ ನಮ್ಮ ಮಹಿಳೆಯರಿಗೆ ಅಂಟಿಕೊಂಡಿರುವ ಒಂದು ಶಾಪ ಆಗಿದೆ. ಸರ್ಕಾರವು ಅವರನ್ನು ಸಾಕ್ಷರರನ್ನಾಗಿ ಮಾಡಿ, ಅವರ ಅಜ್ಞಾನವನ್ನು ತೊಲಗಿಸುವಲ್ಲಿ ಸಾಕಷ್ಟು ಕಾಳಜಿ ತೋರಿಸಿಲ್ಲ. ಇದಕ್ಕೆ ಕಾರಣ, ನಿಚ್ಚಳವಾಗಿ ಕಾಣುತ್ತಿದೆ. ಕೆಲವು ಪಟ್ಟಭದ್ರ

ಹಿತಾಸಕ್ತಿಗಳು ಮಹಿಳೆಯರನ್ನು ಅನಕ್ಷರತೆ ಮತ್ತು ಅಜ್ಞಾನದ ಸ್ಥಿತಿಯಲ್ಲಿಯೇ ಇಡುವ ಮೂಲಕ ತಮ್ಮ ಹಿತ ಸಾಧನೆಗೆ ಮುಂದಾಗಿವೆ. ಜನರನ್ನು ಶೋಷಿಸಿ. ಕೊಳ್ಳೆ ಹೊಡೆಯುವುದೇ ತಮ್ಮ ನಂಬುಗೆಯ ನೆಲೆಯನ್ನಾಗಿ ಮಾಡಿಕೊಂಡಿರುವ ಪಟ್ಟಭದ್ರ ಅನ್ಯಾಯದ ಮೇಲೆ ಕೊಬ್ಬುತ್ತಿದ್ದಾರೆ ; ಮತ್ತು ಇಂತಹ ಅನ್ಯಾಯದ ಬಳುವಳಿಯನ್ನು ಅವರು ಸಮಾಜಕ್ಕೆ ನೀಡುತ್ತಿದ್ದಾರೆ.

ಈ ಸಂದರ್ಭದಲ್ಲಿ ನಾವು ಅನೇಕ ಸಂಗತಿಗಳನ್ನು ಪರಿಗಣಿಸಬೇಕಾಗಿದೆ, ನಮ್ಮ ದೇಶದ ಒಟ್ಟು ದುಡಿಯುವ ಜನಸಂಖ್ಯೆ 180.4 ಮಿಲಿಯನ್, ಇವರಲ್ಲಿ 149.1 ಮಿಲಿಯನ್ ಪುರುಷರಿದ್ದಾರೆ, 31.3 ಮಿಲಿಯನ್ ಮಾತ್ರ ಮಹಿಳೆಯರಿದ್ದಾರೆ ; ಇದು ಈ ದುಸ್ಥಿತಿಯ ದಾರುಣ ಚಿತ್ರಣವಾಗಿದೆ. ಮೊದಲನೆಯದಾಗಿ, ನಮ್ಮ ಒಟ್ಟು ಜನಸಂಖ್ಯೆಗೆ ಹೋಲಿಸಿದರೆ, ದುಡಿಯುವ ಜನರ ಸಂಖ್ಯೆ ತುಲನಾತ್ಮಕವಾಗಿ ತೀರಾ ಸಣ್ಣದಿದೆ. ಮೇಲಾಗಿ, ದುಡಿಯುವ ಮಹಿಳೆಯರ ಸಂಖ್ಯೆಯಂತೂ ತುಂಬಾ ನಗಣ್ಯವಾಗಿದೆ. 31 ಮಿಲಿಯನ್ ಮಾತ್ರ. ಇಷ್ಟೇ ಬೃಹತ್ ಸಂಖ್ಯೆಯ ಮಹಿಳೆಯರು ನಿರುದ್ಯೋಗಿಗಳಾಗಿದ್ದಾಗ, ಕೃಷಿ ಅಥವಾ ಕೈಗಾರಿಕೋದ್ಯಮದ ಉತ್ಪಾದನೆಯಲ್ಲಿ ತೊಡಗಿಸಲಾಗದ ಇಂತಹ ಬೃಹತ್ ಸಂಖ್ಯೆಯ ಜನವಿಭಾಗವೆಂದು ಉದ್ಯೋಗರಹಿತವಾಗಿದ್ದಾಗ ದೇಶ ಮುನ್ನಡೆ ಸಾಧಿಸುವುದಾದರೂ ಹೇಗೆ? ಉತ್ಪಾದನಾಶೀಲ ಶ್ರಮದಿಂದ ಹೊರಗೆ ಉಳಿಯುವ ಮಿಲಿಯಾಂತರ ಜನ ಮಹಿಳೆಯರು ಅನಿವಾರ್ಯವಾಗಿ, ದೇಶದ ಮುನ್ನಡೆಗೆ ಏನನ್ನೂ ನೀಡಲು ಸಾಧ್ಯವಾಗುತ್ತಿಲ್ಲ. ಇದರಿಂದ ಸಂಕಟಕ್ಕೊಳಗಾಗುತ್ತಿರುವವರು ಕೇವಲ ಮಹಿಳೆಯರಷ್ಟೇಯಲ್ಲ, ಅವರ ನಿರುದ್ಯೋಗದ ದುಷ್ಪರಿಣಾಮಕ್ಕೆ ಇಡೀ ಸಮಾಜ ಬಲಿಯಾಗುತ್ತಿದೆ.

ಸಮಾಜವಾದಿ ಜಗತ್ತಿನಲ್ಲಿ ಮಹಿಳೆಯರು ಸಾಧಿಸುವ ಅದ್ಭುತ ಸಂಗತಿಗಳನ್ನು ನಾವು ನೋಡಿದ್ದೇವೆ. ಅಲ್ಲಿ ಅವರು ಬಾಹ್ಯಾಕಾಶಯಾನ ಕೈಗೊಂಡು ಚಂದ್ರನಲ್ಲಿಗೂ ಹಾರುತ್ತಿದ್ದಾರೆ. ಜೊತೆಗೆ, ಇನ್ನಾವುದೇ ಕ್ಷೇತ್ರದಲ್ಲಿಯೂ ಪುರುಷನಿಗೆ ಸರಿಮಿಗಿಲಾಗಿ ಹೆಜ್ಜೆ ಹಾಕುತ್ತಿದ್ದಾರೆ, ಇಂಜಿನಿಯರ್, ಡಾಕ್ಟರ್, ತಂತ್ರಜ್ಞರೇ, ಮೊದಲಾದ ವಿಭಿನ್ನ ಪರಿಣತಿಯ ಪುರುಷ ಸಮಾನ ಸಾಮರ್ಥ್ಯದ ಹೇರಳ ಮಹಿಳೆಯರು ಹೊರಹೊಮ್ಮುತ್ತಿದ್ದಾರೆ. ಆದರೆ, ನಾವಾದರೋ ಇಲ್ಲಿ ಹಳೆಯ ನಾಗರೀಕತೆಯಲ್ಲಿಯೇ ಸಿಕ್ಕು ನರಳುತ್ತಿದ್ದೇವೆ. ಕೃಷಿ ಕ್ಷೇತ್ರದಲ್ಲಿಯೇ ಬಹುಸಂಖ್ಯಾತ ಮಹಿಳೆಯರು ತೊಡಗಿಸಿಕೊಂಡಿರುವ ನಮ್ಮ ದೇಶದಲ್ಲಿ, ಅವರ ದೈನಂದಿನ ಹಕ್ಕನ್ನು ಮನ್ನಿಸಲಾಗುತ್ತಿಲ್ಲ. ನೈಜವಾಗಿ ಅವರಿಗೆ ದೊರೆಯಬೇಕಾದ್ದುದರಿಂದಲೂ ಅವರನ್ನು ವಂಚಿಸಲಾಗುತ್ತಿದೆ. ಅನೇಕ ರೀತಿಯ ದೌರ್ಜನ್ಯ, ದಬ್ಬಾಳಿಕೆಗೆ ಈಡಾಗುತ್ತಿರುವ ಅವರು ಯಾತನಾಮಯವಾದ ಬದುಕನ್ನು ನಡೆಸುತ್ತಿದ್ದಾರೆ. ಸಮಾನ ಕೆಲಸಕ್ಕೆ ಸಮಾನ ವೇತನ ಎಂಬ ಘೋಷಣೆಯೇನೋ ನಮ್ಮಲ್ಲುಂಟು. ಆದರೆ, ಮಹಿಳೆಯರಿಗೆ ಸಂಬಂಧಿಸಿದಂತೆ,

ಇವತ್ತಿಗೂ ಸಂಪೂರ್ಣವಾಗಿ, ಅದು ಜಾರಿಯಾಗಿಲ್ಲ. ನಾವು ಸಮಾನ ಕೆಲಸಕ್ಕೆ ಸಮಾನ ವೇತನವೆಂಬ ಘೋಷಣೆಯನ್ನು ನಮ್ಮ ಸಂವಿಧಾನದ ಅಂಗವನ್ನಾಗಿ ಮಾಡಿಕೊಂಡಿದ್ದೇವೆ.

ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ 3 ನೇ ವಿಧಿಗೆ ರುಜುವನ್ನು ಹಾಕಿದ್ದೇವೆ ಆದರೆ, ಅವುಗಳನ್ನು ಕಾರ್ಯಗತಗೊಳಿಸುವಲ್ಲಿ ಮಾತ್ರ ಯಾವಾಗಲೂ ಹಿಂದೇಟು ಹಾಕುತ್ತಿದ್ದಾರೆ. ನಮ್ಮ ಸಮಾಜದ ವಾಸ್ತವಿಕ ಬದುಕಿನಲ್ಲಿ ಹೇಗೆ ಮಹಿಳೆಯರು ತಾರತಮ್ಯ ಭಾವಕ್ಕೆ ಗುರಿಯಾಗುತ್ತಿದ್ದಾರೆ. ಅವರನ್ನು ಉತ್ಪಾದನಾ ಕ್ಷೇತ್ರದಿಂದ ಹೇಗೆ ದೂರ ಇಡಲಾಗುತ್ತಿದೆ ಎನ್ನುವ ಸತ್ಯಾಂಶವನ್ನು ತಮ್ಮ ಮನಗಾಣಿಸುವ ಉದ್ದೇಶದಿಂದಲೇ ನಾನು ಈ ಎಲ್ಲ ಉದಾಹರಣೆಗಳನ್ನು ನೀಡುತ್ತಿದ್ದೇನೆ.

ಮಾನ್ಯ ಉಪಾಧ್ಯಕ್ಷರೇ, ಈಗ ಇದಕ್ಕೆ ಸಂಬಂಧಿಸಿ, ಇನ್ನೂ ಒಂದೆರಡು ವಿಚಾರವನ್ನು ನಿಮ್ಮ ಮುಂದೆ ಇಡಬಯಸುತ್ತೇನೆ. ಯಾಕೆಂದರೆ, ಇವು ಅತ್ಯಂತ ಮಹತ್ವದವುಗಳಾಗಿವೆ. ಕೊನೆಯ ಪಕ್ಷ ನಮ್ಮ ಮಟ್ಟಿಗಾದರೂ ಅವುಗಳಿಗೆ ಅಂತಹ ಮಹತ್ವವಿದೆ ಎಂದು ಭಾವಿಸಿದ್ದೇನೆ. ಒಂದು ಮಾತನ್ನು ನಿಮಗೆ ಸ್ಪಷ್ಟಪಡಿಸಬಯಸುತ್ತೇನೆ. ಬಂಡವಾಳಶಾಹಿ ವ್ಯವಸ್ಥೆಯನ್ನು ನಿರ್ನಾಮಗೊಳಿಸಿ,ಸಮಾಜವಾದಿ ವ್ಯವಸ್ಥೆಯನ್ನು ಸಂಸ್ಥಾಪಿಸುವವರೆಗೆ ಮಹಿಳೆಯರ ಸಾಮಾಜಿಕ, ಆರ್ಥಿಕ, ವಿಮೋಚನೆ, ಸಂಪೂರ್ಣ ವಿಮೋಚನೆ, ಸಾಧ್ಯವಿಲ್ಲ. ದುಡಿಯುವ ಜನವರ್ಗವು ರಾಷ್ಟ್ರದ ಉನ್ನತ ಸ್ಥಾನ-ಮಾನಗಳಿಗೆ ತಲುಪುವವರೆಗೆ, ಕಾರ್ಮಿಕ ವರ್ಗವು ಈ ನಮ್ಮ ದೇಶದ ಆಳುವ ವರ್ಗವಾಗಿ ಮಾರ್ಪಡುವವರೆಗೆ ಈ ಸಾಧನೆ ಸಾಧ್ಯವಿಲ್ಲ. ಬಂಡವಾಳಶಾಹಿ ವ್ಯವಸ್ಥೆ ಅಸ್ತಿತ್ವದಲ್ಲಿರುವವರೆಗೆ ಸಂಪೂರ್ಣ ಸಾಮಾಜಿಕ, ಆರ್ಥಿಕ, ವಿಮೋಚನೆ, ಎನ್ನುವುದು ಅಸಾಧ್ಯದ ಮಾತು. ಮೇಲಾಗಿ, ಈ ಬಗ್ಗೆ ನನಗೆ ಯಾವುದೇ ಭ್ರಮೆಗಳಿಲ್ಲ.

ಮಾನ್ಯ ಉಪಾಧ್ಯಕ್ಷರೇ, ಅನೇಕ ವರ್ಷಗಳ ಹಿಂದೆ ಮಾರ್ಕ್ಸ್ ಮತ್ತು ಎಂಗಿಲ್ಸ್ ಹೇಳಿದ ಒಂದು ಮಾತನ್ನು ಉದ್ಧರಿಸಿ, ನನ್ನ ನಿಲುವನ್ನು ಸ್ಪಷ್ಟಪಡಿಸಬಯಸುತ್ತೇನೆ. ಮಹಿಳೆಯನ್ನು ಸಾಮಾಜಿಕ ಉತ್ಪಾದನಾ ಪ್ರಕ್ರಿಯೆಯಿಂದ ಹೊರಗಿಟ್ಟು ಎಲ್ಲಿಯವರೆಗೆ ಅವರನ್ನು ಖಾಸಗಿ ಮನೆಗೆಲಸಕ್ಕೆ ಸೀಮಿತವಾಗಿ ಇಡಲಾಗುತ್ತದೆಯೋ ಅಲ್ಲಿಯವರೆಗೆ ಮಹಿಳೆಗೆ ವಿಮೋಚನೆ ಮತ್ತು ಪುರುಷನೊಂದಿಗಿನ ಅವಳ ಸಮಾನತೆ ಸಾಧ್ಯವಿಲ್ಲ. ಮಹಿಳೆಯರ ಸಮಸ್ಯೆ ಕುರಿತು ಮಾತನಾಡುವಾಗ ಗಾಂಧೀಜಿಯೂ ಇಂತಹದೇ ಭಾವನೆಯನ್ನು ವ್ಯಕ್ತಮಾಡಿದ್ದಾರೆ. ಆದರೆ, 125 ವರ್ಷಗಳ ಹಿಂದೆಯೇ, ಮಾರ್ಕ್ಸ್‌ವಾದದ ಸಂಸ್ಥಾಪಕರಾದ ಮಾರ್ಕ್ಸ್ ಮತ್ತು ಎಂಗಿಲ್ಸ್ ತಮ್ಮ ಕಮುನಿಸ್ಟ್ ಮ್ಯಾನಿಫೆಸ್ಟೋದಲ್ಲಿ ಈ ಕುರಿತು ಸ್ಪಷ್ಟವಾಗಿ ನಮೂದಿಸಿದ್ದಾರೆ, ಅವರ ಶ್ರೇಷ್ಠ ವಿಚಾರಧಾರೆ ಹೀಗಿದೆ.

"ಧನಿಕ ವರ್ಗವು ಕುಟುಂಬದ ಮಧುರ ಬಾಂಧವ್ಯದ ಭಾಗವನ್ನು ಹರಿದು ಚಿಂದಿ ಮಾಡಿದೆ ಅಷ್ಟೇಯಲ್ಲ, ಅದು ಕೌಟುಂಬಿಕ ಸಂಬಂಧಗಳನ್ನು ಕೇವಲ ಹಣಕಾಸಿನ ಸಂಬಂಧಗಳನ್ನಾಗಿ ಪರಿವರ್ತಿಸಿದೆ. ಮುಂದುವರೆದು ಅವರು ಮತ್ತೇ ಅದೇ ಮ್ಯಾನಿಫೆಸ್ಟೋದಲ್ಲಿ -

"ಧನಿಕನ ದೃಷ್ಟಿಯಲ್ಲಿ ಅವನ ಹೆಂಡತಿಯೂ ಒಂದು ಉತ್ಪಾದನೆಯ ಸಾಧನ, ಸಲಕರಣೆಯಾಗಿದ್ದಾಳೆ. "ಕಮ್ಯುನಿಸ್ಟರು ಮಹಿಳೆಯರ ಸಮುದಾಯಕರಣ" ಗೊಳಿಸುತ್ತಿದ್ದಾರೆ ಎಂದು ಧನಿಕರು ಕಮ್ಯುನಿಸ್ಟರನ್ನು ತೆಗಳುತ್ತಿದ್ದರು. ಇಂದಿನ ಕಾಲದಲ್ಲಿ ಅದು ಅವರ ನಿತ್ಯದ ಒಣ ಮಂತ್ರವಾಗಿತ್ತು. ಆದರೆ, ಈಗ ಅದನ್ನು ಅವರು ಹೇಳುವುದಿಲ್ಲ. ಮಾರ್ಕ್ಸ್ ಮತ್ತು ಎಂಗೆಲ್ಸ್‌ರು ಇನ್ನೊಂದು ಉತ್ತರವನ್ನೂ ಕೊಟ್ಟಿದ್ದಾರೆ. ಮಾನ್ಯ ಸದಸ್ಯರು ಅದನ್ನು ಮೆಚ್ಚುವರೆಂಬ ಭರವಸೆ ನನಗಿದೆ. "ನಮ್ಮ ಧನಿಕರು ತಮ್ಮ ಆಳು - ಕಾಳುಗಳ ಕಾರ್ಮಿಕ ವರ್ಗದವರ ಹೆಂಡರು, ಹೆಣ್ಣು ಮಕ್ಕಳನ್ನು ತಮ್ಮ ಮನಬಂದಂತೆ ಬಳಸುವಷ್ಟಕ್ಕೇ ತೃಪ್ತರಾಗುವುದಿಲ್ಲ. ಅವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಪರಸ್ಪರರ ಮಡದಿಯರ ಮಾನಭಂಗ ಮಾಡುವುದರಲ್ಲಿಯೂ ಅತ್ಯಂತ ಹೆಚ್ಚಿನ ಸಂತೋಷಪಡುತ್ತಿದ್ದಾರೆ".

ಹೀಗೆಂದ ಮಾತ್ರಕ್ಕೆ ಪ್ರತಿಯೊಬ್ಬ ಬಂಡವಾಳಶಾಹಿಯೂ ವಿಷಯ ಲಂಪಟನಾಗಿರುತ್ತಾನೆಂದು ಅರ್ಥವಲ್ಲ, ಅವನ ಮನೋಧರ್ಮ ಹಾಗಿರಬಹುದು, ಆದರೆ, ವಾಸ್ತವಿಕವಾಗಿ ಅವನು ಹಾಗಾಗಲೂ ಸಾಧ್ಯವಿಲ್ಲ. ಆದರೂ, ಅವನ ಮನೋಧರ್ಮದ ಕುರಿತ ಮಾತಂತೂ ಸತ್ಯವಾಗಿಯೇ ಇದೆ. ಇದು ಸಾಮಾನ್ಯವಾಗಿ ಮಹಿಳೆಯರ ಕುರಿತು ಧನಿಕ ಬಂಡವಾಳಶಾಹಿ ವರ್ಗದ ಮನೋಭಾವವಾಗಿರುತ್ತದೆ. ಅದೇ ಮೆನಿಫೆಸ್ಟೋದಲ್ಲಿ ಮಾರ್ಕ್ಸ್ ವಿಶದಪಡಿಸಿದ್ದೇನೆಂದರೆ, "ಮಹಿಳೆಯರು ಕೇವಲ ಉತ್ಪಾದನೆಯ ಸಾಧನ ಸರಕಾಗಿರುವ ಸ್ಥಿತಿಗತಿಯನ್ನು ನಿರ್ಮೂಲನೆ ಮಾಡುವುದೇ ನಮ್ಮ ಗುರಿಯಾಗಿದೆ." ಸಾಮಾಜಿಕ ವಿಮೋಚನೆಗೆ ಕಮ್ಯುನಿಸ್ಟ್ ಮ್ಯಾನಿಫೆಸ್ಟೋ ಕೆಲವು ವಿಚಾರಗಳನ್ನು ಮಂಡಿಸಿದೆ. ಕಮ್ಯುನಿಸ್ಟರು ಮೊದಲಿನಿಂದಲೂ ಅವೈಚಾರಿಕ ಕನಸನ್ನು ನನಸು ಮಾಡಲು ಹೋರಾಡುತ್ತಲೇ ಬಂದಿದ್ದಾರೆ. ಇಂದು ಜಗತ್ತಿನ ಒಂದು ಮೂರನೇ ಭಾಗದಲ್ಲಿ ವಿಚಾರಗಳು ತಮ್ಮ ವಿಜಯ ದುಂದುಭಿಯನ್ನು ಮೊಳಗಿಸಿವೆ. ಜಗತ್ತಿನ ಮೂರನೇ ಒಂದು ಭಾಗದ ಜನರು ತಮ್ಮ ಮಹಿಳೆಯರಿಗೆ ಪುರುಷರೊಂದಿಗೆ ಬದುಕಿನ ಸಮಾನ ಸ್ಥಾನಮಾನ ಕಲ್ಪಿಸಿಕೊಟ್ಟಿದ್ದಾರೆ. ಇವೆಲ್ಲ ವಿಷಯಗಳನ್ನು ಹೇಳುವ ಕಾರಣವೇನೆಂದರೆ, ಸಮಸ್ಯೆಯ ಮೂಲವನ್ನು ವಿವರಿಸುವುದೇ ನನ್ನ ಉದ್ದೇಶವಾಗಿದೆ. ಮಹಿಳೆಯರ ಸ್ಥಿತಿಗತಿಯಲ್ಲಿ ಸುಧಾರಣೆಗಳನ್ನು ತಂದು ಅವರು ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಮುನ್ನಡೆ ಸಾಧಿಸುವಂತೆ ಕ್ರಮ ಕೈಗೊಳ್ಳುವುದು ಸಾಧ್ಯವಿಲ್ಲವೇ ? ಅವರು ಆರ್ಥಿಕ ಕ್ಷೇತ್ರದಲ್ಲಿ ಸ್ವಾವಲಂಬಿಗಳಾಗಿ ಅನೇಕ ವಿಧದಿಂದ ಪುರುಷನ ಮೇಲಿನ ಅವರ ಅವಲಂಬನೆ ಕೊನೆಗಾಣಿಸಿಕೊಳ್ಳಲು ಸಾಧ್ಯವಿಲ್ಲವೇ?

ಮಾನ್ಯ ಉಪಾಧ್ಯಕ್ಷರೆ, ತಮಗೆ ಗೊತ್ತಿದೆ, ನಮ್ಮ ಸಂವಿಧಾನದಲ್ಲಿ ಈ ಕುರಿತು ಅನೇಕ ಅವಕಾಶಗಳನ್ನು ಕಲ್ಪಿಸಲಾಗಿದೆ. ತಮಗೆ ತಿಳಿದೇಯಿದೆ, ಅದರೂ, ನಮ್ಮ ಸಂವಿಧಾನದಲ್ಲಿಯ ಕೆಲವು ವಿಧಿಗಳನ್ನು ನಾನು ಈ ಸದನ ಪುನರಪಿ ನೆನಪಿಸಬಯಸುತ್ತೇನೆ. ನಮ್ಮ ಸಂವಿಧಾನದ 14ನೇ ವಿಧಿಯ ಪ್ರಕಾರ, ಕಾಯ್ದೆಯ ಕಣ್ಣಲ್ಲಿ ಸರ್ವರೂ ಸಮಾನರು. ಆದರೆ, ಕಾಯ್ದೆಯ ದೃಷ್ಟಿಯಲ್ಲಿ ನಮ್ಮ ಮಹಿಳೆಯ ಸಮಾನರಾಗಿದ್ದಾರೆಯೇ ? ವರದಕ್ಷಿಣೆ ನಿಷೇಧಿಸಲಾಗಿದೆ. ಆದರೆ, ಆ ನಿಷೇಧವನ್ನು ಜಾರಿಗೊಳಿಸಲಾಗಿದೆಯೇ ? ವರದಕ್ಷಿಣೆಯ ಪಿಶಾಚಿ ಬಡಿದುಕೊಂಡ ರಣಹದ್ದುಗಳನ್ನು ಹದ್ದುಬಸ್ತಿನಲ್ಲಿಡಲೂ ಕಾಯ್ದೆಯ ರಕ್ಷಣೆ ಏನಾದರೂ ಇದೆಯೇ ? ಯಾವುದೇ ಎಗ್ಗಿಲ್ಲದೇ ವರದಕ್ಷಿಣೆಯನ್ನು ಕೊಟ್ಟು ತೆಗೆದುಕೊಳ್ಳಲಾಗುತ್ತಿದೆ. ನಮ್ಮ ಸಮಾಜದಲ್ಲಿ ಈ ಕಾಯ್ದೆಯನ್ನು ಜಾರಿಗೊಳಿಸುವ ಹೊಣೆ ಹೊತ್ತವರೇ ಒಂದಿಲ್ಲ ಒಂದು ರೂಪದಲ್ಲಿ ವರದಕ್ಷಿಣೆ ಕೊಡುವ - ತೆಗೆದುಕೊಳ್ಳುವ ಅಕೃತ್ಯದಲ್ಲಿ ತೊಡಗಿದ್ದಾರೆ. ವಸ್ತುಸ್ಥಿತಿ ಹೀಗಿದ್ದಾಗ, ವರದಕ್ಷಿಣೆ ವಿರೋಧಿ ಕಾಯ್ದೆ ಜಾರಿಗೊಳ್ಳಬೇಕೆಂದು, ಬಯಸುವುದಾದರೂ ಹೇಗೆ ? ಅದರ ಹಣೆಬರಹವೂ ಅಸ್ಪೃಶ್ಯತಾ ವಿರೋಧಿ ಕಾಯ್ದೆಯ ಹಣೆಬರಹದಂತೆಯೇ ಆಗಿದೆ. ಮಹಿಳೆಯರ ಸ್ಥಾನ-ಮಾನ ಕುರಿತ ಸಮಿತಿಯ ವರದಿಯಲ್ಲಿ ವರದಕ್ಷಿಣೆಯ ನಿಷೇಧ ಕಾಯ್ದೆ ಅನುಸಮವಾಗಿ ವಿಫಲವಾಗಿದೆ ಎಂದು - ತುಂಬ ಸರಿಯಾಗಿಯೇ ಹೇಳಲಾಗಿದೆ; ಈ ಕಾರಣಕ್ಕೆ ಆ ವರದಿಯ ಲೇಖಕರು ನನ್ನ ಅಭಿನಂದನೆಗೆ ಅರ್ಹರಾಗಿದ್ದಾರೆ. ವರದಕ್ಷಿಣೆ ನಿಷೇಧ ಕಾಯ್ದೆ ಭರ್ಜರಿಯಾಗಿ ವಿಫಲವಾಗಿದೆ ಎಂದಾದರೆ, ಅದಕ್ಕೆ ಯಾರು ಹೊಣೆ ? ಸಂಸತ್ತಿನಲ್ಲಿ ಪಾಸಾದ ಕಾಯ್ದೆ ಸರ್ಕಾರದಿಂದ ಜಾರಿಗೊಳಿಸಲಾಗುತ್ತಿಲ್ಲ, ವಾಸ್ತವ ಬದುಕಿನಲ್ಲಿ ಅದು ಅಳವಡಿಸಲ್ಪಡುತ್ತಿಲ್ಲಯೆಂದರೆ, ಯಾರಾದರೂ, ಆದರ ಹೊಣೆ ಹೊರಲೇಬೇಕಲ್ಲವೇ ? ನಾನು ಶ್ರೀಮತಿ ಇಂದಿರಾಗಾಂಧಿ ಅವರ ಸರ್ಕಾರ, ರಾಜ್ಯ ಸರ್ಕಾರಗಳು ಶ್ರೀ ನೂರುಲ್ ಹಸನ್ ಮತ್ತು ಅವರ ಸಹದ್ಯೋಗಿಗಳು ಇವರನ್ನೆಲ್ಲಾ ಕೇಳಬಯಸುತ್ತೇನೆ, ಸಂಸತ್ತು ಪಾಸು ಮಾಡಿದ ಕಾಯ್ದೆ ಜಾರಿಗೊಳಿಸಿ, ಮಹಿಳೆಯರ ರಕ್ಷಣೆ ಯಾಕೆ ಮಾಡಲಾಗುತ್ತಿಲ್ಲ ? ವರದಕ್ಷಿಣೆ ನಿಷೇಧಿಸಿ ಕಟ್ಟು ನಿಟ್ಟಿನ ಕ್ರಮ ಯಾಕೆ ಕೈಗೊಳ್ಳುತ್ತಿಲ್ಲ ? ಯಾಕೆ ಆ ಕಾಯ್ದೆಯನ್ನು ನಿರ್ವೀರ್ಯಗೊಳಿಸಲಾಗಿದೆ ? ಈ ಯಾವುದಕ್ಕೂ ಅವರಲ್ಲಿ ವಿವರಣೆಯಿಲ್ಲ ಆದ್ದರಿಂದ ತಾವು ಈ ಎಲ್ಲ ಪ್ರಶ್ನೆ ಕುರಿತು ಚಿಂತಿಸಬೇಕೆಂದು ಕೋರುತ್ತೇನೆ.

ವರದಕ್ಷಿಣೆ ಸ್ವೀಕರಿಸುವುದನ್ನು ಒಂದು ದಂಡಾರ್ಹ ಅಪರಾಧವೆಂದು ಘೋಷಿಸಬೇಕು,- ವರದಕ್ಷಿಣೆ - ಸ್ವೀಕರಿಸುವುದು ಒಂದು ಅಪರಾಧವೆಂದು ನೀವು ಭಾವಿಸುವುದಾದರೆ, ಅದನ್ನು ಬೇಡುವ ಜನರಿಗೂ ಸೂಕ್ತ ದಂಡ ವಿಧಿಸುವಂತೆ ತಕ್ಕ ಶಿಕ್ಷೆಗೆ ಅವಕಾಶ ಕಲ್ಪಿಸುವಂತೆ ನಾವು ಸಂಬಂಧಪಟ್ಟ ಕಾಯ್ದೆಗೆ ತಿದ್ದುಪಡಿ ತರಬೇಕಾಗಿದೆ. ವರದಕ್ಷಿಣೆ ಸ್ವೀಕರಿಸುವುದು ಒಂದು ಅಪರಾಧವಾಗಿದೆ. ನಮ್ಮ ಆರ್ಥಿಕ ಬದುಕಿನಲ್ಲಿ ಕಾಣ ಸಿಗುವ

ಇನ್ನೂ ಅನೇಕ ಅಪರಾಧಗಳಿಗಿಂತಲೂ, ವರದಕ್ಷಿಣೆ ಸಾಮಾಜಿಕವಾಗಿ ಹೆಚ್ಚು ಖಂಡನಾರ್ಹವಾಗಿದೆ. ಯಾಕೆಂದರೆ, ಈ ಅಪರಾಧದ ಬಲಿಪಶುಗಳು ಮಹಿಳೆಯರಾಗಿರುತ್ತಾರೆ. ಅಂದರೆ, ನಮ್ಮ ಸಮಾಜದ ಅತ್ಯಂತ ಹೆಚ್ಚಿನ ತುಳಿತಕ್ಕೆ ಒಳಗಾದ ಸಮುದಾಯ ಈ ಅಪರಾಧಕ್ಕೆ ಗುರಿಯಾಗುತ್ತಾರೆ. ಸಮಾಜ ಈ ನಿಟ್ಟಿನಲ್ಲಿ ಕಾಳಜಿ ವಹಿಸಿ, ಅವರ ಬಗ್ಗೆ ಗಮನ ಹರಿಸದಿದ್ದರೆ, ಅವರ ರಕ್ಷಣೆ ಮಾಡುವವರಾರು ? ಇದಕ್ಕೆ ಸಂಬಂಧಿಸಿದ ಕಾಯ್ದೆಯ 'ನರ' ಸತ್ತರೆ, ಸರ್ಕಾರ ತನ್ನ ಪ್ರಾಥಮಿಕ ಹೊಣೆಗಾರಿಕೆಯನ್ನು ನಿರ್ವಹಿಸದಿದ್ದರೆ,- ಆಗ ಸಮಾಜವೇ ಟೊಂಕ ಕಟ್ಟಿ ನಿಂತ ಮಹಿಳೆಯರಿಗೆ ರಕ್ಷಣೆ ಒದಗಿಸಬೇಕಾಗುತ್ತದೆ.

ಸಂವಿಧಾನದ 15ನೇ ವಿಧಿ ಪ್ರಕಾರ, ಪ್ರಭುತ್ವವು ಯಾವುದೇ ನಾಗರಿಕರನ್ನು ತಾರತಮ್ಯ ಭಾವದಿಂದ ನೋಡತಕ್ಕದಲ್ಲ, ಆಮೇಲೆ 15(3)ನೇ ವಿಧಿಯ ಪ್ರಕಾರ, ರಾಜ್ಯವೂ ಮಹಿಳೆ ಮತ್ತು ಮಕ್ಕಳಿಗಾಗಿ ವಿಶೇಷ ಅವಕಾಶಗಳನ್ನು ಕಲ್ಪಿಸುವ ಅಧಿಕಾರ ಪಡೆದಿರುತ್ತದೆ. ಸಂವಿಧಾನದ 15(3) ನೇ ವಿಧಿಯನ್ನು ಯಾವ ಸದುದ್ದೇಶದಿಂದ ನಮ್ಮ ಸಂವಿಧಾನದಲ್ಲಿ ಅಳವಡಿಸಲಾಗಿದೆಯೋ, ಆ ಉದ್ದೇಶವನ್ನು ಅಕ್ಷರಶಃ ಜಾರಿಗೊಳಿಸಲಾಗುತ್ತಿದೆಯೇ ? ಇದಕ್ಕೆ ಉತ್ತರ, "ಇಲ್ಲ".

16ನೇ ವಿಧಿಯ ಪ್ರಕಾರ, ರಾಜ್ಯದ ಯಾವುದೇ ಕಛೇರಿಯ ನೇಮಕಾತಿ ಯಲ್ಲಿಯಾಗಲಿ, ಉದ್ಯೋಗದಲ್ಲಿಯಾಗಲಿ, ಎಲ್ಲ ನಾಗರಿಕರಿಗೂ ಸಮಾನ ಅವಕಾಶ ಕಲ್ಪಿಸಲಾಗಿದೆ. ಇದನ್ನು ಚಾಚೂ ತಪ್ಪದೆ ಆಚರಿಸಲಾಗುತ್ತಿದೆಯೇ? "ಇಲ್ಲ" ಖಾಸಗಿರಂಗದೆಡೆ ಒಂದಿಷ್ಟು ದೃಷ್ಟಿ ಹಾಯಿಸಿದರೂ, ಸಾಕು, ಎಲ್ಲವೂ ಸ್ಪಷ್ಟವಾಗಿ ಗೋಚರವಾಗುತ್ತದೆ, ಸಾರ್ವಜನಿಕ ರಂಗಕ್ಕೆ ಹೋಲಿಸಿದರೆ, ಖಾಸಗೀ ರಂಗದಲ್ಲಿ ಮಹಿಳಾ ಉದ್ಯೋಗಿಗಳ ಸಂಖ್ಯೆ ತೀರಾ ಕಡಿಮೆಯಿದೆ, ಅಷ್ಟೇ ಯಾಕೆ ? ಸಾರ್ವಜನಿಕ ರಂಗದಲ್ಲಿಯೂ ತುಂಬಾ ಕಮ್ಮಿಯಾಗಿಯೇ ಇದೆ. ಮಹಿಳೆಯನ್ನು ಕಿತ್ತೂಗೆಯುವ, ವಜಾಗೊಳಿಸುವ ಪ್ರಯತ್ನಗಳು ನಿರಂತರವಾಗಿ ನಡೆದೇ ಇರುತ್ತದೆ. ಮಹಿಳೆಯರಿಗೆ ಹೆಚ್ಚಿನ ಹಕ್ಕುಗಳನ್ನು, ಸಾಮಾಜಿಕ ಸ್ಥಾನಮಾನಗಳನ್ನು, ದೊರಕಿಸಿಕೊಡುವ ಕಾಯ್ದೆ - ಕಾನೂನುಗಳನ್ನು ನಾವು ಹೆಚ್ಚು ಹೆಚ್ಚಾಗಿ ಮಾಡಿದಂತೆಲ್ಲಾ ಟಾಟಾ, ಬಿರ್ಲಾಗಳು, ಬೃಹತ್ ಉದ್ದಿಮೆಗಳು ಬಂಡವಾಳಷಾಹಿಗಳು, ಅಷ್ಟೇ ಹೆಚ್ಚಿನ ಪ್ರಮಾಣದಲ್ಲಿ ಮಹಿಳಾ ಉದ್ಯೋಗಿಗಳನ್ನು ಹೊರ ಹಾಕುವ ಪ್ರವೃತ್ತಿಯನ್ನು ಮೈಗೂಡಿಸಿಕೊಳ್ಳುತ್ತಿದ್ದಾರೆ. ಖಾಸಗಿ ರಂಗದ ಬಹುಸಂಖ್ಯಾತ ಕಾರ್ಖಾನೆಗಳಲ್ಲಿ ಇದು ದಿನನಿತ್ಯ ಸಂಭವಿಸುತ್ತಿದೆ.

ಸಂವಿಧಾನದ ವಿಧಿ 16(2) ಪ್ರಕಾರ, ಲಿಂಗಭೇದ ನಿಷೇಧಿಸಲಾಗಿದೆ, ಲಿಂಗಾಧಾರಿತ ತಾರತಮ್ಯ ಒಂದು ಅಪರಾಧ; ಆದರೆ, ಸಂವಿಧಾನದ ಈ ವಿಧಿಯನ್ನು ಜಾರಿಗೊಳಿಸಲಾಗಿದೆಯೇ ? ಇಲ್ಲ, ಯಾಕೆ ಜಾರಿಗೊಳಿಸಿಲ್ಲ ? ಇದನ್ನು

ಜಾರಿಗೊಳಿಸಿಲ್ಲವೆಂದರೂ. ಸಂವಿಧಾನವ ್ನ ಉಲ್ಲಂಘಿಸಲಾಗುತ್ತದಲ್ಲವೇ ? ಈ ನೆಲದ ಮೂಲಭೂತ ಕಾಯ್ದೆಯನ್ನು ನಿರ್ಲಕ್ಷಿಸಲಾ ಧುತ್ತಿದೆಯೇ ? ಇದನ್ನು ತಡೆಯಲು ಸರ್ಕಾರ ಏನು ಮಾಡುತ್ತಿದೆ ? ಮಹಿಳೆಯ ಸ್ಥಾನ - ಮಾನಕ್ಕೆ ಸಂಬಂಧಿಸಿದ ಈ ದೇಶದ ಮೂಲಭೂತ ಕಾಯ್ದೆಯನ್ನು ರಾಜಾರೋಷವಾಗಿ ಉಲ್ಲಂಘಿಸಲಾಗುತ್ತಿದೆ ಈವೆಲ್ಲ ಸಂಗತಿಗಳಿಗೆ ನೀವು ವಿವರಣೆ ಕೊಡಬೇಕಾಗಿದೆ. ನೀವು ಈ ಕುರಿತು ನಿಮ್ಮ ಅಭಿಪ್ರಾಯ ಕೊಟ್ಟರೆ ಸಾಲುವುದಿಲ್ಲ. ಮಹಿಳಾ ಸಮುದಾಯದ ರಕ್ಷಣೆಗಾಗಿರುವ ಸಂವಿಧಾನಿಕ ಪವಿತ್ರ ಘೋಷಣೆಯನ್ನು ಜಾರಿಗೊಳಿಸುವಲ್ಲಿ ಉಂಟಾದ ನಿಮ್ಮ ವಿಫಲತೆಯನ್ನು ನೀವು ನಮ್ಮ ಮುಂದೆ ಅಷ್ಟೇಯಲ್ಲ, ಇಡೀ ದೇಶದ ಮುಂದೆ ನಿರ್ಭಿಡೆಯಿಂದ ಒಪ್ಪಿಕೊಳ್ಳಬೇಕಾಗಿದೆ. ನಿಮ್ಮ ನಿರ್ಲಕ್ಷತೆಯನ್ನು ಸಾರ್ವಜನಿಕವಾಗಿ ಒಪ್ಪಿಕೊಳ್ಳಬೇಕಾಗಿದೆ. ನಾನು ಈ ವಿಷಯದಲ್ಲಿ ಇನ್ನೂ ಹೆಚ್ಚಿನ ವಿವರಗಳಿಗೆ ಹೋಗುವುದಿಲ್ಲ. ಈ ದೇಶದ 31 ಮಿಲಿಯನ್ ಮಹಿಳಾ ದುಡಿಮೆಗಾರರನ್ನು ಪರಿಗಣನೆಗೆ ತೆಗೆದುಕೊಂಡರೆ, ಅವರಲ್ಲಿ 28 ಮಿಲಿಯನ್ ಇಂದು ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ, ಅವರಲ್ಲಿ ಶೇಕಡ 87 ಜನ ಕೃಷಿ ಕ್ಷೇತ್ರದಲ್ಲಿ ತೊಡಗಿದ್ದಾರೆ. ಇನ್ನು ಅವರ ಸ್ಥಿತಿಗತಿಯ ಬಗ್ಗೆ ತಮಗೆ ಚೆನ್ನಾಗಿ ಗೊತ್ತಿದೆ. ಅವರು ಒಂದು ವಿಧದ ಕೂಲಿ ಗುಲಾಮರಾಗಿದ್ದಾರೆ. ಅವರು ತಮ್ಮ ಪುರುಷರಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ. ಭೂ ಮಾಲೀಕರ ಶೋಷಣೆ ನಿರಂತರವಾಗಿ ನಡೆದೇ ಇರುತ್ತದೆ. ಅಜ್ಞಾನದ ಅಂಧಕಾರದಲ್ಲಿರುವವರು ಬಹುವಾಗಿ ಅಲಕ್ಷಿಸಲ್ಪಟ್ಟಿದ್ದಾರೆ. ತಮಗೆ ಸಂಬಂಧಿಸಿದ ಕಾಯ್ದೆಯ ಬಗ್ಗೆಯೂ ಅವರಿಗೆ ಅರಿವು ಇಲ್ಲ. ಉದ್ದೇಶಪೂರ್ವಕವಾಗಿ ಅವರನ್ನು ಇಂತಹ ಅಜ್ಞಾನದ ಸ್ಥಿತಿಯಲ್ಲಿಡಲಾಗಿದೆ. ಕೇವಲ 3 ಮಿಲಿಯನ್ ಮಹಿಳೆಯರು ಪಟ್ಟಣ ಪ್ರದೇಶದ ಉದ್ಯೋಗಿಗಳಾಗಿದ್ದಾರೆ. ಗೃಹ ಕೈಗಾರಿಕೆ ಹೊರತುಪಡಿಸಿ, ವಿವಿಧ ಕಾರ್ಖಾನೆಗಳಲ್ಲಿ ದುಡಿಯುವವರ ಶೇಕಡ 13 ಮಹಿಳೆಯರು ವಿವಿಧ ತಯಾರಿಕಾ ಕಾರ್ಖಾನೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಗ್ರಾಮಾಂತರ ಪ್ರದೇಶದಲ್ಲಿ ಶೇಕಡ 13 ಮಹಿಳೆಯರು ದುಡಿಮೆಯ ಕ್ಷೇತ್ರದಲ್ಲಿದ್ದರೆ ಪಟ್ಟಣದಲ್ಲಿ ಅವರ ಸಂಖ್ಯೆ : ಶೇಕಡ 7 ಕಡಿಮೆ, ಆದರೆ ಅತ್ಯಂತ ಕಳವಳದ ಸಂಗತಿಯೆಂದರೆ, ಮಾನ್ಯ ಉಪಾಧ್ಯಕ್ಷರೇ, ಪಟ್ಟಣ ಪ್ರದೇಶದಲ್ಲಿ ಮಹಿಳಾ ದುಡಿಮೆಗಾರರ ಈ ಪ್ರಮಾಣವು ದಿನಂಪ್ರತಿ ತಗ್ಗುತ್ತಿದೆ. 10 ವರ್ಷಗಳ ಹಿಂದಿಗಿಂತ ಇಂದು ಮಹಿಳಾ ಕಾರ್ಮಿಕರ ಸಂಖ್ಯೆ ಕಡಿಮೆಯಾಗಿದೆ. ದೊಡ್ಡ ಪಟ್ಟಣಗಳಲ್ಲಿ ಅವರ ಸಂಖ್ಯೆ ಶೇಕಡ 9 ಮೀರಿಲ್ಲ. ಇದು ವಾಸ್ತವ ಸ್ಥಿತಿ, ಉದ್ಯೋಗದ ಅವಕಾಶಗಳಲ್ಲಿ ತಾರತಮ್ಯ ತಾಂಡವವಾಡುತ್ತಿದೆ ಎಂಬುದು ಇದರಿಂದ ಸ್ಪಷ್ಟವಾಗಿ ಗೋಚರಿಸುತ್ತದೆ. ಸಾರ್ವಜನಿಕ ಕ್ಷೇತ್ರ ಮತ್ತು ಖಾಸಗಿ ಕ್ಷೇತ್ರ ನೋಡಿದರೆ, ಹೇಗೆ ಉದ್ದೇಶಪೂರ್ವಕವಾಗಿ ಖಾಸಗಿ ಕ್ಷೇತ್ರದಲ್ಲಿ ಮಹಿಳೆಯನ್ನು ದೂರ ಇಡಲಾಗುತ್ತಿದೆ; ಎಂಬುದು ಕಂಡು ಬರುತ್ತದೆ. 1962ರಲ್ಲಿ ಸಂಘಟಿತ ಕ್ಷೇತ್ರದಲ್ಲಿ 1.37 ಮಿಲಿಯನ್ ಮಹಿಳೆಯರಿದ್ದರು. 1973ರಲ್ಲಿ ಅದು 2.14 ಮಿಲಿಯನ್‌ಗೆ ತಲುಪಿತು. ಆದರೆ, ಪ್ರಮಾಣದಲ್ಲಿ ಏನೂ ವ್ಯತ್ಯಾಸವಾಗಲಿಲ್ಲ. ಇಂತಹ ಘಟನೆಗಳು ದಿನನಿತ್ಯವೂ ಮುಖಕ್ಕೆ

ರಾಚತ್ತವೆ. ದಿನದಿಂದ ದಿನಕ್ಕೆ ಉದ್ಯೋಗದ ಅವಕಾಶಗಳು ಕುಸಿಯುತ್ತಿವೆ. ಅದರಲ್ಲಿಯೂ ವಿಶೇಷವಾಗಿ, ಮಹಿಳಾ ಉದ್ಯೋಗಿಗಳ ಪ್ರಮಾಣ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಲೇ ನಡೆದಿದೆ. ಈ ಕುರಿತು ನಾನು ನಿಮಗೆ ಅನೇಕ ಉದಾಹರಣೆ ಕೊಡಬಲ್ಲೆ, ಈ ಪ್ರವೃತ್ತಿ ಅತ್ಯಂತ - ಅಪಾಯಕಾರಿಯಾಗಿದೆ. ಸಂಘಟಿತ ರಂಗದಲ್ಲಿ ನಮ್ಮ ಆರ್ಥಿಕತೆ ಮುನ್ನಡೆ - ಸಾಧಿಸುತ್ತಿದ್ದರೂ ಉದ್ಯೋಗದ ಕ್ಷೇತ್ರದಲ್ಲಿ ಪುರುಷರಿಗೆ ಹೋಲಿಸಿದರೆ, ಮಹಿಳೆಯ ಹಿನ್ನಡೆ ಕಂಡುಬರುತ್ತಿದೆ; ಇನ್ನೂ ಖಾಸಗಿ ರಂಗದಲ್ಲಿ ಅದು ತೀರಾ ದಯನೀಯ ಸ್ಥಿತಿ ತಲುಪಿದೆ. ಇದು ಆಕಸ್ಮಿಕವೇನಲ್ಲ. ಪ್ಲಾಂಟೇಷನ್‌ದಲ್ಲಿ, ಸೆಣಬು, ಹತ್ತಿ, ಗಿರಣಿಗಳಲ್ಲಿ ಇಂಜಿನಿಯರಿಂಗ್ ಕಾರ್ಖಾನೆಗಳಲ್ಲಿ ಕಲ್ಲಿದ್ದಲು ಗಣಿಗಳಲ್ಲಿ ಸಮಾನ ಕೆಲಸಕ್ಕೆ ಸಮಾನ ವೇತನವೆನ್ನುವುದು ಇನ್ನೂ ಕನಸಾಗಿಯೇ ಉಳಿದಿದೆ. ಈ ವಿಷಯದಲ್ಲಿ ಖಾಸಗಿ ರಂಗದ ಬಗ್ಗೆ, ಅಸಂಘಟಿತ ಕ್ಷೇತ್ರದ ಬಗ್ಗೆ, ಕಡಿಮೆ ಮಾತಾಡಿದಷ್ಟೂ ಹೆಚ್ಚು ಉತ್ತಮ. ಇಲ್ಲೆಲ್ಲ ಸಮಾನ ವೇತನದ ಜಾರಿ ಒಂದು ಗಗನ ಕುಸುಮ. ಸಂವಿಧಾನದಲ್ಲಿ ಈ ಕುರಿತು ತನ್ನ ಬದ್ಧತೆಯನ್ನು ಸ್ಪಷ್ಟವಾಗಿ ಘೋಷಿಸಿದ್ದರೂ ಅದನ್ನು ಜಾರಿಗೊಳಿಸಲು ಸರ್ಕಾರವೇನೂ ಮಾಡುತ್ತಿಲ್ಲ. ಅಂತರ ರಾಷ್ಟ್ರೀಯ ಕಾರ್ಮಿಕ ಸಂಘಟನೆಯ ವಿಧಿ - ವಿಧಾನಗಳೆಲ್ಲ ಬಾಯೋಪಚಾರದ ಮಾತುಗಳಾಗಿ ಉಳಿದಿವೆ. 27 ವರ್ಷಗಳ ನಂತರ, ಈಗ ಅವುಗಳನ್ನು - ಖಾತರಿಯಾಗಿ ಜಾರಿಗೊಳಿಸುವ ಮಾತು ಹೇಳಲಾಗುತ್ತಿದೆ. ಅದನ್ನು ಹೇಗೆ ಜಾರಿಗೊಳಿಸುತ್ತಾರೋ, ನನಗೆ ಗೊತ್ತಿಲ್ಲ, ಆದರೆ, ನಡೆದ ಸಂಗತಿ ಮಾತ್ರ ಇಷ್ಟು.

ಇನ್ನು ವಿಧವೆಯರ ಸ್ಥಿತಿ - ಗತಿ ಕುರಿತು ಒಂದೆರಡು ಮಾತು; ಈ ತಿಂಗಳ 10ನೇ ದಿನಾಂಕದ ಸಂಡೇ ಸ್ಟ್ಯಾಂಡರ್ಡ್ ಪತ್ರಿಕೆಯಲ್ಲಿ ಪ್ರಕಟವಾಗಿರುವ ಒಂದು ಲೇಖನದೆಡೆಗೆ ತಮ್ಮ ಗಮನ ಸೆಳೆಯಬಯಸುತ್ತೇನೆ. ಸಚಿತ್ರವಾಗಿ ಪ್ರಕಟಿಸಲಾಗಿರುವ ಈ ಲೇಖನದ ಶೀರ್ಷಿಕೆ. "ಭಾರತೀಯ ಸಾಂಪ್ರದಾಯಿಕ, ವಿಧವೆಯ ದುರಂತ", 7000 ವಿಧವೆಯರು ಅತ್ಯಂತ ಬಡತನ ಹಾಗೂ ನಿರ್ಲಕ್ಷಿತ ಸ್ಥಿತಿಯಲ್ಲಿ ಬದುಕುತ್ತಿರುವ ಬೃಂದಾವನದ ಉದಾಹರಣೆಯನ್ನು ಕೊಡಲಾಗಿದೆ, ಒಬ್ಬ ವಿಧವೆಯ ಕತೆ ಇಂತಿದೆ.

"ಬೃಂದಾವನದಲ್ಲಿ ವಾಸಿಸುತ್ತಿರುವ ವಿಧವೆಯರಲ್ಲಿ ತುಲನಾತ್ಮಕವಾಗಿ, ಲಾಖಿಯದು ಅಪರೂಪದ ಬದುಕು, ಅವಳು 5ನೇ ತರಗತಿಯವರೆಗೆ ಓದಿದ್ದಾಳೆ, ಅವಳ ಪತಿ ಕಲ್ಕತ್ತೆಯ ರೈಟರ್ ಬಿಲ್ಡಿಂಗ್ಸ್‌ದಲ್ಲಿ ಗುಮಾಸ್ತನಾಗಿದ್ದ. ಆತ ಹೃದಯಾಘಾತದಿಂದ ಆಕಸ್ಮಿಕವಾಗಿ ತೀರಿಕೊಂಡ. ಅವರ 5 ಮಕ್ಕಳಲ್ಲಿ 3 ಮಕ್ಕಳು ತಂದೆಗಿಂತ ಮೊದಲೆ ತೀರಿಕೊಂಡಿದ್ದವು. ಈಗ ಉಳಿದವು ಎರಡು ಮಕ್ಕಳು ಮಾತ್ರ. ಆ ಮೇಲೆ ತನ್ನ ಭಾವ ಮೈದುನರ ಜೊತೆಗಿನ ಅವಳ ಬದುಕು ಒಂದು ವಿಧದ ನರಕ ಯಾತನೆಯಾಯಿತು. ಮುಂದಿನ 8 ವರ್ಷದಲ್ಲಿ ಉಳಿದೆರಡೂ ಮಕ್ಕಳು ಅಸುನೀಗಿದವು. ಈಗ ಎಲ್ಲ ಬಂಧನದಿಂದ ಮುಕ್ತರಾದ ಅತ್ತೆ,

ಮಾವ, ಭಾವ, ಮೈದುನರು, ಕ್ರೌರ್ಯದ ಸಾಕಾರಗಳಾಗತೊಡಗಿದರು. ಇದೆಲ್ಲದರ ಹಿಂದಿನ ಭಯವೆಂದರೆ, ಅವಳು ತಮ್ಮ ಕುಟುಂಬದ ಆಸ್ತಿಯಲ್ಲಿ ಪಾಲು ಬೇಡಬಹುದೆಂಬುದು. ಹತಾಶಳಾಗಿ, ಅವರು ತನ್ನ ಮುಂದೆ ಇಟ್ಟ ಎಲ್ಲ ಕಾಗದಗಳಿಗೂ ಸಹಿ ಮಾಡಿ ಬೃಂದಾವನದೆಡೆಗೆ ಹೆಜ್ಜೆ ಹಾಕಿದ್ದಳು. ಇದು 16 ವರ್ಷಗಳ ಹಿಂದಿನ ಮಾತು. ಆಮೇಲೆ, "ಅವರ ಸುದ್ದಿ ಇವಳಿಗಿಲ್ಲ, ಇವರ ಸುದ್ದಿ ಅವರಿಗಿಲ್ಲ."

ಲಾಖಿಯ ಕತೆ ಭಾರತೀಯ ಬಹುಸಂಖ್ಯಾತ ಕತೆಯಾಗಿದೆ, ಯಾವುದೇ ಮಹಿಳೆಯ ಪತಿ ತೀರಿದೊಡನೆಯೇ ಅವರು ನಿರಾಧಾರವಾಗುವುದು ಸ್ವಾಭಾವಿಕ. ಈ ಸಂಬಂಧದಲ್ಲಿ ಅವರಿಗೆ ರಕ್ಷಣೆ ನೀಡಲು ನಮ್ಮಲ್ಲಿ ಅನೇಕ ಕಾನೂನುಗಳಿವೆ. ಆದರೆ, ಅವುಗಳನ್ನು ಜಾರಿಗೊಳಿಸಲಾಗುತ್ತಿಲ್ಲ; ಸಮಾಜದಲ್ಲಿ ಎಲ್ಲರೂ ಅವರನ್ನು ತಿರಸ್ಕರಿಸುತ್ತಿದ್ದಾರೆ, ಅಂತಿಮವಾಗಿ, ಬೀದಿಗೆ ತಳ್ಳಲ್ಪಡುತ್ತಾ ಬಡತನ ಮತ್ತು ನರಕಯಾತನೆಯ ದಾರಿ ಬೃಂದಾವನಕ್ಕೆ ತೆಗೆದುಕೊಂಡು ಹೋಗುತ್ತದೆ. ಅಲ್ಲಿ ಅವರು ಕುಳಿತು ಮಾಡುವುದೇನೆಂದರೆ, 'ಹರೇ ರಾಮ ಹರೇ ಕೃಷ್ಣ' ಎಂಬ ಕ್ಷೇತ್ರದ ಆಲಾಪ - ಅಪಲಾಪ, ಆಮೇಲೆ, ಅವಳಿಗೆ ದೊರೆಯುವುದು 25 ಪೈಸೆಗೆ ಒಂದು ಕಪ್ ಚಹಾ; ಈ ಸಂದರ್ಭದಲ್ಲಿ ಉತ್ತರ ಪ್ರದೇಶದ ಒಂದು ಘಟನೆಯನ್ನು ನಾನಿಲ್ಲಿ ಕಾಣಿಸಬಯಸುತ್ತೇನೆ.

"ಉತ್ತರ ಪ್ರದೇಶದ ಸರ್ಕಾರ ವಯಸ್ಸಾದ ಬಡ ಮಹಿಳೆಗೆ ಮಾಸಿಕ 30 ರೂ. ಪಿಂಚಣಿ ನೀಡುತ್ತದೆ. ಆದರೆ, ಇಡೀ ಮಂದಿ ಈ ಯೋಜನೆಯ ಲಾಭ ಪಡೆಯುತಿಲ್ಲ, ಬೃಂದಾವನದಲ್ಲಿ ಮಹಿಳೆಯರ ಸ್ಥಿತಿ - ಗತಿಯನ್ನು ಗುರುತಿಸಿ, ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಲು ಅಲ್ಲಿ ಒಂದು ಮಹಿಳಾ ಕಲ್ಯಾಣ ಕಚೇರಿ ಇಲ್ಲ, ದುಡಿಯಲು ಅನರ್ಹರೆಂದು ವೈದ್ಯಕೀಯ ಸರ್ಟಿಫಿಕೇಟ್ ಕೊಡಿಸಲು ದಲ್ಲಾಳಿ ಚಾರ್ಜ್ ರೂ. 101 ರೂ. ಇಡೀ ಪ್ರಕರಣ ಪಕ್ವಗೊಂಡು ಫಲ ನೀಡುವಂತಾಗಲು ಇನ್ನೂ ರೂ. 100 ಖರ್ಚು; ಎಷ್ಟೋ ಜನರಿಗೆ ಈ ಯೋಜನೆಯ ಅರಿವೇ ಇಲ್ಲ. ಇನ್ನು ಗೊತ್ತಿದ್ದವರಲ್ಲಿ ಕೆಲವರಿಗೆ ಮಾತ್ರ ಈ ಪ್ರವೇಶದ ಖರ್ಚು ತೂಗಿಸಲು ಸಾಧ್ಯ. ಅದರಲ್ಲಿಯ ಕೆಲವೇ ಕೆಲವು ಜನರು ಮಾತ್ರ ತಮ್ಮ ಮನವಿಯನ್ನು ಯಶಸ್ವಿಯಾಗಿ ಮಂಡಿಸಿ, ಪಿಂಚಣಿ ಪಡೆದು ಪುನೀತರಾಗುತ್ತಾರೆ " ಇದು ಅಲ್ಲಿಯ ನಿಜ ಸ್ಥಿತಿ. ದಯವಿಟ್ಟು ಈ ಲೇಖನ ಓದಿರಿ, ಈ ಕುರಿತು ತಾವು ಯಾವ ಕ್ರಮ ಕೈಗೊಳ್ಳಲಿರುವಿರೆಂಬುದನ್ನು ನಾನು ತಿಳಿಯಬಯಸುತ್ತೇನೆ. ಇದೂ ಇಲ್ಲಿದೆ, ದೆಹಲಿಯ ಸಮೀಪದಲ್ಲಿಯೇ ಜೀತದಾಳುಗಳಾಗಿ ದುಡಿಯುತ್ತಿರುವ ಮಹಿಳೆಯ ದಾರುಣ ಚಿತ್ರ. ಇದು ದೆಹಲಿಯಿಂದ ಬಹು ದೂರದಲ್ಲಿಯೇನೂ ಇಲ್ಲ. ಅವರಲ್ಲಿ 7,000 ಜನರು, ಕೆಲವರ ಪ್ರಕಾರ 8000, ಬೃಂದಾವನದಲ್ಲಿದ್ದಾರೆ. ಅಲ್ಲದೇ, ಭಗವಾನ್ ಭಜನ್ ಆಶ್ರಮದಲ್ಲಿರುವ ಅಸಂಖ್ಯಾತ ಮಹಿಳೆಯರು ಆಶ್ರಮದ ಸೃಷ್ಟಿ ಕರ್ತನ ಕುರಿತು ಹಗಲಲ್ಲಿ ಹಾಡಿ ಹೊಗಳಿದರೆ,

ಅವರಿಗೆ ದೊರೆಯುವುದು ಒಂದು ಕಪ್ ಚಹಾ, ಇದೆಲ್ಲವನ್ನು ನೋಡಿಯೂ ಮಹಿಳೆಯರ ವಿಷಯದಲ್ಲಿ ನಾವೆಲ್ಲವನ್ನೂ, ಮಾಡಿದ್ದೇವೆ ಎಂದು ಹೇಳಲು ಸಾಧ್ಯವೇ ? ಅವರ ಪ್ರಗತಿ ಗಮನಾರ್ಹವೆಂದು ನಾವು ಕೊಚ್ಚಿಕೊಳ್ಳಬಹುದೇ ? ದೆಹಲಿಯಲ್ಲಿಯೇ ನೋಡಿರಿ, ದೆಹಲಿ ಬಾಡಿಗೆ ನಿಯಂತ್ರಣ ಕಾಯ್ದೆ ಎಷ್ಟು ವಿಚಿತ್ರವಾಗಿದೆ ಎಂದರೆ, ಗಂಡ ಸತ್ತೊಡನೆಯೇ - ಅವನ ಆಸ್ತಿಯಲ್ಲಿ ಅವನ ವಿಧವೆಗೆ ಯಾವುದೇ ಹಕ್ಕಿಲ್ಲ, ತತ್ಪರಿಣಾಮವಾಗಿ, ಇಡೀ ಕುಟುಂಬ ಬೀದಿಗೆ ಎಸೆಯಲ್ಪಡುತ್ತದೆ; ಹೀಗಿದ್ದೂ ಆ ಕಾಯ್ದೆಯನ್ನು ಇವತ್ತಿಗೂ ತಿದ್ದುಪಡಿ ಮಾಡಲಾಗಿಲ್ಲ.

ಮಹಿಳೆಯನ್ನು ನೀವು ಹೇಗೆ ರಕ್ಷಿಸುತ್ತೀರಿ ? ನಾನು ಈ ಕುರಿತು ಇಡೀ ಕತೆಯನ್ನು ಇಲ್ಲಿ ಮಂಡಿಸಬಯಸುವುದಿಲ್ಲ. ಸಂಕ್ಷಿಪ್ತವಾಗಿ ಹೇಳುವುದಾದರೆ, ಸಾಮಾಜಿಕವಾಗಿ ದಬ್ಬಾಳಿಕೆಗೆ ಒಳಗಾಗುವ, ಹಲವು ವಿಧದಲ್ಲಿ ಅವಮಾನಿಸಲ್ಪಡುವ, ಯಾವಾಗಲೂ ಹಲ್ಲೆಗೆ ಒಳಗಾಗುವ ಭೂ ಮಾಲಿಕರ ಕ್ರೌರ್ಯಕ್ಕೆ ಗುರಿಯಾಗುವ, ಹರಿಜನ ಮಹಿಳೆಯರ ಬಗ್ಗೆ ಏನು ಹೇಳುತ್ತೀರಿ? ಗೋಡೆಗೆ ನಿಲ್ಲಿಸಿ ಗುಂಡಿಕ್ಕಲು ಲಾಯಕ್ಕಾಗಿರುವ ಭೂಮಾಲಿಕರ ದೌಷ್ಟ್ಯದ ಬಗ್ಗೆ ಏನೆನ್ನುತ್ತೀರಿ? ನಮ್ಮ ಗ್ರಾಮಾಂತರ ಪ್ರದೇಶ ಆಳುತ್ತಿರುವವರೇ ಇವರು. ನಮ್ಮ ಮಹಿಳೆಯರು ಸಹ ಅವರ ಬಲಿಪಶುಗಳಾಗುತ್ತಿದ್ದಾರೆ. ಅವರಿಗೆ ಯಾವುದೇ ರಕ್ಷಣೆಯಿಲ್ಲ. ಭೂ ಮಾಲಿಕರು, ಪೋಲಿಸರ, ಮೇಲಧಿಕಾರಿಗಳ ಕೈ ಕಾಲ ಕಾಲಕ್ಕೆ ಬೆಚ್ಚಗೆ ಮಾಡುತ್ತಿರುವುದರಿಂದ, ಅವರು ಯಾವುದೇ ಕ್ರಮ ಕೈಗೊಳ್ಳುವುದಿಲ್ಲ. ಅಸ್ಪೃಶ್ಯತೆ ಇವತ್ತಿಗೂ ಆಚರಣೆಯಲ್ಲಿದೆ. ದಲಿತ ಮಹಿಳೆಯರಿಗೆ ಕುಡಿಯುವ ನೀರು ದೊರಕುವುದಿಲ್ಲ. ಪುರುಷರು ಹಗಲಿರುಳು ದುಡಿದರೂ ಅತ್ಯಂತ ಕಡಿಮೆ ಕೂಲಿ ಅವರ ಉಡಿಗೆ ಬೀಳುತ್ತದೆ. ಈ ತಾರತಮ್ಯ ತೆಗೆದು ಹಾಕಲೂ ಯಾವುದೇ ಕ್ರಮ ಕೈಗೊಳ್ಳಲಾಗುತ್ತಿಲ್ಲ. ವಿಶೇಷ ವಿವಾಹ ಕಾಯ್ದೆ, ವಿಚ್ಛೇದನ ಕಾಯ್ದೆ ಮತ್ತು ಇತರ ಅನೇಕ ಕಾಯ್ದೆಗಳು ಅಸ್ತಿತ್ವದಲ್ಲಿವೆ. ಅದರೂ ಇವು ಯಾವುವೂ ಜಾರಿಗೊಳ್ಳುತ್ತಿಲ್ಲ. ಉನ್ನತ ಸ್ಥಾನದಲ್ಲಿರುವ ಕೆಲವು ಜನರು ಮಾತ್ರ ಇವುಗಳ ಲಾಭ ಪಡೆಯುತ್ತಿರಬಹುದು. ಆದರೆ, ಉಳಿದವರಿಗೆ ಇವುಗಳಿಂದ ಕಿಂಚಿತ್ತೂ ಲಾಭವಿಲ್ಲ. ವಾಸ್ತವವೆಂದರೆ, ಇಂತಹ ಕಾಯ್ದೆ ಇರುವ ಸಂಗತಿಯೂ ಅನೇಕರಿಗೆ ಗೊತ್ತಿಲ್ಲ. ನಮ್ಮ ಆಕಾಶವಾಣಿಯಾಗಲಿ, ಇತರ ಸಮೂಹ ಮಾಧ್ಯಮಗಳಾಗಲಿ, ಇಂತಹ ಕಾಯ್ದೆಗಳನ್ನು ಜನರ ಗಮನಕ್ಕೆ - ತರಲು ಏನೂ ಮಾಡುತ್ತಿಲ್ಲ. ಇನ್ನು ಆ ಕಾಯ್ದೆಗಳು ಜಾರಿಗೊಳ್ಳುವಂತೆ, ಆ ಕಾಯ್ದೆಗಳಿಂದ ಜನರು ರಕ್ಷಣೆ ಪಡೆಯುವಂತೆ ಮಾಡುವುದಂತೂ ದೂರದ ಮಾತು.

ನಾನಿಲ್ಲಿ ಕೆಲವು ಸಲಹೆಗಳನ್ನು ನೀಡಬಯಸುತ್ತೇನೆ, ನಾನು ಸೂಚಿಸಿದ ತಿದ್ದುಪಡಿಯಲ್ಲಿ ಈ ಸಲಹೆಗಳನ್ನು ಒಳಗೊಳ್ಳಲಾಗಿದೆ. ಮಹಿಳಾ ಸಂಘಟನೆಗಳು ಹಾಕಿಕೊಂಡು ಆಚರಣೆಗೆ ತರಲು ಪ್ರಯತ್ನಿಸುತ್ತಿರುವ ಕಾರ್ಯಕ್ರಮದೆಡೆಗೆ ನಮ್ಮ ಗಮನ ಸೆಳೆಯಬಯಸುತ್ತೇನೆ. ತಮಗೆ ಇದ್ದ ಸಂಪನ್ಮೂಲಗಳ ಮಿತಿಯಲ್ಲಿಯೇ ಮಹಿಳಾ

ಸಂಘಟನೆಗಳು ರಚನಾತ್ಮಕ ಚಟುವಟಿಕೆಯಲ್ಲಿ ತೊಡಗಿ ತಮ್ಮ ಯೋಜನೆಗಳನ್ನು ಜಾರಿಗೊಳಿಸಲು ಪ್ರಯತ್ನಿಸುತ್ತಿರುವುದು ಸ್ತುತ್ಯರ್ಹವಾಗಿದೆ, ಇದಕ್ಕೆ ಸಂಬಂಧಿಸಿ ನಾನು ಹೇಳಬಯಸುವುದೇನೆಂದರೆ, ಸರ್ಕಾರ ಈ ಕುರಿತು ಕ್ರಿಯಾಶೀಲವಾಗಬೇಕು. ಆದರೆ ಅದು ನಿಷ್ಕ್ರಿಯವಾಗಿದ್ದು, ನಮ್ಮ ದೇಶದ ಮಹಿಳೆಯರಿಗೆ ಇಂದು ಬೇಕಾಗಿರುವುದು ಅತಿ ಭಾವುಕತೆಯಲ್ಲ. ಅದು ಎಷ್ಟೇ ಉತ್ತಮವಾಗಿದ್ದರೂ, ಅವರ ಸಮಸ್ಯೆಯನ್ನು ಪರಿಹರಿಸುವುದಿಲ್ಲ. ಬಾಯಿ ಉಪಚಾರದ ಬೋಧೆಯೂ ಅವರಿಗೆ ಇಂದು ಬೇಕಾಗಿಲ್ಲ. ಸುಭಾಷಿತ ಅವರ ಸ್ಥಿತಿಯನ್ನು ಸುಧಾರಿಸುವುದಿಲ್ಲ. ನಮ್ಮ ಸಾಹಿತ್ಯ ಇಂತಹವುಗಳಿಂದ ತುಂಬಿ ತುಳುಕುತ್ತಿದೆ. ಪ್ರತಿಯೊಬ್ಬ ಮಹಾ ವ್ಯಕ್ತಿಯೂ ಮಹಿಳೆಯ ಬಗ್ಗೆ ಮಾತಾಡಿದಾಗಲೆಲ್ಲ ಬಿಕೆಟುಗಟ್ಟಲೇ ಕಣ್ಣೀರು ಸುರಿಸುತ್ತಾನೆ; ಅವರ ಸ್ಥಿತಿ - ಗತಿ ಕುರಿತು ಅವನ ಹೃದಯ ಕರಗಿ ನೀರಾಗುತ್ತದೆ; ಆದರೆ, ಅವನು ಮನೆಗೆ ಹೋಗುವುದೇ ತಡ ತನ್ನ ಹೆಂಡತಿ - ಮಕ್ಕಳ ಮೇಲೆ ಕಣ್ಣು ಕಿಡಿಯುತ್ತಾನೆ, ನಮ್ಮ ಸಮಾಜದ ಇಡೀ ಮಹಿಳಾ ಕುಲದ ಬಗ್ಗೆ ಹೀಗೆಳೆದು ಮಾತಾಡತೊಡಗುತ್ತಾನೆ. ನನ್ನ ಸಲಹೆಗಳೆಂದರೆ, ಮಹಿಳೆಯರಿಗೆ ಉತ್ತಮವಾದ ಉದ್ಯೋಗಾವಕಾಶ ದೊರಕುವಂತಾಗಬೇಕು. "ಸಮಾನ ವೇತನದ ನಿಯಮ ಜಾರಿಯಾಗಬೇಕು. ಮಹಿಳೆಯರಿಗೆ ಅರೆಕಾಲಿಕ ಉದ್ಯೋಗ ನೀಡುವುದರ ಕಡೆಗೂ ಸರ್ಕಾರ ಗಮನ ಹರಿಸಬೇಕು. ಮಹಿಳೆಯನ್ನು ಕುಶಲ ಕರ್ಮಿಯಾಗಿ ಮಾಡಲು ಅವಶ್ಯವಿರುವ ತರಬೇತಿ ನೀಡಲು ಪ್ರತಿಯೊಂದು ರಾಜ್ಯದಲ್ಲಿಯೂ ಕನಿಷ್ಠ ಎರಡು ಔದ್ಯೋಗಿಕ ತರಬೇತಿ ಕೇಂದ್ರಗಳನ್ನು ಸ್ಥಾಪಿಸಬೇಕು. ವಿವಾಹಿತ ಮಹಿಳೆಯರ ಉದ್ಯೋಗಾರ್ಹತೆಯ ಮೇಲೆ ಯಾವುದೇ ವಿಧಿ - ನಿಬಂಧನೆಗಳನ್ನು ಹೇರಕೂಡದು. ವಿವಾಹಿತ ಮಹಿಳೆಯರು ಪುರುಷರಂತೆ ಅಥವಾ ಅವಿವಾಹಿತ ಮಹಿಳೆಯರು ಪುರುಷರಷ್ಟು ಸಮರ್ಥವಾಗಿ ದುಡಿಯಲಾರರು ಎಂದು ಭಾವಿಸುವ ಜನರು ಇದ್ದಾರೆ. ಆದರೆ, ಇದು ಸತ್ಯಕ್ಕೆ ದೂರವಾದದ್ದು. ವಿವಾಹಿತ ಮಹಿಳೆಯರು ಯಾರಿಗೂ ಕಡಿಮೆಯಿಲ್ಲದ ದುಡಿಮೆ ಗೈಯಬಲ್ಲರು.

ಮಹಿಳೆಯರು ಅಸಮರ್ಥರೆಂದು ಮಾತನಾಡುವವರಿಗೆ, ಹಾಗೆಂದು ವಾದಿಸುವವರಿಗೆ ಮಹಿಳೆಯ ವಾಸ್ತವ ಶಕ್ತಿ ಸಾಮರ್ಥ್ಯ ಕುರಿತು ನೈಜ ಅರಿವಿಲ್ಲವೆಂದೇ ಹೇಳಬೇಕು. ಒಬ್ಬ ವಿವಾಹಿತ ಪುರುಷನು ಅವಿವಾಹಿತನಷ್ಟೇ ದುಡಿಯಬಲ್ಲನಾದರೆ, ಒಬ್ಬ ವಿವಾಹಿತ ಮಹಿಳೆ ಅವಿವಾಹಿತಳಷ್ಟೇ ಸಮರ್ಥವಾಗಿ ದುಡಿಯಬಲ್ಲಳು. ಒಬ್ಬ ವಿವಾಹಿತ ಮಹಿಳೆ ಪ್ರಧಾನಮಂತ್ರಿಯಾಗಿದ್ದನ್ನು ನಾವು ನೋಡಿದ್ದೇವೆ. ಹಾಗೆಯೇ ಡಾ. ಸರೋಜಿನಿ ಮಹಿಳೆಯಂತಹ ಒಬ್ಬ ಅವಿವಾಹಿತ ಮಹಿಳೆ ರಾಜ್ಯ ಸಚಿವೆಯಾದದ್ದನ್ನು ನಾವು ನೋಡಿದ್ದೇವೆ. ಹೀಗಿದ್ದೂ ಅನಾವಶ್ಯಕವಾಗಿ ವಿವಾಹಿತ - ಅವಿವಾಹಿತ ಮಹಿಳೆಯರ ನಡುವೆ ಭೇದ ಕಲ್ಪಿಸುವುದು ಏಕೆ ? ಆದ್ದರಿಂದ ಈ ಕುರಿತು ಸರ್ಕಾರ ಸರಿಯಾದ ಕ್ರಮ ಕೈಗೊಂಡು ಮಹಿಳೆಯ ಬಗ್ಗೆ ಸಮಾಜದ ಮನೋಭಾವನೆಗಳನ್ನು ಬದಲಿಸಬೇಕಾಗಿದೆ. ಅಷ್ಟೇಯಲ್ಲ,

ಪುರುಷರು, ಕೌಟುಂಬಿಕ ಜವಾಬ್ದಾರಿಗಳನ್ನು ಹಂಚಿಕೊಳ್ಳುವಂತೆ ಅವರ ಮನೋಧರ್ಮದಲ್ಲಿ ಪರಿವರ್ತನೆ ತರಬೇಕಾಗಿದೆ. ದುಡಿಯುವ ಮಹಿಳೆಯರಿಗೆ ಕಡಿಮೆಯ ದರದಲ್ಲಿ ತಿಂಡಿ, ತಿನಿಸು ಒದಗಿಸುವ ಕ್ಯಾಂಟೀನು ಸ್ಥಾಪಿಸಬೇಕು. ಪ್ರತಿಯೊಂದು ಜಿಲ್ಲೆಯಲ್ಲಿ ಒಂದೊಂದರಂತೆ ದುಡಿಯುವ ಮಹಿಳೆಯ ಹಾಸ್ಟಲ್ ನಿರ್ಮಿಸಬೇಕು. ವಿಶೇಷವಾಗಿ, ನಗರ ಮಹಾನಗರಗಳ ಔದ್ಯಮಿಕ, ಕೈಗಾರಿಕಾ ಪ್ರದೇಶದಲ್ಲಿ ಇಂತಹ ಹಾಸ್ಟಲುಗಳು ತಲೆ ಎತ್ತಬೇಕು. ದುಡಿಯುವ ತಾಯಂದಿರ ಸೌಲಭ್ಯಕ್ಕಾಗಿ ಅವರ ಮಕ್ಕಳಿಗೆ ಶಿಶುವಿಹಾರ, ಶಿಶುಪಾಲನಾ ಕೇಂದ್ರಗಳನ್ನು ಸ್ಥಾಪಿಸಬೇಕು. ವರದಕ್ಷಿಣೆ ಒಂದು ದಂಡನಾರ್ಹ ಅಪರಾಧವೆಂದು ಘೋಷಿಸಬೇಕು. ಇಂತಹ ಅಪರಾಧಗಳಿಗೆ ತಿಂಗಳಿಗೂ ಕಡಿಮೆಯಿಲ್ಲದ ಜೈಲು ಶಿಕ್ಷೆ ಘೋಷಿಸಬೇಕು. ಅನೈತಿಕವಾಗಿ ಅಸಹಾಯಕ ಮಹಿಳೆಯರ ಶೋಷಣೆ ಮಾಡುವವರನ್ನು ಉಗ್ರ ಶಿಕ್ಷೆಗೆ ಗುರಿಪಡಿಸಬೇಕು. ಪ್ರತಿಯೊಂದು ಪಂಚಾಯತಿಯಲ್ಲಿಯೂ ಕಡ್ಡಾಯವಾಗಿ ಇಬ್ಬರು ಮಹಿಳೆಯರಿಗೆ ಪ್ರಾತಿನಿಧ್ಯ ದೊರೆಯುವಂತೆ ಅವಕಾಶವಿರಬೇಕು.

ಈ ವಿಷಯದಲ್ಲಿ ನನ್ನ ಪ್ರಶ್ನೆ :-

ಲೋಕಸಭೆಯಲ್ಲಿದ್ದ 33 ಮಹಿಳೆಯ ಪ್ರಾತಿನಿಧ್ಯ ಈಗ 21ಕ್ಕೆ ಇಳಿದಿದೆ. ಇದಕ್ಕೆ ಕಾರಣವೇನು ? ಒಬ್ಬ ಮಹಿಳಾ ಪ್ರಧಾನಮಂತ್ರಿ ಇದ್ದದ್ದು ಲೋಕಸಭೆಯಲ್ಲಿ ಮಹಿಳೆಯರ ಸಂಖ್ಯೆ ಕಡಿಮೆಯಾಗುವುದಕ್ಕೆ ಸಮಾಧಾನದ ಸಮಜಾಯಿಸಿಯಲ್ಲ. ಮೇಡಂ ತಾವಿಲ್ಲಿ ಕುಳಿತಿದ್ದೀರಿ, ಈ ಸದನದಲ್ಲಿ ತಮ್ಮ ಪ್ರಾತಿನಿಧ್ಯ ದಿನದಿಂದ ದಿನಕ್ಕೆ ಕುಸಿಯುತ್ತಿದೆ.

ನಾವು ಸರ್ಕಾರಕ್ಕೆ ಚುನಾವಣೆಯ ಸುಧಾರಣೆ ಕುರಿತು ಸಲ್ಲಿಸಿದ ಮನವಿಯಲ್ಲಿ ಪ್ರತಿಯೊಂದು ವಿಧಾನಸಭೆಯಲ್ಲಿ ಚುನಾಯಿತ ಮಂಡಳಿಯಲ್ಲಿ 15 ಸ್ಥಾನಗಳು ಮಹಿಳೆಯರಿಗೆ ಮೀಸಲಾಗಿರಬೇಕೆಂದು ಕೋರಿದ್ದೇವೆ. ಪ್ರತಿಯೊಂದು ಗ್ರಾಮದಲ್ಲಿಯೂ ಕನಿಷ್ಠ ಒಬ್ಬ ತರಬೇತಿ ಹೊಂದಿದ ಸೂಲಗಿತ್ತಿಯ ನೇಮಕವಾಗಬೇಕು. ಆ ಮೂಲಕ ಹೆರಿಗೆಯ ಸೌಲಭ್ಯಗಳು ಉತ್ತಮಗೊಳ್ಳಬೇಕು. ಮಕ್ಕಳಿಗೆ ಇನ್ನೂ ಹೆಚ್ಚಿನ ಆರೋಗ್ಯ ಕೇಂದ್ರಗಳನ್ನು ತೆರೆಯಬೇಕು; ಪ್ರತಿಯೊಂದು ಹೋಬಳಿಯಲ್ಲಿ ಕನಿಷ್ಠ ಒಂದು ಪ್ರಾಥಮಿಕ, ಸಹಾಯಕ, ಆರೋಗ್ಯ ಕೇಂದ್ರಗಳ ಸ್ಥಾಪನೆಯಾಗಬೇಕು.

ಶುದ್ಧವಾದ ಕುಡಿಯುವ ನೀರಿಗೆ ವ್ಯವಸ್ಥೆಯಾಗಬೇಕು, ಆರೋಗ್ಯದ ಸ್ಥಿತಿಗತಿಗಳು ಸುಧಾರಣೆಯಾಗಬೇಕು, ಕೃಷಿ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರ, ಮಕ್ಕಳ ಲಾಲನೆ ಪಾಲನೆಗಾಗಿ ಅವಶ್ಯವಿದ್ದಾಗ " ಕಂದಮ್ಮಗಳ ಕಾಳಜಿ ಕೇಂದ್ರಗಳನ್ನು ಆರಂಭಿಸಬೇಕು. ಇದು ತುಂಬಾ ಮಹತ್ವದ್ದು, ಕೃಷಿ ಕ್ಷೇತ್ರದಲ್ಲಿಯೂ," ಸಮಾನ ಕೆಲಸಕ್ಕೆ ಸಮಾನ ವೇತನ

ಸೂತ್ರ ಕಡ್ಡಾಯವಾಗಿ ಜಾರಿಯಾಗಬೇಕು. ಆದರೆ, ಇಂದು ಇದಾವುದೂ ಮಾಡಲಾಗುತ್ತಿಲ್ಲ, ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ಶಾಲೆ ಸ್ಥಾಪನೆಯಾಗಬೇಕು. ಸುಗ್ಗಿ ಮುಗಿದ ಮೇಲೆ ಮಹಿಳೆಯರು ಕರಕುಶಲ ಕೆಲಸ ಮತ್ತು ಗೃಹ ಕೈಗಾರಿಕೆಗಳಲ್ಲಿ ಲಾಭದಾಯಕವಾಗಿ ತೊಡಗಿಸಿಕೊಳ್ಳಲು ಅವರಿಗೆ ಸೂಕ್ತ ತರಬೇತಿ ನೀಡುವುದಕ್ಕೆ ವ್ಯವಸ್ಥೆಯಾಗಬೇಕು, ಜೊತೆಗೆ, ವಯಸ್ಕರ ಸಾಕ್ಷರತಾ ಯೋಜನೆ ಆರಂಭಿಸಬೇಕು. ಮಹಿಳೆಯ ಮೇಲೆ ಆಗುತ್ತಿರುವ ದೌರ್ಜನ್ಯ ದಬ್ಬಾಳಿಕೆ ತಡೆಗಟ್ಟಲು ಸರ್ಕಾರದ ಗಂಭೀರವಾದ ಪ್ರಯತ್ನ ಮಾಡಬೇಕು. ಮಾನ್ಯ ಉಪಾಧ್ಯಕ್ಷರೆ, ಈ ಕೆಲವು ಸಲಹೆಗಳನ್ನು ತಮ್ಮ ಮುಂದೆ ಇಟ್ಟಿದ್ದೇನೆ, ನಾನು ಸರ್ಕಾರವನ್ನು ಕುರಿತು ಕೆಲವು ಬೇರೆ - ಟಿಪ್ಪಣಿ ಮಂಡಿಸಿದ್ದೇನೆ. ಮೇಲಾಗಿ, ದಾರಿಯಲ್ಲಿರುವ ಕಷ್ಟ ಕಾರ್ಪಣ್ಯಗಳ ಕಡೆಗೆ ತಮ್ಮ ಗಮನ ಸೆಳೆದಿದ್ದೇನೆ. ಈ ತೊಂದರೆಯ ಮೂಲ ಎಲ್ಲಿದೆ ಎಂಬುದನ್ನು ಸೂಚಿಸಿದ್ದೇನೆ, ಇಲ್ಲಿ ನಾನು ಮತ್ತೊಮ್ಮೆ ಒತ್ತಿ ಹೇಳಬಯಸುತ್ತೇನೆ. ನೀವು ಮಹಿಳಾ ವಿಮೋಚನೆ ಬಯಸುವುದಾದರೆ ಮೂಲಭೂತವಾಗಿ ಕೃಷಿಕರ ಸುಧಾರಣೆ ಕೈಗೊಳ್ಳುವುದು ಅತ್ಯಂತ ಅವಶ್ಯಕವಾಗಿದೆ. ಯಾಕೆಂದರೆ, ಬಹುಸಂಖ್ಯಾತ ಮಹಿಳೆಯರು ಗ್ರಾಮಾಂತರ ಪ್ರದೇಶದ ಕೃಷಿ ಕ್ಷೇತ್ರ ಅವಲಂಬಿಸಿದ್ದಾರೆ. ಸುಮಾರು 21 ಕೋಟಿಗಳಷ್ಟಿರುವ ಮಹಿಳೆಯರ ಬದುಕಿನಿಂದ, ಪಾಳೆಗಾರಿ ಅರೆ ಪಾಳೆಗಾರಿ ಮಾದರಿಯ ಶೋಷಣೆಯೂ ಹೇಳ ಹೆಸರಿಲ್ಲದಂತೆ ಅಳಿಸಿ ಹೋಗಬೇಕಾದರೆ, ಕೃಷಿ ಕ್ಷೇತ್ರದ ಸುಧಾರಣೆ ಅದಕ್ಕೆ ದಿವ್ಯೌಷಧ.

ನಮ್ಮ ಇಂದಿನ ಅವಶ್ಯಕತೆಯೆಂದರೆ, ನಮ್ಮ ಆರ್ಥಿಕತೆಯಲ್ಲಿ ಮೂಲಭೂತ ಬದಲಾವಣೆ ತರುವ ದಿಸೆಯಲ್ಲಿ ತೀವ್ರವಾಗಿ ಕೈಗೊಳ್ಳಬೇಕಿರುವ ಪ್ರಯತ್ನ ಇಡೀ ಸಮಾಜದ ವಿಮೋಚನೆಯಿಂದ ಮಹಿಳೆಯರ ವಿಮೋಚನೆ ಬೇರ್ಪಡಿಸಲು ಸಾಧ್ಯವಿಲ್ಲ. ನಾವು ನಮ್ಮ ಸಮಾಜವನ್ನು ಏಕಸ್ವಾಮ್ಯ ಪ್ರಭುಗಳಿಂದ, ಭೂಮಾಲಿಕರ ಕಪಿ ಮುಷ್ಠಿಯಿಂದ ಮುಕ್ತಗೊಳಿಸಿ, ಮಹಿಳೆಯರ ಬಿಡುಗಡೆಗೆ ನಾಂದಿ ಹಾಡಬೇಕಿದೆ. ಈ ದಿಸೆಯಲ್ಲಿ ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ ಎಂಬುದನ್ನು ನಾನು ತಿಳಿಯಬಯಸುತ್ತೇನೆ.

## 10. ಮತದಾನದ ವಯಸ್ಸು ಇಳಿಸುವ ಕುರಿತು *

ಸನ್ಮಾನ್ಯರೆ,

ವಿಧೇಯಕವನ್ನು ಮಂಡಿಸಲು ಪರವಾನಗಿ ಕೋರುತ್ತ, ನಾನು ಈ ವಿಧೇಯಕವನ್ನು ಮಂಡಿಸುತ್ತಿದ್ದೇನೆ:

"ಭಾರತದ ಸಂವಿಧಾನಕ್ಕೆ ತಿದ್ದುಪಡಿ ಸೂಚಿಸುವ ಈ ವಿಧೇಯಕವನ್ನು ಪರಿಶೀಲನೆಗೆ ತೆಗೆದುಕೊಳ್ಳಬೇಕೆಂದು ನನ್ನ ಕೋರಿಕೆ."

ಮಾನ್ಯರೆ, ಇದೊಂದು ತುಂಬ ಸರಳವಾದ ವಿಧೇಯಕವಾಗಿದೆ. ಮೇಲಾಗಿ, ಈ ಸಂದರ್ಭದಲ್ಲಿ ನಮ್ಮ ಪ್ರಜಾಪ್ರಭುತ್ವ ಹೇಗೆ ಕಾರ್ಯ ನಿರ್ವಹಿಸುತ್ತಿದೆ ಎಂಬುದನ್ನು ತಮ್ಮ ಗಮನಕ್ಕೆ ತರಬಯಸುತ್ತೇನೆ. ಈ ವಿಧೇಯಕವನ್ನು ನಾನು ಸಾದರಪಡಿಸಿದ್ದು 1971ರಲ್ಲಿ. ಆದರೆ ಈಗ 1976, ಈಗಲಾದರೂ ಅದರ ಗತಿ ಏನಾದೀತೋ ? ಖಾಸಗಿ ಸದಸ್ಯರು ಮಂಡಿಸುವ ವಿಧೇಯಕಗಳು ಸಾಮಾನ್ಯವಾಗಿ ಚರ್ಚೆಗೆ ಬರುವದು ಹೆಚ್ಚು ಕಡಿಮೆ ಪೂರ್ತಿ 5 ವರ್ಷಗಳ ನಂತರವೇ.

ಮಾನ್ಯರೆ, ನನ್ನ ಈ ವಿಧೇಯಕ ಏನು ಹೇಳುತ್ತದೆ? ನಾನು ಈ ವಿಧೇಯಕದ ಧ್ಯೇಯೋದ್ದೇಶಗಳನ್ನು ಓದಿದರೂ ಸಾಕು, ಎಲ್ಲವೂ ಸ್ಪಷ್ಟವಾಗುತ್ತದೆ. ಅದರ ಧ್ಯೇಯೋದ್ದೇಶಗಳು ಇಂತಿವೆ:

"ಸದ್ಯದ ಸ್ಥಿತಿಯಲ್ಲಿ ವಯಸ್ಕ ಮತದಾನಕ್ಕೆ 21 ವರ್ಷ ಅರ್ಹ ವಯಸ್ಸೆಂದು ನಿರ್ಧರಿಸಲಾಗಿದೆ. ಆದರೆ ಇಡೀರಾಷ್ಟ್ರದ ಏಕಾಭಿಪ್ರಾಯವು ಅದನ್ನು 18ಕ್ಕೆ ಇಳಿಸುವುದರ ಪರವಾಗಿದೆ. 18ರ ಹರಯದ ನಮ್ಮ ಯುವಕ ಯುವತಿಯರು ಸಮಾಜದಲ್ಲಿ ತುಂಬ ಮಹತ್ವದ ಪಾತ್ರ ವಹಿಸುತ್ತಿದ್ದಾರೆ. ಮಿಗಿಲಾಗಿ, ಅವರು ರಾಜಕೀಯವಾಗಿ ಪ್ರಜ್ಞಾವಂತರಾಗಿದ್ದಾರೆ, ಮತ್ತು ಕ್ರಿಯಾಶೀಲ ಮನಸ್ಸುಳ್ಳವರಾಗಿದ್ದಾರೆ. ಧೈರ್ಯ, ಧೀಮಂತಿಕೆಯಿಂದ ಭವಿಷ್ಯತ್ತಿನ ಕಡೆಗೆ ನೋಡುವ ಸ್ವಭಾವ ಅವರದ್ದಾಗಿದೆ. 18ರಿಂದ 21ರವರೆಗಿನ ನಮ್ಮ ಜನವಿಭಾಗ ಅತ್ಯಂತ ಮಹತ್ವದ ಜನವಿಭಾಗವಾಗಿದೆ. ಆದ್ದರಿಂದ ಅವರು ಯಾಕೆ ಮತದಾನದಿಂದ ದೂರ ಉಳಿಯಬೇಕು ? ಎಂಬುದಕ್ಕೆ ಯಾವುದೇ ಘನವಾದ ಕಾರಣವಿಲ್ಲ. ಇದಕ್ಕೆ ಬದಲಾಗಿ, ಅವರಿಗೆ ಮತದಾನದ ಹಕ್ಕು ನೀಡುವುದೆಂದರೆ, ನಮ್ಮ

---

* ಸಂವಿಧಾನದ 326ನೇ ವಿಧಿಗೆ ತಿದ್ದುಪಡಿ ಸೂಚಿಸಿ ಮಂಡಿಸಿದ ವಿಧೇಯಕ ಮೇಲಿನ ಚರ್ಚೆಯಿಂದ ರಾಜ್ಯ ಸಭೆ 30ನೇ ಜನವರಿ 1976 ಸಿ.ಸಿ.101-119.

ಪ್ರಜಾಪ್ರಭುತ್ವವನ್ನು ಇನ್ನೂ ಬಲಗೊಳಿಸಿ ಅದರಲ್ಲಿ ಹೊಸ ಚೇತನ ತುಂಬುವುದೆಂದೇ ಅರ್ಥ."

ಮಾನ್ಯರೆ, ಇದು ನನ್ನ ವಿಧೇಯಕದ ಸಾರ ಸಂಗ್ರಹ. ಒಟ್ಟಿನಲ್ಲಿ ನಾನು ಬೇಡುವದೇನೆಂದರೆ, ಮತದಾನದ ವಯಸ್ಸನ್ನು 18 ವರ್ಷಕ್ಕೆ ಇಳಿಸಬೇಕು. ಮಾನ್ಯರೇ, ಈ ವಿಷಯ ಸಂಸತ್ತಿನ ಎರಡೂ ಸದನಗಳಲ್ಲಿ ಬಹು ದೀರ್ಘಕಾಲದಿಂದ ವಿಭಿನ್ನ ರೀತಿಯಲ್ಲಿ ಪರಿಶೀಲನೆಯಲ್ಲಿದೆ. ಈ ಕುರಿತು ಪತ್ರಿಕೆಗಳು ಮತ್ತು ಅನೇಕ ರಾಜಕೀಯ ಪಕ್ಷಗಳ ವೇದಿಕೆಯಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಪತ್ರಿಕೆಗಳಿಂದ ತಿಳಿದು ಬರುವುದೇನೆಂದರೆ, ಮತದಾನದ ವಯಸ್ಸು 18ಕ್ಕೆ ಇಳಿಸುವ ಕುರಿತು ದೇಶಾದ್ಯಂತ ಒಮ್ಮತವಿದೆ. ಪ್ರಧಾನ ಮಂತ್ರಿಗಳಾಗಲಿ, ಸರ್ಕಾರದ ಇನ್ನಿತರ ಪ್ರಮುಖ ಸದಸ್ಯರುಗಳಾಗಲಿ, ಈ ಕುರಿತು ಭಿನ್ನಾಭಿಪ್ರಾಯ ತಳೆದಿರುವುದು ಅಥವಾ ವ್ಯತಿರಿಕ್ತವಾದ ನಿಲುವು ಹೊಂದಿರುವುದು ನನ್ನ ಗಮನಕ್ಕೆ ಬಂದಿಲ್ಲ. ಸಂವಿಧಾನ ತಿದ್ದುಪಡಿ ಕುರಿತು ಇರುವ ಅತ್ಯಂತ ಆರೋಗ್ಯಕರವಾದ ಈ ಪ್ರಸ್ತಾವನೆಗೆ ಎಲ್ಲೂ ವಿರೋಧ ಕಂಡುಬಂದಿಲ್ಲ.

ಮಾನ್ಯರೆ, ಯಾಕೆ ಈ ಬಗ್ಗೆ ವಿಳಂಬ ಮಾಡಲಾಗುತ್ತಿದೆಯೋ ನನಗೆ ಅರ್ಥವಾಗುತ್ತಿಲ್ಲ, ಅದೇ ವೇಳೆಗೆ ನಮ್ಮ ರಾಜಕೀಯ ಹಾಗೂ ಸಾರ್ವಜನಿಕ ರಂಗದಲ್ಲಿ ಯುವಜನತೆಯ ಮೇಲೆ ಹೆಚ್ಚಿನ ಒತ್ತು ಕೊಡುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಮಾನ್ಯರೆ, ಇತ್ತೀಚಿಗೆ ಶ್ರೀಮತಿ ಮಾರ್ಗರೇಟ್ ಆಳ್ವ ಅವರನ್ನು ಕಾಂಗ್ರೆಸ್ಸಿನ ಒಬ್ಬ ಜಂಟಿ ಕಾರ್ಯದರ್ಶಿಯನ್ನಾಗಿ ಮಾಡಲಾಯಿತು. ಬಹುಶಃ ತುಲನಾತ್ಮಕವಾಗಿ ಹೇಳುವುದಾದರೆ, ಅವರ ಯುವ ವಯಸ್ಸೇ ಅವರ ಅರ್ಹತೆಯಾಗಿರಬೇಕೆಂದು ನನ್ನ ಅನಿಸಿಕೆ. ಯುವಕರು ಮುಂದೆ ಬರಬೇಕೆಂದು ಸಾಕಷ್ಟು ಮಾತಾಡಲಾಗುತ್ತಿದೆ. ಹೀಗಿದ್ದರೂ ಯುವ ಜನತೆಗೆ ಮತದಾನದ ಹಕ್ಕನ್ನು ಯಾಕೆ ನಿರಾಕರಿಸಲಾಗುತ್ತಿದೆ ? ಇದನ್ನು ಸರ್ಕಾರ ಪರಿಶೀಲಿಸಬೇಕಿದೆ. ಕೇವಲ ನಮ್ಮ ದೃಷ್ಟಿಕೋನದಲ್ಲಾದ ಬದಲಾವಣೆಯ ನೆಲೆಯಲ್ಲಿ ಅಷ್ಟೇಯಲ್ಲ, ಇಡೀ ಸಮಾಜದ ಪರಿವರ್ತನೆಯ ಹಿನ್ನಲೆಯಲ್ಲಿ ಈ ಕುರಿತು ಪುನರ್‌ಚಿಂತನೆ ನಡೆಸಬೇಕಿದೆ. ನಾವು ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ ಭರದಿಂದ ಹೆಜ್ಜೆ ಹಾಕುತ್ತಿದ್ದೇವೆ. ನಮ್ಮ ಪ್ರಜಾಪ್ರಭುತ್ವ ದುಡಿಯುವ ಜನತೆಯಿಂದ, ವಿಶೇಷವಾಗಿ, ಯುವ ಜನತೆಯಿಂದ, ತನ್ನ ಸತ್ವವನ್ನು ಪಡೆದು ಬೆಳೆಯಬೇಕಿದೆ. ತುಲನಾತ್ಮಕವಾಗಿ ಯುವಕರಿದ್ದೂ ,ಬೌದ್ಧಿಕವಾಗಿ ಸಾಕಷ್ಟು ಪ್ರೌಢ ಸ್ಥಿತಿಗೆ ಮುಟ್ಟಿದವರಿಂದಲೇ ನಮ್ಮ ಪ್ರಜಾಸತ್ತೆಗೆ ಜೀವರಸ ಹರಿಯಬೇಕಿದೆ. ಮತದಾನ ನಡೆಸಲು ಅವಶ್ಯವಿರುವ ಕನಿಷ್ಠ ಬುದ್ಧಿಮತ್ತೆ ಮತ್ತು ರಾಜಕೀಯ ಪ್ರಜ್ಞೆಗಳೇ ನಮ್ಮ ಪ್ರಜಾಪ್ರಭುತ್ವಕ್ಕೆ ಹೊಸ ಉಸಿರು ತುಂಬ ಬೇಕಾಗಿದೆ. ಚುನಾವಣೆಯ ಸಮಯದಲ್ಲಿ 18ರಿಂದ 21 ವಯಸ್ಸಿನ ಯುವಕರು ತುಂಬಾ ಮಹತ್ವದ ಪಾತ್ರ ನಿರ್ವಹಿಸುವುದನ್ನು ಕಾಣುತ್ತೇವೆ. ಚುನಾವಣೆಯ ಪ್ರಚಾರ

ಪ್ರಕ್ಷೋಭೆ ನಡೆಸುವಲ್ಲಿ, ಚುನಾಣೆಯ ಸಭೆಗಳನ್ನು ಸಂಘಟಿಸುವಲ್ಲಿ, ಚುನಾವಣಾ ಭಾಷಣ ಮಾಡುವಲ್ಲಿ, ವಯಸ್ಕರನ್ನು ಸಂಪರ್ಕಿಸಿ, ತಮ್ಮ ಆಯ್ಕೆಯ ಅಭ್ಯರ್ಥಿಗಳಿಗೆ ಮತ ಕೊಡುವಂತೆ ಮನವೊಲಿಸುವಲ್ಲಿ, ಈ ಯುವಕರ ಪಾತ್ರ ಅನನ್ಯವಾದದ್ದು. ಮಾನ್ಯರೇ, ಇಂಥ ಯುವಜನತೆಗೆ ಮತದಾನದ ಹಕ್ಕು ಯಾಕೆ ನಿರಾಕರಿಸಬೇಕು ? ಮಾನ್ಯರೇ, ಸದಸ್ಯ ವಯೋಮಿತಿಯ ಕಾರಣದಿಂದಾಗಿ, ಮಿಲಿಯಾಂತರ ಯುವ ಜನರು ರಾಜಕೀಯವಾಗಿ ಅರ್ಹ ಮತದಾರರಾಗಿದ್ದರೂ ಸಂವಿಧಾನಿಕವಾಗಿ ಅವರಿಗೆ ಮತದಾನದ ಹಕ್ಕು ನೀಡಲಾಗುತ್ತಿಲ್ಲ. ಕೆಲವರ ಪ್ರಕಾರ ಇಂಥ ಯುವ ಜನತೆಯ ಸಂಖ್ಯೆ ಕೋಟ್ಯಾವಧಿ! ಈ ಕುರಿತು ಸರ್ಕಾರದಲ್ಲಿ ಅಂಕಿ- ಸಂಖ್ಯೆ ಏನಾದರೂ ಇವೆಯೆ? ಇಲ್ಲಿ ಕಾನೂನು ಮಂತ್ರಿಗಳಿದ್ದಾರೆ. ಅವರಿಂದ ನಾನು ಈ ವಿಷಯ ತಿಳಿಯ ಬಯಸುತ್ತೇನೆ. ದೇಶದಲ್ಲಿ 18 ರಿಂದ 21 ವಯಸ್ಸಿನ ಜನತೆಯ ಸಂಖ್ಯೆ ಎಷ್ಟು ? ಎಂಥ ಬೃಹತ್ ಸಂಖ್ಯೆಯ ಜನರನ್ನು ಮತದಾನದ ಹಕ್ಕಿನಿಂದ ದೂರವಿಡುತ್ತಿದ್ದೇವೆ ಎಂಬುದು ಒಮ್ಮಲೇ ಸ್ಪಷ್ಟವಾಗುತ್ತದೆ. ಇಂಥಹ ಸ್ಥಿತಿ ಎಂದಿಗೂ ಮುಂದುವರೆಯಬಾರದು.

ಮಾನ್ಯರೇ, ಇತ್ತೀಚೆಗೆ ಸಂವಿಧಾನದ ಬದಲಾವಣೆಯ ಬಗ್ಗೆ ಸಾಕಷ್ಟು ಮಾತು ಕೇಳಿ ಬರುತ್ತಿವೆ. ಸಂವಿಧಾನದ ಮೂಲ ರಚನೆಯ ಸಿದ್ಧಾಂತವನ್ನು ಜೋರಾಗಿಯೇ ವಿರೋಧಿಸಲಾಗುತ್ತಿದೆ. ಇತ್ತೀಚಿನ ಕೇಶವಾನಂದ ಭಾರತಿ ಮೊಕದ್ದಮೆಯ ತೀರ್ಪಿಗನುಗುಣವಾಗಿ ನಮ್ಮ ಸಂವಿಧಾನದ ಮೂಲ ರಚನೆಯನ್ನು ಬದಲಿಸುವುದು ಸಾಧ್ಯವಿಲ್ಲ. ಇಲ್ಲದಿದ್ದರೇ, ಗೋಲಕನಾಥ ಮೊಕದ್ದಮೆಯಲ್ಲಿ ನೀಡಲಾದ ರೂಲಿಂಗ್ ಸಂಪೂರ್ಣವಾಗಿ ನಿರರ್ಥಕವಾಗುತ್ತದೆ. ಇಂದು ಸಂವಿಧಾನದ ಯಾವುದೇ ಭಾಗವನ್ನು ಬದಲಾವಣೆ ಮಾಡಬಹುದಾಗಿದೆ. 326ನೇ ವಿಧಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಯಾವುದೇ ರೀತಿಯಿಂದಲೂ ಅದನ್ನು ಸಂವಿಧಾನದ ಮೂಲ ರಚನೆಗೆ ಸಂಬಂಧಿಸಲು ಸಾಧ್ಯವಿಲ್ಲ. ಆದ್ದರಿಂದ ಈ 326 ನೇ ವಿಧಿಯನ್ನು ತಿದ್ದಿ ಮತದಾನದ ವಯಸ್ಸನ್ನು ಇಳಿಸಲು ನಮಗೆ ಯಾವುದೇ ಅಡ್ಡಿ ಎದುರಾಗುವುದಿಲ್ಲ. ನನ್ನ ಗೆಳೆಯರೊಬ್ಬರು ಒಂದು ಪುಸ್ತಕ ಬರೆದಿದ್ದಾರೆ. ನಾನು ಅದನ್ನು ಅತ್ಯಂತ ಆಸಕ್ತಿಯಿಂದ ಓದಿದ್ದೇನೆ. ಆ ಪುಸ್ತಕ ಬಡವಬಲ್ಲಿದರ ಸಂಬಂಧದಲ್ಲಿ ಸಂವಿಧಾನದ ಪಾತ್ರ ಕುರಿತಿದೆ. ಆ ಪುಸ್ತಕದಲ್ಲಿ ಎತ್ತಲಾದ ಕೆಲವು ವಿಷಯಗಳು ತುಂಬ ಮಹತ್ವದವುಗಳಾಗಿವೆ, ಮತ್ತು ಅಷ್ಟೇ ವಿಚಾರಪೂರಿತವಾಗಿವೆ. ಆ ಪುಸ್ತಕ ಮೆಚ್ಚಿಕೊಳ್ಳಲು ಕಾರಣವೇನೆಂದರೆ, ಅದು ಅವರ ಅನುಭವ, ಜ್ಞಾನ, ಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ. ಭಾರತೀಯ ಸಂವಿಧಾನ ಕಾರ್ಯ ನಿರ್ವಹಿಸುತ್ತಿರುವ ದೃಷ್ಟಿಯಿಂದ ಇಡೀ ಪರಿಸ್ಥಿತಿಯ ಮೌಲ್ಯ ಮಾಪನ ಮಾಡುವ ಪ್ರಯತ್ನ ಅದರಲ್ಲಿದೆ. ಆದರೆ ಮತದಾನದ ವಯಸ್ಸು 21 ರಿಂದ 18ಕ್ಕೆ ಇಳಿಸುವ ಕುರಿತು ಅಲ್ಲಿ ಯಾವುದೇ ಒತ್ತುಕೊಡಲಾಗಿಲ್ಲ. ಅವರು ಒಬ್ಬ ಖಾಸಗಿ ನಾಗರಿಕನಾಗಿ ಅಥವಾ ಖಾಸಗಿ ಸದಸ್ಯನಾಗಿ ಆ ವಿಷಯದ ವಿರುದ್ಧವೂ ಅಲ್ಲಿ ಏನೂ ಪ್ರಸ್ತಾಪ ಮಾಡಿಲ್ಲ.

ಮಾನ್ಯರೆ, ಇದು ನಮ್ಮ ಸಂವಿಧಾನ ಕಾರ್ಯ ನಿರ್ವಹಿಸುತ್ತಿರುವ ಆಯಾಮದ ಮೂಲಕ್ಕೆ ನಮ್ಮನ್ನು ತೆಗೆದುಕೊಂಡು ಹೋಗುತ್ತದೆ. ನಮ್ಮ ಸಂವಿಧಾನ ಕೆಲಸ ಮಾಡುವ ರೀತಿ- ನೀತಿ, ಹಲವು ವಿಧದಲ್ಲಿ ತುಂಬ ಸಂಪ್ರದಾಯವಾದಿ ಸ್ವರೂಪದ್ದಾಗಿದೆ. ಹಳೆಯ ಸಂಪ್ರದಾಯವಾದಿಗಳ ಪ್ರಭಾವವನ್ನೇ ಅದು ಎಲ್ಲೆಡೆಯೂ ಬಿತ್ತರಿಸುತ್ತಿದೆ. ಯುವಕರ ಗತಿಶೀಲತೆ ಹಾಗೂ ದೃಷ್ಟಿಯ ಅಭಾವ ಅದರಲ್ಲಿ ಎದ್ದು ಕಾಣುತ್ತಿದೆ. ಆದ್ದರಿಂದಲೇ ನಿರ್ದಿಷ್ಟ ವಿಧಿಗೆ ಸಂಬಂಧಿಸಿದಂತೆ ಸಂವಿಧಾನವು ತುಂಬಾ ದೋಷಪೂರ್ಣವಾಗಿರುವುದು ನಮ್ಮ ಗಮನಕ್ಕೆ ಬರುತ್ತಿಲ್ಲ. ನಮ್ಮ ಸಂವಿಧಾನ ರಚನೆಯಾದಾಗ ಅದು ಮುನ್ನಡೆಯ ದಾರಿಯಲ್ಲಿ ಒಂದುದೊಡ್ಡ ಹೆಜ್ಜೆಯಾಗಿತ್ತು ಎಂದು ಹೇಳಲೇಬೇಕು. ಅಂದು ಇಂದಿನಕ್ಕಿಂತ ಅನೇಕ ರೀತಿಯಿಂದ ಭಿನ್ನವಾದ ಪರಿಸ್ಥಿತಿಯಿತ್ತು. ಬ್ರಿಟಿಷ್ ಸರ್ಕಾರದ ಭಾರತ ಕಾಯ್ದೆ- 1935ರ ಅಡಿಯಲ್ಲಿ ಕೇವಲ 13% ರಿಂದ 14%ರಷ್ಟು ಜನರಿಗೆ ಮಾತ್ರ ಮತದಾನದ ಹಕ್ಕು ಇತ್ತು. ಬಹು ಸಂಖ್ಯಾತರನ್ನು ಉದ್ದೇಶಪೂರ್ವಕವಾಗಿಯೇ ಈ ಪ್ರಕ್ರಿಯೆಯಿಂದ ಹೊರಗೆ ಇಟ್ಟಿದ್ದರು. ಅಂತಹ ಸ್ಥಿತಿಯಿಂದ ನಾವು ಅನೇಕ ಸ್ಥಿತ್ಯಂತರ ಕಾಣುತ್ತ ಇಂದು 21 ವರ್ಷದವರಿಗೆ ಮತದಾನದ ಹಕ್ಕು ನೀಡುವ ಅವಕಾಶಕ್ಕೆ ಬಂದು ತಲುಪಿದ್ದೇವೆ. ಹಿಂದಿನ ಕಾಲಕ್ಕೆ ಹೋಲಿಸಿದರೆ, ಇದೊಂದು ದೊಡ್ಡ ಹೆಜ್ಜೆ ಎಂದೇ ಹೇಳಬೇಕು. ಆಗ ಇದೊಂದು ವಿವಾದದ ವಿಷಯವಾಗಿರಲಿಲ್ಲ. ಹಾಗಿದ್ದೂ ಸಂವಿಧಾನದ ನಿರ್ಮಾಪಕರು 18 ವರ್ಷ ವಯಸ್ಸನ್ನು ಮತದಾನದ ಕನಿಷ್ಠ ವಯಸ್ಸೆಂದು ಯಾಕೆ ಪರಿಗಣಿಸಲಿಲ್ಲವೊ ಗೊತ್ತಿಲ್ಲ. ಆಗ ಅವರೆಲ್ಲರೂ ವಯೋವೃದ್ಧರೇ ಆಗಿದ್ದರೆಂಬುದು ಗಮನಾರ್ಹ. ಮಾನ್ಯರೇ, ಆ ದಿನಗಳಲ್ಲಿ ನಿಮ್ಮಂತೆ ಒಬ್ಬ ಯುವಕ ಅಧ್ಯಕ್ಷೀಯ ಕುರ್ಚಿಯಲ್ಲಿ ಕುಳಿತಿರಲಿಲ್ಲ. ಅಂದು ಕುರ್ಚಿಯಲ್ಲಿ ಕುಳಿತವರಲ್ಲಿ ವಯೋವೃದ್ಧರೆ ಹೆಚ್ಚಾಗಿದ್ದರು. ನಿಜವೆಂದರೆ ಹೆಚ್ಚಿನ ಮುಖಂಡರೆಲ್ಲ 50 ದಾಟಿದವರೇ ಆಗಿದ್ದರು. ಕೆಲವು ಸಂದರ್ಭದಲ್ಲಿ 60 ನ್ನು ದಾಟಿದವರಿದ್ದರು. ಸಂವಿಧಾನದ ರಚನೆಯ ಸಮಯದಲ್ಲಿ ಸಲಹೆ, ಸೂಚನೆ ನೀಡಿದವರೆಲ್ಲ ಬ್ರಿಟಿಷ್ ಕಾಯ್ದೆ, ಬ್ರಿಟಿಷ್ ಆಚಾರ- ವಿಚಾರ ಸಂಪ್ರದಾಯ, ಬ್ರಿಟಿಷ್ ರೀತಿ- ನೀತಿ ಮತ್ತು ಬ್ರಿಟಿಷ್ ದೃಷ್ಟಿ ಕೋನಗಳಲ್ಲಿಯೇ ತೊಯ್ದು ತೊಪ್ಪೆಯಾಗಿದ್ದವರು. ಇಂಥವರ ಅಭಿಪ್ರಾಯಗಳೇ ನಮ್ಮ ಪ್ರಜಾಸತ್ತೆ ಮತ್ತು ಸಂಸತ್ತಿನ ವಿವಿಧ ಸಂಸ್ಥೆಗಳ ಕಾರ್ಯ ಕಲಾಪಗಳಲ್ಲಿ ಮೇಲುಗೈ ಪಡೆದಿದ್ದವು. ಕೆಲವು ವಿಧದಲ್ಲಿ ತುಂಬಾ ಗತಿಶೀಲರಾಗಿದ್ದ ಶ್ರೀ ಅಂಬೇಡ್ಕರರನ್ನು ಹೊರತುಪಡಿಸಿದರೆ, ಸಂವಿಧಾನ ರಚನಾ ಸಮಿತಿಯಲ್ಲಿ ಹೆಚ್ಚಿನವರು ಸಂಪ್ರದಾಯ ಶರಣರಾಗಿದ್ದರೆಂಬುದು ತಮಗೆ ಚೆನ್ನಾಗಿ ಗೊತ್ತಿದೆ. ಸಾಂಪ್ರದಾಯಿಕ ನಿಲುವಿನ ಸಂಕೇತವಾಗಿದ್ದ ಶ್ರೀ.ಕೆ. ಎಂ. ಮುನ್ಷಿಯಂಥವರೂ ಆ ಸಮಿತಿಯಲ್ಲಿದ್ದರು. ಶ್ರೀ. ಬಿ. ಎನ್. ರಾವ್‌ರಂಥ ಸಲಹೆಗಾರರೂ ಇದ್ದರು. ಇವರೆಲ್ಲ ಅನೇಕ ರೀತಿಯಲ್ಲಿ ಸಂಪ್ರದಾಯವಾದಿ ನಿಲುವಿಗೆ ಹೆಸರಾಗಿದ್ದರು. ಸಂವಿಧಾನದ ರೂಪು-ರೇಷೆಯನ್ನು ನಿರ್ಮಿಸಲು ನೇಮಿಸಲಾದ ಸಮಿತಿಯಲ್ಲಿದ್ದವರ ಹೆಸರುಗಳನ್ನು ನೋಡಿದರೆ ಸಾಕು, ಅವರೆಲ್ಲರೂ ತುಲನಾತ್ಮಕವಾಗಿ ಆಗ ವೃದ್ಧರೇ ಆಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಅವರೆಲ್ಲರಿಗೂ ಸಾಕಷ್ಟು ವಯಸ್ಸಾಗಿತ್ತು .

ಆದರೆ ಅವರಲ್ಲಿ ಅನೇಕರಿಗೆ ಆ ಕುರಿತು ಯಾವುದೇ ಅನುಭವವಿರಲಿಲ್ಲ. ಬಹುಶಃ ಕೆಲವರಿಗೆ ಕಾಯ್ದೆ ಮತ್ತು ನ್ಯಾಯಾಂಗದ ಅನುಭವ ಮಾತ್ರವಿತ್ತು. ಕೆಲವರಿಗೆ ಅನುಭವವಿದ್ದರೆ, ಇನ್ನೂ ಕೆಲವರಿಗೆ ಈ ಕುರಿತು ಯಾವುದೇ ಅನುಭವವಿರಲಿಲ್ಲ. ಆದ್ದರಿಂದ ಇಂಥ ಸಮಸ್ಯೆ ಎದುರಾದಾಗಲೆಲ್ಲ ಅವುಗಳನ್ನು ಅನುಭವಸ್ಥರಿಗೇ ಬಿಟ್ಟು ಕೈ ತೊಳೆದುಕೊಳ್ಳುತ್ತಿದ್ದರು. ಮತದಾನದ ಹಕ್ಕು ಯಾರಿಗೆ ದೊರೆಯಬೇಕು? ಯಾವ ವಯಸ್ಸಿಗೆ ದೊರೆಯಬೇಕು? ಎಂಬುವುವು ರಾಜಕೀಯ ಪ್ರಶ್ನೆಗಳಾಗಿದ್ದವು. ಸಂವಿಧಾನ ರಚಿಸಿದ ಹಿರಿಯರಿಗೆ ಯುವ ಪೀಳಿಗೆಯಲ್ಲಿ ವಿಶ್ವಾಸವಿರಲಿಲ್ಲವೆಂದು ನನ್ನ ಅನಿಸಿಕೆ. ಮತದಾನದ ವಯಸ್ಸು 21 ಕ್ಕೆ ಮಾತ್ರ ಇರಬೇಕೆಂದು ಸಲಹೆ ಮಾಡಿದವರು ಯುವಕರ ಬಗ್ಗೆ ತಪ್ಪಾಗಿ ಭಾವಿಸಿದ್ದಾರೆಂದು ನನ್ನ ನಂಬುಗೆ. ಬದುಕು ಅವರ ತಪ್ಪನ್ನು ಇಂದು ಸಾಬೀತುಗೊಳಿಸಿದೆ.

* * *

ಆದ್ದರಿಂದ, ತಪ್ಪೇನೋ, ಮಾಡಿದ್ದಾರೆ, ಅದು ನಿರ್ವಿವಾದ.1949 ರಲ್ಲಿ ನಾವು ಇದಿದ್ದರೆ, ನಾವೇ ಸಂವಿಧಾನವನ್ನು ಬರೆಯಬಹುದಾಗಿತ್ತು. ಆದರೆ ನಮ್ಮ ಗತದ ಅನುಭವದಿಂದ ಕಲಿತು ಸಂವಿಧಾನಿಕವಾಗಿ ಅವರು ಮಾಡಿದ ತಪ್ಪನ್ನು ನಾವಿಂದು ತಿದ್ದಬಹುದಾಗಿದೆ. ಈಗ ನಾವೆಲ್ಲರೂ ಕೂಡಿ ಆ ತಪ್ಪನ್ನು ಸರಿಪಡಿಸಿ ಮತದಾನದ ವಯಸ್ಸನ್ನು 18ಕ್ಕೆ ಇಳಿಸಬಹುದು. ಮಾನ್ಯರೆ, ಜಗತ್ತಿನ ಹೆಚ್ಚಿನ ರಾಷ್ಟ್ರಗಳಲ್ಲಿ, ಸಮಾಜವಾದಿ ರಾಷ್ಟ್ರಗಳನ್ನು ಒಳಗೊಂಡಂತೆ ಮತದಾನದ ವಯಸ್ಸು 18 ವರ್ಷಯಿದೆ. ಇನ್ನೂ ವಯಸ್ಕರ ಮತದಾನದ ವ್ಯವಸ್ಥೆಯೇ ಅಸ್ತಿತ್ವದಲ್ಲಿಲ್ಲದ ಅನೇಕ ರಾಷ್ಟ್ರಗಳೂ ಇಂದು ಜಗತ್ತಿನಲ್ಲಿವೆ. ಇವುಗಳಲ್ಲಿ ಕೆಲವು ಮುಂದುವರೆದ ರಾಷ್ಟ್ರಗಳಾಗಿವೆ. ಇನ್ನು ಮಹಿಳೆಯರಿಗೆ ಸಂಬಂಧಿಸಿದಂತೆ ಅಲ್ಲಿ ಏನೇನೂ ಅವಕಾಶವಿಲ್ಲ. ನಾವು ಭಾರತದ ಸಂಸತ್ತಿನೆಡೆಗೆ ಒಂದು ದೃಷ್ಟಿ ಹಾಯಿಸಿದರೂ ಸಾಕು, ಈ ತಾರತಮ್ಯ ಎದ್ದು ಕಾಣುತ್ತದೆ. ನಮ್ಮ ಸಂಸತ್ತಿನಲ್ಲಿ ಎಷ್ಟು ಜನ ಮಹಿಳೆಯರಿದ್ದಾರೆ ? ಅಮೆರಿಕೆಯ ಸೆನೆಟ್‌ನಲ್ಲಾಗಲಿ, ಅಲ್ಲಿಯ ಪ್ರತಿನಿಧಿ ಸಭೆಯಲ್ಲಾಗಲಿ, ಎಷ್ಟು ಜನ ಮಹಿಳೆಯರಿಗೆ ಅವಕಾಶ ಮಾಡಿಕೊಟ್ಟಿದ್ದಾರೆ ? ಹೇಳಿ. ಅವರ ಸಂಖ್ಯೆ 30 ಇಲ್ಲ ! ಪ್ರತಿನಿಧಿ ಸಭೆಯಲ್ಲಿ ಸುಮಾರು 500 ರಷ್ಟು ಸದಸ್ಯರಿಗೆ ಅವಕಾಶವಿದ್ದು 20 ಜನ ಮಹಿಳೆಯರೂ ಅಲ್ಲಿ ಕುಳಿತಿರುವುದನ್ನು ನೀವು ಕಾಣಲಾರಿರಿ. ನಮ್ಮಲ್ಲಿಯೂ ಕಳೆದ ಕೆಲವು ವರ್ಷಗಳಲ್ಲಿ ಸ್ಥಿತಿ ತೀರಾ ಕರುಣಾಜನಕವಾಗುತ್ತ ಬಂದಿದೆ ಲೋಕ ಸಭೆಯಲ್ಲಿ ಹಿಂದೆ ಇದ್ದ ಮಹಿಳೆಯರ ಸಂಖ್ಯೆ ಹೆಚ್ಚಾಗುವ ಬದಲು ಪ್ರತಿಸಲ ಕಡಿಮೆಯಾಗುತ್ತಿದೆ. ವಿಶೇಷವೆಂದರೆ, ನಮ್ಮಲ್ಲಿ ಒಬ್ಬ ಮಹಿಳೆಯೇ ಪ್ರಧಾನ ಮಂತ್ರಿಯಾಗಿದ್ದಾರೆ ! ಆದರೂ ಮಹಿಳಾ ಪ್ರಾತಿನಿಧ್ಯದ ದುರ್ವಿಧಿ ಉಲ್ಬಣಿಸುತ್ತಿದೆ.

ಯುವಕರೇ ನಮ್ಮ ಫ್ಯಾಕ್ಟರಿಗಳನ್ನು ನಡೆಸುತ್ತಿದ್ದಾರೆ. ಯಾವುದೇ ಸಾರ್ವಜನಿಕ ಉದ್ಯಮಕ್ಕೆ ಹೋದರೆ ನೀವು ಇದನ್ನು ಕಾಣಬಲ್ಲಿರಿ. ಮಾನ್ಯರೆ, 18 ರಿಂದ 21ರ ವಯೋಮಾನದ ಯುವಕರೇ, ಇವೆಲ್ಲ ಉತ್ಪಾದನಾ ಜವಾಬ್ದಾರಿಗಳಿಗೆ ಹೆಗಲು ಕೊಟ್ಟು ರಾಷ್ಟ್ರದ ಸಂಪತ್ತನ್ನು ಸೃಷ್ಟಿಸುತ್ತಿದ್ದಾರೆ. ಅವರಲ್ಲಿ ಕೆಲವರು ಕುಶಲಕರ್ಮಿಗಳಾಗಿದ್ದರೆ, ಇನ್ನೂ ಕೆಲವರು ಇಂಜಿನಿಯರ್‌ಗಳಾಗಿ ಮಹತ್ವದ ಹುದ್ದೆಗಳನ್ನು ನಿರ್ವಹಿಸುತ್ತಿದ್ದಾರೆ. ಎಲ್ಲರೂ ಇಲ್ಲದಿದ್ದರೂ ಕೆಲವರಾದರೂ ಈ ಜವಾಬ್ದಾರಿಯನ್ನು ನಿರ್ವಹಿಸುತ್ತಿರುವುದನ್ನು ನೀವು ಕಾಣಬಹುದು. ಕೆಲವರಿಗೆ 20 ತುಂಬಿದ್ದರೆ ಇನ್ನೂ ಕೆಲವರಿಗೆ 19 ರ ಅಂಚಿನಲ್ಲಿರಬಹುದು; ಮತ್ತೆ ಕೆಲವರು ಕಾಲೇಜು, ತಾಂತ್ರಿಕ ಸಂಸ್ಥೆಗಳಿಗೆ ಹೋಗುತ್ತಿರಬಹುದು. ಒಟ್ಟಾರೆಯಾಗಿ, 19 ರಿಂದ 21ರ ವಯಸ್ಸಿನ ಯುವಕರು ತಮ್ಮ ತಮ್ಮ ಸ್ಥಾನದಲ್ಲಿ ಉತ್ತಮವಾದದ್ದನ್ನು ಸಾಧಿಸುತ್ತಿದ್ದಾರೆ. ಕಲಿಕೆಯ ಪ್ರಕ್ರಿಯೆಯಲ್ಲಿ ನಮ್ಮ ಸಮಾಜ, ದೇಶಕ್ಕೆ ಎದುರಾಗುತ್ತಿರುವ ಸಮಸ್ಯೆಗಳ ಸಮ್ಮುಖ ಅವರು ತಳೆಯುತ್ತಿರುವ ನಿಲುವಿನಲ್ಲಿ ಅವರ ಪ್ರೌಢಿಮೆ ಕಾಣಬರುತ್ತದೆ. ಹೀಗಿದ್ದೂ ಅವರಿಗೆ ಮತದಾನದ ಹಕ್ಕನ್ನು ನಿರಾಕರಿಸುವುದು ಸರಿಯೆ ? ನನಗೆ ಇದು ಅರ್ಥವಾಗುತ್ತಿಲ್ಲ. ನೀವು ಪ್ರಭುತ್ವವನ್ನು, ಸಾರ್ವತ್ರಿಕ ವಯಸ್ಕ ಮತದಾನದ ಪದ್ಧತಿಯನ್ನು, ದುರ್ಬಲಗೊಳಿಸುತ್ತಿದ್ದೀರಿ. 18 ರಿಂದ 21ರ ವಯಸ್ಸಿನವರಿಗೆ ಮತದಾನದ ಹಕ್ಕನ್ನು ನಿರಾಕರಿಸಿ ವಯಸ್ಸನ್ನು 21 ಕ್ಕೆ ಸೀಮಿತಗೊಳಿಸುವ ಮೂಲಕ ನೀವು ಅಪಾರ ಸಂಖ್ಯೆಯ ಯುವಕರನ್ನು ಅವರ ನ್ಯಾಯಬದ್ಧ ಹಕ್ಕಿನಿಂದ ದೂರವಿಡುತ್ತಿದ್ದೀರಿ; ಶಾಸನ ಸಭೆ, ಸಂಸತ್ತಿಗೆ ತಮ್ಮ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಹಕ್ಕಿನಿಂದ ಅವರನ್ನು ವಂಚಿಸಲಾಗುತ್ತಿದೆ. ಇಂಥ ಬಯಕೆ ನಮ್ಮಲ್ಲೇಕೆ ಮನೆ ಮಾಡಿಕೊಂಡಿದೆಯೋ ನನಗೆ ಅರ್ಥವಾಗುತ್ತಿಲ್ಲ. ಮಾನ್ಯರೆ, ನಾವು ನಮ್ಮ ಯುವಜನತೆಯ ಬಗ್ಗೆ ಹೆಮ್ಮೆ ಪಡಬೇಕು. ಆದರೆ ಅವರನ್ನು ಆಗಾಗ ಬಯ್ಯುವ, ದೋಷಿಸುವ ಕೆಲಸವೇ ನಡೆಯುತ್ತಿದೆ. ಕೆಲವು ಹಿರಿಯರು, ರಾಜಕಾರಣಿಗಳು ತಮ್ಮ ಅನುಕೂಲಕ್ಕೆ ಅನುಗುಣವಾಗಿ ಇಂಥ ಕೆಲಸದಲ್ಲಿ ನಿರತರಾಗುತ್ತಿದ್ದಾರೆ. ಯುವಕರು ತಮ್ಮ ಮೂಗಿನ ನೇರಕ್ಕೆ ನಡೆಯದಿದ್ದರೆ, ಅವರಲ್ಲಿ ಅಶಿಸ್ತು ತುಂಬಿ ತುಳುಕುತ್ತಿದೆ ಎನ್ನುವದು; ಅವರಿನ್ನೂ ಅಪಕ್ವವಾಗಿದ್ದು ಅವರ ಬುದ್ಧಿ ಬೆಳೆದಿಲ್ಲವೆನ್ನುವುದು; ಹೀಗಾಗಿ ಅವರು ಯಾವುದೇ ತರಹದ ಒತ್ತಡಗಳಿಗೆ ಸಹಜವಾಗಿ ಬಲಿಯಾಗುತ್ತಾರೆನ್ನುವುದು, ದಿನನಿತ್ಯ ಕೇಳಿಬರುವ ಮಾತಾಗಿದೆ. ಹಿರಿಯರ ಮಾತುಗಳನ್ನು ಚಾಚೂ ತಪ್ಪದೆ ಅನುಸರಿಸಿದರೆ ಮಾತ್ರ ಅವರನ್ನು ಉತ್ತಮವೆಂದೂ, ಶಿಸ್ತಿನ ಸಾಕಾರಗಳೆಂದೂ ಹೊಗಳಲಾಗುತ್ತದೆ. ಇದು ತಪ್ಪು. ಈ ವಿಷಯದಲ್ಲಿ ನೀವು ತುಸು ಗತಿಶೀಲತೆಯನ್ನು ಮೈಗೂಡಿಸಿಕೊಳ್ಳಬೇಕಾದದ್ದು ಅವಶ್ಯಕವಾಗಿದೆ. ಕೆಲವು ಸಲ ಹಿರಿಯರು ಒಪ್ಪದ ಮಾತುಗಳು ಯುವಕರಿಂದ ಬರುವುದು. ಆದರೆ ಅವರ ಬಗ್ಗೆ ನಾವು ಇತ್ಯಾತ್ಮಕ ನಿಲುವು ಹೊಂದಿ ಅವರ ಶಕ್ತಿ ಸಾಮರ್ಥ್ಯಗಳನ್ನು ಕ್ರಾಂತಿಕಾರಿ ಹಾಗೂ ರಚನಾತ್ಮಕ ದಿಸೆಯಲ್ಲಿ - ಇಂಥ ಮಾತು ನಾನು ಬಳಸಬಹುದಾದರೆ- ಮುನ್ನಡೆಸುವ ಪ್ರಯತ್ನ ಮಾಡಬೇಕಿದೆ. ನಮ್ಮ ಯುವಜನತೆಯಲ್ಲಿ ಅಂತರ್ಗತವಾಗಿರುವ ಅಪಾರ ಶಕ್ತಿಯನ್ನು ಜನಕಲ್ಯಾಣಕ್ಕಾಗಿ ನಾವು ಬಿಡುಗಡೆಗೊಳಿಸಬೇಕು.

ಈ ದಾರಿಯನ್ನು ತುಳಿಯುವ ಮೂಲಕ ಮಾತ್ರ ನಾವು ಯುವ ಶಕ್ತಿಯನ್ನು ಸದಾ ಬಳಕೆಗೆ ತೊಡಗಿಸಬಹುದು. ಆದರೆ, ಇದಕ್ಕೆ ವ್ಯತಿರಿಕ್ತವಾಗಿ, ನಾವು ಅವರನ್ನು ದೂಷಿಸುವುದರಲ್ಲಿ ನಿರತರಾಗುತ್ತಿದ್ದೇವೆ. ಅವರಿಗೆ ಮತದಾನದ ಹಕ್ಕು ನಿರಾಕರಿಸುವುದಕ್ಕೆ ನಾವು ಕೊಡುವ ಕಾರಣ: ಅವರು ಇನ್ನೂ ಸಾಕಷ್ಟು ಬೆಳೆದಿಲ್ಲವೆಂಬುದು; ಅವರಿನ್ನೂ ಅಪಕ್ವವಾಗಿದ್ದಾರೆ ಎನ್ನುವುದು. ಆದರೆ ಇದರಲ್ಲಿ ಸತ್ಯಾಂಶವಿದೆಯೆ ? ನಮಗೇ ಈ ಮಾತಿನಲ್ಲಿ ಗಂಭೀರವಾದ ನಂಬುಗೆಯಿದೆಯೆ? ನಿಮಗೆ ಈ ಬಗ್ಗೆ ಅನುಭವವಾಗಿಲ್ಲವೇ ? ರಾಜಕೀಯ ಸಂಘರ್ಷ ಮತ್ತು ಆಂದೋಲನದ ಸಮಯದಲ್ಲಿ, ಅವು ಕ್ರಾಂತಿಕಾರಿಯಾಗಿರಬಹುದು ಅಥವಾ ಪ್ರತಿಕ್ರಾಂತಿಕಾರಿ ಯಾಗಿರಬಹುದು. ಚುನಾವಣೆ ಸಮಯದಲ್ಲಿ ಅದು ಯಾವುದೇ ಪಕ್ಷಕ್ಕೆ ಸಂಬಂಧಿಸಿರಬಹುದು, ನಾವೆಲ್ಲರೂ ಯುವಕರೆಡೆಗೆ ಹೋಗುತ್ತೇವೆ; ಅವರ ಬೆಂಬಲ ಆಶಿಸುತ್ತೇವೆ. ಅವರಲ್ಲಿ ಅನೇಕರು 21 ಕ್ಕಿಂತ ಕಡಿಮೆ ವಯೋಮಾನದವರಿರುತ್ತಾರೆ. ಆದರೂ ಅವರು ಪ್ರಜಾಪ್ರಭುತ್ವ ಮತ್ತು ಚುನಾವಣಾ ಪ್ರಕ್ರಿಯೆಯ ಮುಂದಾಳುಗಳಾಗಿ ಕೆಲಸ ಮಾಡುತ್ತಾರೆ. ಚುನಾವಣೆಗಳ ಜವಾಬ್ದಾರಿಯನ್ನು ಅವರ ಮೇಲೆ ಹೊರಿಸುವ ನಾವು, ರಾಜಕೀಯ ಆಂದೋಲನಗಳಿಗಾಗಿ ಅಥವಾ ಯಾವುದೇ ಒಬ್ಬ ಮುಖಂಡನ ಪ್ರಭಾವದ ಪ್ರಚಾರಕ್ಕಾಗಿ ಅವರನ್ನು ಬಳಸುತ್ತೇವೆ. ಆದರೆ ಅವರಿಗೆ ಮತದಾನದ ಹಕ್ಕು ನೀಡುವ ಪ್ರಶ್ನೆಬಂದಾಗ, ನಮ್ಮ ಜಿಪುಣತನ ಧುಮ್ಮಿಕ್ಕಿ ಹರಿಯುತ್ತದೆ : ನಾವು ಸಂಪ್ರದಾಯ ಶರಣರಾಗಿ, ಅನುಯಾಯಿಗಳಾಗಿ ನಡೆದುಕೊಳ್ಳುತ್ತೇವೆ. ಇದರಿಂದ ನಾವು ಯುವಕರ ಮುಂದೆ ಸನ್ನಡತೆಯ ಪರಿಮಿತಗಳನ್ನು ಸಾದರ ಪಡಿಸಲು ಸಾಧ್ಯವೆ ? ಸಾಧ್ಯವಿಲ್ಲ. ಎಂದಿಗೂ ಸಾಧ್ಯವಿಲ್ಲ. ಮಾನ್ಯರೇ, 18 ರಿಂದ 20 ರ ವಯೋಮಾನದ ಯುವಕರನ್ನು ಆಯ್ಕೆ ಮಾಡಿ ನಾವು ನಮ್ಮ ಸೈನ್ಯಕ್ಕೆ ಸೇರಿಸುತ್ತೇವೆ; ಅವರ ಮೇಲೆ ದೇಶ ರಕ್ಷಣೆಯ ಹೊಣೆ ಹೇರುತ್ತೇವೆ. ಬಹುಶಃ ಇದಕ್ಕೆ ಯಾವುದೇ ಆಕ್ಷೇಪಣೆಯಿಲ್ಲ. ಸಕಾಲದಲ್ಲಿ ಸೂಕ್ತ ತರಬೇತಿ ಪಡೆಯುವ ಅವರು ನಾಡ ಗಡಿ ರಕ್ಷಣೆಗೆ ಹೋರಾಡಲು ಕಳಿಸಲ್ಪಡುತ್ತಾರೆ. ಆದರೆ ಅವರ ಕೈಗೆ ಒಂದು ಸಾದಾ ಮತ ಪತ್ರ ಕೊಡಲು ನಾವು ಹಿಂಜರಿಯುತ್ತಿದ್ದೇವೆ. ಯಾಕೆ ? ಅವರು ತಮ್ಮ ಈ ಜವಾಬ್ದಾರಿಯನ್ನು ವಿವೇಕದಿಂದ ನಿರ್ವಹಿಸಲಾರರೆಂದೆ ? ಇದು ಸರಿಯಾದದ್ದೆ ? ಸಾಧುವಾದದ್ದೆ ? ಯುವ ಪೀಳಿಗೆಯ ಬಗ್ಗೆ ನ್ಯಾಯಯುತವಾದದ್ದೇ ? ನಮ್ಮಲ್ಲಿ ಮನೆಮಾಡಿ ಕೊಂಡಿರುವ ಸಂಪ್ರದಾಯದ ಜಡತ್ವವೇ ನಾವು ಈ ದಿಸೆಯಲ್ಲಿ ಹಿಂಜರಿಯುವಂತೆ ಮಾಡುತ್ತಿದೆ. ಇಡೀ ದೇಶ ಬೇಡುತ್ತಿದ್ದರೂ ನಾವು ಈ ಹಕ್ಕನ್ನು ಯುವಕರ ಕೈಗೆ ನೀಡಲು ಹಿಂದಡಿ ಇಡುತ್ತಿದ್ದೇವೆ. ಸೋವಿಯತ್ ನಾಡಿನೆಡೆಗೆ ನೋಡಿ. ಅಲ್ಲಿ 18 ವಯಸ್ಸಿಗೆ ಮತದಾನದ ಹಕ್ಕನ್ನು ನೀಡಲಾಯಿತು. ಕ್ರಾಂತಿಯ ನಂತರ ಅನತಿಕಾಲದಲ್ಲಿಯೇ ಅಲ್ಲಿಯ ಯುವಕರು ಈ ಹಕ್ಕಿಗೆ ಭಾಜನರಾಗಿದ್ದರು. ಅವರು ನಮ್ಮಂತೆ 27 ವರ್ಷಗಳವರೆಗೆ ಕಾಯಬೇಕಾಗಲಿಲ್ಲ. ಹೀಗಾಗಿ, ಅವರ ಕ್ರಾಂತಿ ತಕ್ಷಣವೇ ಯಶಸ್ವಿಯಾಯಿತು. ಈ ಯಶಸ್ಸಿನ ಪರಿಣಾಮವೇನುಗೊತ್ತೇ ? ಆ ದೇಶವು ಇಂದು ಜಗತ್ತಿನಲ್ಲಿಯೇ ಅತ್ಯಂತ ಮುಂದುವರೆದ ಔದ್ಯಮಿಕ ರಾಷ್ಟ್ರಗಳಲ್ಲಿ ಒಂದಾಗಿ ಮೆರೆಯುತ್ತಿದೆ.

ರಾಷ್ಟ್ರದ ಮುನ್ನಡೆಯಲ್ಲಿ ಯುವ ಜನತೆ ತುಂಬ ಮಹತ್ವದ ಪಾತ್ರವಹಿಸುತ್ತಿದ್ದಾರೆ. ಇನ್ನಿತರ ರಾಷ್ಟ್ರಗಳೆಡೆಗೂ ನೋಡಿರಿ. ಜರ್ಮನಿ ಅಥವಾ ಸಮಾಜವಾದಿ ರಾಷ್ಟ್ರಗಳೆಡೆಗೆ ನೋಡಿ. ಅಲ್ಲಿಯೂ ನಿಮಗೆ, ಇದೇ ದೃಶ್ಯ ಕಾಣುತ್ತದೆ. ಗತಿಶೀಲ ಸ್ವಭಾವ, ಚುರುಕುತನ, ದುರ್ದಮ್ಯವಾಗಿ ಪುಟಿಯುತ್ತಿರುವ ಚೇತನ, ಅಪಾರಶಕ್ತಿ- ಸಾಮರ್ಥ್ಯಗಳಿಂದೊಡಗೂಡಿದ ಮುನ್ನೋಟ, ವಿಶ್ರಮವರಿಯದ ಕಠಿಣ ಪರಿಶ್ರಮ ಪ್ರವೃತ್ತಿ - ಇವೆಲ್ಲವುಗಳ ಸಾಕಾರವಾಗಿರುವ ಯುವಕರು ಅಲ್ಲಿ ತಮ್ಮ ತಮ್ಮ ದೇಶಗಳನ್ನು ಸಬಲಗೊಳಿಸುತ್ತಿದ್ದಾರೆ. ಸಕಲ ವಿಧದಲ್ಲೂ ಯೋಗ್ಯವೆನಿಸುವಂತೆ ತಮ್ಮ ರಾಷ್ಟ್ರದ ಸಂಪತ್ತನ್ನು ಸಮೃದ್ಧಗೊಳಿಸುತ್ತಿದ್ದಾರೆ. ಆದರೆ ಅದನ್ನು ನೀವೂ ಯಾಕೆ ಮಾಡಬಾರದು ? ನೀವು ಈ ಕ್ರಿಯೆಯಿಂದ ಯಾಕೆ ನಾಚಿ ಹಿಂಜರಿಯುತ್ತಿದ್ದೀರಿ ? ಎಂದೋ ಮಾಡಬೇಕಾಗಿದ್ದ ಈ ಕೆಲಸ ಇಂದಾದರೂ ಯಾಕೆ ನೆರವೇರಬಾರದು ?

ಯುವಕರಿಗೆ ಪ್ರಾಶಸ್ತ್ಯ ಕೊಟ್ಟು ಅವರಿಗೆ ಮಂತ್ರಿ ಸ್ಥಾನಗಳನ್ನು ನೀಡಬೇಕೆಂಬ ಮಾತು ಇತ್ತೀಚಿಗೆ ಕೇಳಿ ಬರುತ್ತಿದೆ. ಆದರೆ ನಮ್ಮ ದೇಶದಲ್ಲಿ ತೀರ ಭಿನ್ನ ಸ್ಥಿತಿ ಇದೆ. 45 ತಲುಪುವವರೆಗೆ ನೀವು ಯುವಕರಾಗುವುದಿಲ್ಲ. ಕೆಲವು ರೀತಿಯಲ್ಲಾದರೂ ಹೀಗೆ ಅನ್ನಿಸುತ್ತಿದೆ. ಯುವ ಜನತೆಯ ಕುರಿತಿರುವ ಈ ನಿರೂಪಣೆಯನ್ನು ನಾವು ಒಪ್ಪುವುದಿಲ್ಲ. ಕೆಲವು ಸಮಯದಲ್ಲಂತೂ ನೀವು 45 ದಾಟಿದರೆ ಮಾತ್ರ ಯುವಕರೆಂದು ಪರಿಗಣಿಸಲ್ಪಡುತ್ತೀರಿ. ಇದನ್ನಂತೂ ನಾವು ಸುತರಾಂ ಒಪ್ಪುವುದಿಲ್ಲ.ಯುವಕರು ಮಂತ್ರಿ ಮಂಡಲವನ್ನು ಪ್ರವೇಶಿಸಬೇಕೆಂಬ ತತ್ವವನ್ನು ನೀವು ಒಪ್ಪುವುದಾದರೆ, ಮತದಾನದ ವಯಸ್ಸನ್ನು ಇಳಿಸಬೇಕೆಂಬ ವಾದವನ್ನು ಏಕೆ ಒಪ್ಪುವುದಿಲ್ಲ ? ಅದು ನನಗೆ ಅರ್ಥವಾಗುತ್ತಿಲ್ಲ.

ಉದಾಹರಣೆಗೆ: ಇತ್ತೀಚಿನ ಮುಖ್ಯಮಂತ್ರಿಗಳನ್ನು ನೋಡಿ. ತುಲನಾತ್ಮಕವಾಗಿ ಇತ್ತೀಚಿಗೆ ಯುವ ಮುಖ್ಯಮಂತ್ರಿಗಳು ಹೆಚ್ಚಾಗಿಸಿಗುತ್ತಿದ್ದಾರೆ. ಅವರೂ ಅಷ್ಟೇನೂ ಯುವಕರಾಗಿಲ್ಲವೆಂಬ ಮಾತು ಬೇರೆ. ಒರಿಸ್ಸಾದ ಮುಖ್ಯಮಂತ್ರಿಯಾಗಿರುವ ನಂದಿನ ಸತ್‌ಪತಿಯವರು ಯುವಕರಾಗಿದ್ದಾರೆ. ಆದರೆ ನೆರೆತ ಕೂದಲಿನ ಯುವಕರವರು ! ಪಶ್ಚಿಮ ಬಂಗಾಳದ ಮುಖ್ಯಮಂತ್ರಿಯೂ ತೌಲಾನಿಕವಾಗಿ ಯುವಕರೇ ಆಗಿದ್ದಾರೆ. ಈ ಮಾತನ್ನು ಇನ್ನೂ ಅನೇಕ ರಾಜ್ಯಗಳಿಗೆ ಅನ್ವಯಿಸಿ ಹೇಳಬಹುದು. ಹಿಂದಿನ ಕಾಲದಲ್ಲಿ ಸ್ಥಿತಿ ಇದಕ್ಕೆ ತದ್ವಿರುದ್ಧವಾಗಿತ್ತು. ಹೆಚ್ಚು ವಯಸ್ಸಾದಂತೆ ನೀವು ಉನ್ನತ ಜವಾಬ್ದಾರಿಯ ಸ್ಥಾನಗಳಿಗೆ ಅರ್ಹರಾಗಿರುತ್ತಿದ್ದೀರಿ ! ಆದರೆ ಇಂದು ಆ ಭಾವನೆಯನ್ನು ನಾವು ತೊಡೆದು ಹಾಕಿದ್ದೇವೆ. ಪ್ರತಿಯೊಂದು ಕ್ಷೇತ್ರದಲ್ಲಿಯೂ ನಾವು ಯುವಕರನ್ನು ಆಯ್ಕೆಮಾಡುತ್ತಿದ್ದೇವೆ. ಆದ್ದರಿಂದ ಮತದಾನದ ಹಕ್ಕನ್ನು ನೀಡಿ ಅವರಿಗೆ ಸಂವಿಧಾನಿಕ ಮನ್ನಣೆ ಯಾಕೆ ಕೊಡಬಾರದು ? ಮಿಲಿಯಾಂತರ ಯುವಜನರು ಈ ಹಕ್ಕನ್ನು ಇಂದು ಪಡೆಯಬೇಕಾಗಿದೆ. ಮಾನ್ಯರೆ, ನಾವು

ಸಂವಿಧಾನಕವಾಗಿ ಅವರಿಗೆ ನೀಡಲಿರುವ ಈ ಮನ್ನಣೆ ಅವರಲ್ಲಿ ಜವಾಬ್ದಾರಿಯ ಮನೋಧರ್ಮವನ್ನು ರೂಢಿಸಲಿದೆ. ಇದರಿಂದ ದೇಶದ ಆಗು- ಹೋಗುಗಳಲ್ಲಿ ತಾವು ಭಾಗಿಗಳಾಗುತ್ತಿದ್ದೇವೆ- ಎಂಬ ಭಾವನೆ ಅವರಿಗೆ ರಕ್ತಗತವಾಗಲಿದೆ.

ಅಷ್ಟೇ ಯಾಕೆ, ಎಲ್ಲಾ ಜವಾಬ್ದಾರಿಗಳನ್ನು ಹಂಚಿಕೊಂಡು ಪ್ರಜಾತಾಂತ್ರಿಕ ಪ್ರಕ್ರಿಯೆಯಲ್ಲಿ ಪಾಲುಗೊಳ್ಳುವ ಅವಕಾಶವೇ ಅವರ ನಡವಳಿಕೆಯಲ್ಲಿ ಗಾಂಭೀರ್ಯ ತರುತ್ತದೆ. ಹೀಗಾಗಿ ಎಲ್ಲ ವಿಧದಲ್ಲೂ ಲಾಭವೇ ಇದೆ. ಯುವಕರಿಗೆ ಈ ಹಕ್ಕು ನೀಡುವುದರ ಮೂಲಕ ನಮ್ಮ ಸಂವಿಧಾನ ಇನ್ನೂ ಉತ್ತಮವಾಗುತ್ತದೆ: ಉಜ್ವಲವಾಗುತ್ತದೆ. ಮೇಲಾಗಿ ಅನನ್ಯ ಶ್ರೇಷ್ಠವಾಗುತ್ತದೆ. ಮಾನ್ಯರೆ, ಇತ್ತೀಚಿಗೆ ಬೇರೆ ಸಂದರ್ಭಗಳಲ್ಲಿ ಸಂವಿಧಾನದ ಬದಲಾವಣೆಯ ಬಗ್ಗೆ ಅನೇಕ ಮಾತುಗಳು ಕೇಳಿಬರುತ್ತವೆ. ನಾವು ಈ ಸಂವಿಧಾನದ ಬದಲಾವಣೆಯ ಪರವಾಗಿದ್ದೇವೆ. ಮೊಟ್ಟಮೊದಲಿಗೆ, ನಿರ್ದೇಶಕ ತತ್ವಗಳನ್ನು ಕಡ್ಡಾಯವಾಗಿ ಜಾರಿಗೊಳಿಸುವಂತಾಗಬೇಕು. ಸಂವಿಧಾನದ 226ನೇ ವಿಧಿಗೆ ತಿದ್ದುಪಡಿ ತರಬೇಕೆಂದು ನಮ್ಮ ಬಯಕೆ. ಆ ಮೂಲಕ ಉಚ್ಚ ನ್ಯಾಯಾಲಯಗಳು ಭೂ-ಸುಧಾರಣಾ ಕ್ರಮಗಳಿಗೆ ತಡೆಯಾಜ್ಞೆ ನೀಡಲು ಸಾಧ್ಯವಾಗದಂತೆ ಮಾಡಬೇಕು. ಸಂವಿಧಾನದ ಕೆಲವು ವಿಧೇಯಕಗಳಿಗೆ ಸೂಕ್ತ ತಿದ್ದುಪಡಿ ತಂದು ಜನತೆ ಭೂ- ಸುಧಾರಣಾ ಕಾರ್ಯಕ್ರಮದಲ್ಲಿ ನೇರವಾಗಿ ಭಾಗವಹಿಸುವಂತೆ ಮಾಡಲು ಸಾಧ್ಯವಾಗಬೇಕು. ಸಂವಿಧಾನದ ಕಾರ್ಯಗಳು ಈಗಿನದಕ್ಕಿಂತಲೂ ಉತ್ತಮಗೊಳ್ಳಬೇಕು. ಆದರೆ ಈ ಆರಂಭವನ್ನು ನೀವು ಇಲ್ಲಿನಿಂದಲೇ ಯಾಕೆ ಮಾಡಬಾರದು ? ಪ್ರಜಾಪ್ರಭುತ್ವವನ್ನು ಇನ್ನೂ ಸಬಲಗೊಳಿಸುವುದಾಗಿ ಮೊನ್ನೆ ಪ್ರಧಾನ ಮಂತ್ರಿಗಳು ಲೋಕಸಭೆಯಲ್ಲಿ ಹೇಳಿಕೆ ನೀಡಿದ್ದರು. ನಾವು ಈ ಹೇಳಿಕೆಯನ್ನು ಸ್ವಾಗತಿಸಿದ್ದೇವೆ. ಪ್ರಜಾಪ್ರಭುತ್ವ ಬಲಗೊಳ್ಳಬೇಕಾಗಿದೆ: ಆ ಮೂಲಕ ರಾಷ್ಟ್ರ ಇನ್ನೂ ಸಬಲವಾಗಬೇಕಾಗಿದೆ.

ಇದೋ, ಇನ್ನೊಬ್ಬ ಯುವ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಶೇಠಿ ಬರುತ್ತಿದ್ದಾರೆ. ಮಾನ್ಯ ಶೇಠಿ ಅವರೇ, ನೀವು ಬರುವುದಕ್ಕಿಂತ ಮುಂಚೆ ನಾನು ಮತದಾನದ ವಯಸ್ಸನ್ನು 18ಕ್ಕೆ ಇಳಿಸುವ ವಿಷಯಕ್ಕೆ ಒತ್ತುಕೊಟ್ಟು ಮಾತಾಡುತ್ತಿದ್ದೆ, ಮತ್ತು ಆ ಸಮಯದಲ್ಲಿ ನಾನು ಹೇಳಿದ್ದೇನೆಂದರೆ, ಹಿಂದಿನ ಕಾಲದಲ್ಲಿ ಮುಖ್ಯ ಮಂತ್ರಿಗಳ ಆಯ್ಕೆ ಮಾಡುವಾಗಲೆಲ್ಲ ವಿಶೇಷವಾಗಿ ಕಾಂಗ್ರೆಸ್ಸಿನಲ್ಲಿ, ಅತ್ಯಂತ ಹಿರಿಯರನ್ನೇ ಆಯ್ಕೆಮಾಡಲಾಗುತ್ತಿತ್ತು. ಆದರೆ, ಈಗ ನಿಮ್ಮಂಥ ಯುವಕರನ್ನು ಆಯ್ಕೆ ಮಾಡಲಾಗುತ್ತಿದೆ. 20 ವರ್ಷಗಳ ಹಿಂದೆ ಸ್ಥಿತಿ ಬೇರೆಯಾಗಿತ್ತು. ಆಗ ಮುಖ್ಯ ಮಂತ್ರಿಯಾಗಲು ನಿಮಗೆ ಸಾಕಷ್ಟು ವಯಸ್ಸಾಗಿರಬೇಕಾಗಿರುತಿತ್ತು. ಆದರೆ ಈಗಲಾದರೋ ಸ್ಥಿತಿ ಬೇರೆಯಾಗಿದೆ. ತೌಲನಿಕವಾಗಿ ಯುವಕರಾಗಿರುವವರೂ ಉತ್ತಮ ಆಡಳಿತ ನೀಡಿ ಸೈ ಎನಿಸಿಕೊಳ್ಳುತ್ತಿದ್ದಾರೆ. ನಾನು ಇಂಥವರ ಕುರಿತೇ ಪ್ರಸ್ತಾಪಿಸುತಿದ್ದೆ.

ಡಾ. ಬಿ.ಸಿ. ರಾಯ್ ಮುಖ್ಯ ಮಂತ್ರಿಯಾಗಿದ್ದಾಗ ಅವರು 20ರ ಆಸುಪಾಸಿನಲ್ಲಿದ್ದರು. ಒಟ್ಟಾರೆಯಾಗಿ ಮುಖ್ಯ ಮಂತ್ರಿಯಾಗಲು ಆಗ 60 ದಾಟಿರಬೇಕಾಗಿರುತ್ತಿತ್ತು. ಆದರೆ ಇಂದು ನಮ್ಮ ದೃಷ್ಟಿಕೋನ ಬದಲಾಗಿದೆ. ಆದ್ದರಿಂದ ನೀವು ಈ ವಿಧೇಯಕವನ್ನು ಅಂಗೀಕರಿಸಬೇಕು. ಯುವಕರಿಗೆ ಸಂಬಂಧಿಸಿ ಹೇಳುವುದಾದರೆ, ಆಳುವ ಪಕ್ಷವೂ ಅವರ ಮೇಲೆ ಹೆಚ್ಚು ಒತ್ತು ಕೊಡುತ್ತಿದೆ. ಈ ಸದನದ ಉಪಾಧ್ಯಕ್ಷ ಸ್ಥಾನದ ಬಗ್ಗೆ ಚರ್ಚಿಸುತ್ತಿದ್ದಾಗ ನಾವು ಒಬ್ಬ ಯುವಕರನ್ನು ಆ ಸ್ಥಾನಕ್ಕೆ ತರಬೇಕೆಂದು ಯೋಚಿಸುತ್ತಿದ್ದೆವು. ಮಾನ್ಯರೆ, ತಾವು ಅಷ್ಟಾಗಿ ಯುವಕರಾಗಿಲ್ಲದಿದ್ದರೂ ಎಲ್ಲರ ಒಪ್ಪಿಗೆಗೆ ಅರ್ಹರಾಗಿದ್ದುದ್ದರಿಂದ ತಮಗೆ ಈ ಸ್ಥಾನ ದೊರೆಯಿತು. ಮೇಲಾಗಿ 30 ವರ್ಷಕ್ಕಿಂತ ಕಡಿಮೆ ವಯಸ್ಸಿನವರು ಈ ಸ್ಥಾನ ಅಲಂಕರಿಸುವಂತಿಲ್ಲ ತತ್ಪರಿಣಾಮವಾಗಿ ತಾವು ಉಪಾಧ್ಯಕ್ಷರಾಗಿದ್ದೀರಿ. ಇದರಿಂದ ತೊಂದರೆ ಏನಾದರೂ ಆಗಿದೆಯೆ? ನಾವು ನಿಮಗಿಂತಲೂ ಹೆಚ್ಚಿನ ವಯಸ್ಸಿನವರನ್ನು ಆಯ್ಕೆ ಮಾಡಬಹುದಿತ್ತು. ಈ ಸದನದಲ್ಲಿ ಅಂಥವರು ಅನೇಕ ಜನರಿದ್ದಾರೆ. ಒಂದು ಕಾಲು ಗೋರಿಯಲ್ಲಿಟ್ಟಿರುವ ಹಿರಿಯರೊಬ್ಬರನ್ನು ನಾವು ಬಹು ಸುಲಭವಾಗಿ ಗುರುತಿಸಿ ಈ ಕುರ್ಚಿಯ ಮೇಲೆ ಕೂಡಿಸಬಹುದಿತ್ತು. ಕುರ್ಚಿಯಿಂದ ಗೋರಿಯೆಡೆಗಿನ ಅವರ ಯಾತ್ರೆ ಶಾಂತಿಯುತವಾಗಿ ನಡೆಯುತ್ತಿತ್ತು. ಆದರೆ ತಮ್ಮಂಥ ಯುವಕರೇ, ಅಂದರೆ ಎರಡೂ ಕಾಲುಗಳನ್ನು ಈ ಭೂಮಿಯ ಮೇಲೆ ಭದ್ರವಾಗಿ ಊರಿ ಯಾವುದೇ ಬಿರುಗಾಳಿಗೆ ಅಲುಗದೆ, ಅಳುಕದೆ, ಮುನ್ನಡೆಯಬಲ್ಲ ಧೀಮಂತ ಯುವಕರೇ, ಈ ಕುರ್ಚಿಗೆ ಯೋಗ್ಯರೆಂದು ಒಪ್ಪಿಸಿ ತಮ್ಮನ್ನು ಆಯ್ಕೆ ಮಾಡಿದೆವು. ನಮ್ಮ ಆಯ್ಕೆ ಕೆಟ್ಟದಾಗೇನೂ ಇಲ್ಲ. ಆದ್ದರಿಂದ ಯುವಕರ ಬಗ್ಗೆ ನಾವು ಏನೆಲ್ಲ ಕ್ರಮ ಕೈಗೊಂಡಾಗಲೂ ನಮಗೆ ನಿಮ್ಮಿಂದ ಯಾವುದೇ ತೊಂದರೆಯಾಗಿಲ್ಲ. ಸುಮಾರು 10 ವರ್ಷಗಳ ಹಿಂದೆ ಶ್ರೀಮತಿ ಇಂದಿರಾ ಅವರು ಪ್ರಧಾನ ಮಂತ್ರಿಗಳಾದಾಗ ಅವರ ಬಗ್ಗೆ ಮಂಡಿಸಲಾಗಿದ್ದ ವಾದವೇನಾಗಿತ್ತು ಗೊತ್ತೇ? ದೇಶದ ಪ್ರಧಾನ ಮಂತ್ರಿಯಾಗಲು ಅವರಿಗೆ ಸಾಕಷ್ಟು ವಯಸ್ಸಾಗಿಲ್ಲ, ಎಂಬುದೆ ಆ ವಾದವಾಗಿತ್ತು. ಆ ವಾದವನ್ನು ನಮ್ಮ ಮುಂದೆ ಮಂಡಿಸಲಾಯಿತು:ಇತರರ ಮುಂದೆಯೂ ಸಾದರ ಪಡಿಸಲಾಯಿತು. ಆದರೆ ಅವರನ್ನು ಪ್ರಧಾನಮಂತ್ರಿಯಾಗಿ ಆಯ್ಕೆ ಮಾಡಿದ್ದು ಕಾಂಗ್ರೆಸ್ ಪಕ್ಷ. ನಾವಾದರೋ ಇಂದಿನಂತೆ ಅಂದೂ ವಿರೋಧ ಪಕ್ಷದಲ್ಲಿದ್ದೆವು. ಆದರೆ ಅನೇಕ ಜನ ಅವರ ವಯೋಮಾನದ ಅರ್ಹತೆಯ ಬಗ್ಗೆ ಪ್ರಶ್ನೆ ಕೇಳುತ್ತಿದ್ದರು. ಶ್ರೀ ಮುರಾರ್ಜಿ ದೇಸಾಯಿಯಂಥ ಹಿರಿಯ ವಯೋವೃದ್ಧರು ಪ್ರಧಾನಮಂತ್ರಿ ಅಭ್ಯರ್ಥಿಗಳ ಸಾಲಿನಲ್ಲಿ ಕ್ಯೂ ನಿಂತಿದ್ದಾಗ ಅವರನ್ನು ಬಿಟ್ಟು ಒಬ್ಬ ಯುವ ಮಹಿಳೆಯನ್ನು ವಿಶೇಷವಾಗಿ ಸಂಸದೀಯ ವಿಧಿವಿಧಾನ ಮತ್ತು ಆಡಳಿತ ನಿರ್ವಹಣೆ ಬಗ್ಗೆ ಏನೇನು ಅನುಭವವಿರದ ಯುವ ಮಹಿಳೆಯನ್ನು ಪ್ರಧಾನಮಂತ್ರಿಯಾಗಿ ಆಯ್ಕೆ ಮಾಡಿದ್ದಕ್ಕೆ ಸಾಕಷ್ಟು ತಕರಾರು ಕೇಳಿಬರುತ್ತಿತ್ತು. ಕೆಲವೇ ಸಮಯದವರೆಗೆ ವಾರ್ತಾ ಮತ್ತು ಪ್ರಸಾರ ಇಲಾಖೆಯ ಮಂತ್ರಿಯಾಗಿ ಕೆಲಸ ಮಾಡಿದ್ದ ಒಬ್ಬ ವ್ಯಕ್ತಿಯನ್ನು ಅಂಥ ಉನ್ನತ ಹುದ್ದೆಗೆ ಆಯ್ಕೆ ಮಾಡಿದ್ದು ಸರಿಯೇ ? ಎಂಬ ಪ್ರಶ್ನೆಯೇ ಎಲ್ಲ ದಿಕ್ಕುಗಳಿಂದಲೂ ಕೇಳಿಬರುತ್ತಿತ್ತು.

ಅಂತೂ ಇಂತೂ ಆಯ್ಕೆಯಂತೂ ಮಾಡಲಾಯಿತು: ಶ್ರೀ ಕಾಮರಾಜರು ಮುಂದಡಿಯಿಟ್ಟು ಆ ಕಾಲದಲ್ಲಿ ಇಂದಿರಾಜಿಯ ಬೆಂಬಲಕ್ಕೆ ನಿಂತರು.

ಆಗ ಕಾಮರಾಜರು ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. ಮೇಲಾಗಿ, ಸಂಪ್ರದಾಯವಾದಿ ಹಿರಿಯ ಮುಂದಾಳುಗಳಿಗೆ ಹೋಲಿಸಿದರೆ, ಸ್ವತಃ ಅವರೇ ಯುವಕರಾಗಿದ್ದರು. ಈಗ ನೀವೇನೇ ಹೇಳಿದರೂ ಆಯ್ಕೆ ಮಾತ್ರ ಕೆಟ್ಟದಾಗಿರಲಿಲ್ಲವೆಂಬುದು ಸರ್ವವಿದಿತ. ಇದಕ್ಕೆ ಪ್ರತಿಯಾಗಿ , ನೀವೀಗ " ಇಂದಿರಾ ದಶಕದ "ಬಗ್ಗೆ ಮಾತಾಡುತ್ತಿದ್ದೀರಿ ಅದೂ ಸಾಕಷ್ಟು ಬೇಜವಾಬ್ದಾರಿಯಿಂದ. ಯಾವುದೇ ಒಬ್ಬ ವ್ಯಕ್ತಿಯ ಹೆಸರಿಗೆ ಒಂದು ದಶಮಾನ ತಗುಲಿ ಹಾಕಲಾಗದು. ರಾಷ್ಟ್ರ ನಿರ್ಮಾಣದ ಕಾರ್ಯದಲ್ಲಿ ತೊಡಗಿರುವ ಭಾರತೀಯ ಮಹಾಜನತೆಯ ಸಾಧನೆಯ ದಶಕವೆಂದು ಕರೆಯಬಹುದೇ ಹೊರತು, ಯಾವುದೇ ಒಂದು ವ್ಯಕ್ತಿಯ ದಶಕವೆನ್ನುವುದು ಸೂಕ್ತವಲ್ಲ. ಇಂಥ ಸಮಯದಲ್ಲಿ ಅಲ್ಲೊಬ್ಬ ಇಲ್ಲೊಬ್ಬ ವ್ಯಕ್ತಿ ಮಿಂಚಬಹುದು: ಎದ್ದು ಕಾಣಬಹುದು: ತನ್ನ ಪಾತ್ರವನ್ನು ಸಮರ್ಥಿಸಿಕೊಳ್ಳಬಹುದು. ಮಾನ್ಯರೆ, ಆ ಕಾಲದಲ್ಲಿ ಕಾಂಗ್ರೆಸ್ಸಿನಲ್ಲೂ ಸಾಕಷ್ಟು ಸಂಪ್ರದಾಯವಾದಿಗಳಿದ್ದರು. ನಾನು ಆ ವಿವರಕ್ಕೆ ಹೋಗ ಬಯಸುವುದಿಲ್ಲ. ಅದೇನೇ ಇದ್ದರೂ ಕಾಂಗ್ರೆಸ್ ಪಕ್ಷ ಒಬ್ಬ ಒಳ್ಳೆಯ ವ್ಯಕ್ತಿಯನ್ನು ಆಯ್ಕೆ ಮಾಡಿತ್ತೆಂದು ಹೇಳಿಕೊಳ್ಳಬಹುದು. ವಯಸ್ಸು ಯಾವುದೇ ಅಡ್ಡಿ, ಅಡಚಣೆಯಾಗಿ ಪರಿಣಮಿಸಲಿಲ್ಲ. ಕೊನೆಯ ಪಕ್ಷ, ಪ್ರಧಾನಮಂತ್ರಿ ಅರ್ಹತೆಯ ವಯಸ್ಸು 60 ವರ್ಷವಿರಬಾರದೆಂದು ಕೆಲವು ಜನ ಸಲಹೆ ಮಾಡಿದ್ದರು. ನಮಗೆ ತಿಳಿದಮಟ್ಟಿಗೆ ಆಗ ಇಂದಿರಾಜೀಗೆ 48, ಅಥವಾ 49 ವರ್ಷಗಳಾಗಿದ್ದವು.

ನಾನು ಕೇವಲ ಒಂದು ನಿದರ್ಶನ ನೀಡುತ್ತಿದ್ದೇನೆ ಅಷ್ಟೇ, ಮತದಾನದ ವಯೋಮಾನ ಇಳಿಸುವುದಕ್ಕೇ ಇದೇ ಸಮರ್ಥನೆಯನ್ನು ಕೊಡಬಹುದೆಂಬುದು ನನ್ನ ಇಂಗಿತ. ಸಾಮಾನ್ಯವಾಗಿ ಎಲ್ಲಡೆಯೂ ಯುವಕರನ್ನೇ ಆಯ್ಕೆ ಮಾಡಲಾಗುತ್ತಿದೆ, ಮತ್ತು ಯುವಕರು ಈ ಆಯ್ಕೆಯನ್ನು ತಮ್ಮ ಸ್ವಸಾಮರ್ಥದಿಂದ ಸಮರ್ಥಿಸಿಕೊಳ್ಳುತ್ತಿದ್ದಾರೆ. ಯುವಕರಲ್ಲಾಗಲಿ, ವಯಸ್ಸಾದವರಾಗಲಿ ಅಲ್ಲೊಂದು ಇಲ್ಲೊಂದು ತಪ್ಪಾಗಿರುವ ನಿದರ್ಶನಗಳಿರಬಹುದು. ಆದರೆ ನೀವು ಅದನ್ನು ಸಾರ್ವತ್ರಿಕಗೊಳಿಸಿ ಮಾತಾಡಲು ಸಾಧ್ಯವಿಲ್ಲ. ಮಾನ್ಯರೆ, ನಮ್ಮ ಯುವ ಜನತೆ ವಿಶ್ವವಿದ್ಯಾಲಯ ಮತ್ತು ಕಾಲೇಜುಗಳಲ್ಲಿ, ಕಾರ್ಖಾನೆ ಮತ್ತು ಹೊಲಗದ್ದೆಗಳಲ್ಲಿ ತಮ್ಮ ರಾಜಕೀಯ ಪ್ರಜ್ಞೆಯನ್ನು ಮೆರೆಯುತ್ತಿದ್ದಾರೆ. ರಾಷ್ಟ್ರೀಯ ಸಮಸ್ಯೆಗಳ ಕುರಿತು ತಮಗಿರುವ ಸೂಕ್ಷ್ಮ ಅರಿವನ್ನು ತೋರಿಸುತ್ತಿದ್ದಾರೆ. ತತ್ಪರಿಣಾಮವಾಗಿ, ಅವರು ರಾಷ್ಟ್ರಪ್ರೇಮಕ್ಕೆ ಸಂಕೇತಗಳಾಗುತ್ತಿದ್ದಾರೆ. ಉದಾಹರಣೆಗೆ : ಬಲಪಂಥೀಯರ ಪ್ರತಿಕ್ರಾಂತಿಕಾರಿ ಚಳುವಳಿ ದೇಶಕ್ಕೊಂದು ಸಮಸ್ಯೆಯಾಗಿ, ಸವಾಲಾಗಿ ಪರಿಣಮಿಸಿದಾಗ, ಯುವಕರೇ ಅನೇಕ ಸ್ಥಳಗಳಲ್ಲಿ ಅದರ ವಿರುದ್ಧ ಹೋರಾಡಿ ಅದನ್ನು ಹಿಮ್ಮೆಟ್ಟಿಸಿದರು. ಅನೇಕ ಜನರು ಯುವಕರನ್ನು ಕೆಲವೊಮ್ಮೆ ತಪ್ಪುದಾರಿಗೆ ಎಳೆದಿದ್ದಿದೆ.

ಅಲ್ಲದೆ, ಯುವಕರನ್ನು ಬಹು ಸರಳವಾಗಿ ದುರ್ಮಾರ್ಗಕ್ಕೆಳೆಯುವ ಸಾಧ್ಯತೆಗಳಿರುತ್ತವೆ. ಹಾಗೆ ನೋಡಿದರೆ, ಹಿರಿಯರನ್ನೂ ದಾರಿ ತಪ್ಪಿಸುವ ಸಾಧ್ಯತೆಗಳು ಇಲ್ಲದಿಲ್ಲ. ನಿಜವೆಂದರೆ, ಅನೇಕ ಸ್ವಾರ್ಥ ಹಿತಾಸಕ್ತಿಗಳ ಆಗರವಾಗಿರುವ ಹಿರಿಯರೇ ಹೆಚ್ಚಾಗಿ ತಪ್ಪುದಾರಿ ತುಳಿಯುವ ಸಂಭವವಿರುತ್ತದೆ. ಸ್ಥಾಪಿತ ಹಿತಾಸಕ್ತಿಗೆ ಬಲಿಯಾಗಿರುವ ಅವರು ಯಥಾಸ್ಥಿತಿಯನ್ನು ಮುಂದುವರೆಸಿಕೊಂಡು ಹೋಗುವಲ್ಲಿ ಅವರೇ ಹೆಚ್ಚಾಗಿ ಮುಖಂಡತ್ವ ವಹಿಸುತ್ತಾರೆ. ಬದುಕಿನಲ್ಲಿ ಭದ್ರಸ್ಥಾನ ಪಡೆದವರು ಇನ್ನೂ ಹೆಚ್ಚಿನ ಭದ್ರತೆಗೆ ಹಾತೊರೆಯುವುದು ಸಹಜ. ಅಂಥವರ ಸುತ್ತ ಇಡೀ ಪ್ರಪಂಚವೇ ನೆರೆಯುತ್ತದೆ. ಆದರೆ ಈ ದೃಷ್ಟಿ ದೋಷಪೂರ್ಣವಾದದ್ದು, ಅವರ ಬುದ್ಧಿ ರಾಷ್ಟ್ರದ ಸಾಮುದಾಯಿಕ ಬುದ್ಧಿಯನ್ನು ಪ್ರತಿನಿಧಿಸುವದಿಲ್ಲ. ಯಾವುದೇ ಸಾಮೂಹಿಕ, ಸಾಮುದಾಯಿಕ ಪ್ರಜ್ಞೆ ಯುವ ಜನತೆಯಿಂದ ಹೊರಹೊಮ್ಮಲಿಲ್ಲವಾದರೆ ಅದು ರಾಷ್ಟ್ರೀಯ ಪ್ರಜ್ಞೆಯಾಗಿ ಮಾರ್ಪಡಿಸಲು ಸಾಧ್ಯವಿಲ್ಲ. ಅಂಥ ಪ್ರಜ್ಞೆ ಸಹಜವಾಗಿಯೇ ಚೈತನ್ಯ ಹೀನವಾಗಿರುತ್ತದೆ: ಅದಕ್ಕೆ ತನ್ನದೇಯಾದ ವಿಶಿಷ್ಟ ದೃಷ್ಟಿಯೂ ಇರಲಾರದು. ಮಾನ್ಯರೆ, ಈ ಎಲ್ಲ ಮಾತಿನ ಹಿನ್ನಲೆಯಲ್ಲಿ ನೋಡಿದರೆ, ಯುವಕರಿಗೆ ಮತದಾನದ ಹಕ್ಕನ್ನು ನಿರಾಕರಿಸುವದು ಸರ್ವಥಾ ಸೂಕ್ತವಲ್ಲ. ಆದ್ದರಿಂದಲೇ ಈ ನನ್ನ ಪ್ರಸ್ತಾವನೆಗಳನ್ನು ಅಂಗೀಕರಿಸಬೇಕೆಂದು ನಾನು ಪದೇ ಪದೇ ಹೇಳುತ್ತಿದ್ದೇನೆ. ಸರ್ಕಾರೇತರ ವ್ಯಕ್ತಿಯಾಗಿರುವ ನನ್ನಂಥವರಿಂದ ಮಂಡಿಸಲ್ಪಡುತ್ತಿರುವ ಸಂವಿಧಾನದ ಈ ತಿದ್ದುಪಡಿಯನ್ನು ಸರ್ಕಾರ ಅಂಗೀಕರಿಸುವುದು ಔಚಿತ್ಯಪೂರ್ಣವಾಗುತ್ತದೆ. ಹಾಗೆಂದು ಈ ತಿದ್ದುಪಡಿಯನ್ನು ಇವೊತ್ತೇ ಹಾಕಬೇಕೆಂದು ನನ್ನ ಅರ್ಥವಲ್ಲ. ಈ ಕುರಿತು ನೀವು ಈ ಚರ್ಚೆಯನ್ನು ಇನ್ನೂ ಮುಂದುವರೆಸಬಹುದು. ಸುದೀರ್ಘ ಜಿಜ್ಞಾಸೆಯ ನಂತರವೇ ನೀವು ಅದನ್ನು ಸ್ವೀಕರಿಸಬಹುದು. ಏನೇ ಇದ್ದರೂ ಮತದಾನದ ವಯಸ್ಸು ಒಂದು ಸಮಸ್ಯೆಯಾಗಿಯೇ ಇದೆ. ಆದ್ದರಿಂದಲೇ ಅದನ್ನು 18ಕ್ಕೆ ಇಳಿಸಬೇಕೆಂದು ಬಯಸಿ, ನನ್ನ ಬಯಕೆಗೆ ಬೆಂಬಲವಾಗಿ ನಾನು ಆಡಿದ ಮಾತುಗಳನ್ನೆಲ್ಲಾ ಸರ್ಕಾರ ಸಹಾನುಭೂತಿಯಿಂದ ಗಂಭೀರವಾದ ಪರಿಶೀಲನೆಗೆ ಎತ್ತಿಕೊಳ್ಳಲು ಅರ್ಹವಾಗಿವೆ ಎಂಬುದು ನನ್ನ ಅಭಿಮತ.

ಮಾನ್ಯರೆ, ಈ ವಿಷಯದ ಇನ್ನಿತರ ಆಯಾಮಗಳ ಕುರಿತು ಒಂದೆರಡು ಮಾತು ಹೇಳಬಯಸುತ್ತೇನೆ. ಶ್ರೀ ಓಂ ಮೆಹತಾ ಇಲ್ಲಿದ್ದಾರೆ. ತೌಲನಿಕವಾಗಿ ಅವರು ಒಬ್ಬ ಯುವ ವ್ಯಕ್ತಿಯಾಗಿದ್ದಾರೆ. ಅವರಿಗೆ ಜವಾಬ್ದಾರಿ ಹೊರಿಸಿದಾಗಲೆಲ್ಲ ಅವರು ಈ ಸದನದಲ್ಲಿ ಎಂದಾರೂ ಕೆಟ್ಟದ್ದಾಗಿ ನಡೆದಿಕೊಂಡಿದ್ದಾರೆಯೆ? ಅವರು ಭವಿಷ್ಯತ್ತಿನಲ್ಲಿ ಹೇಗೆ ನಡೆದುಕೊಳ್ಳುವರೋ ನನಗೆ ಗೊತ್ತಿಲ್ಲ. ಆದರೆ ನಾನು ಮಾತನಾಡುತ್ತಿರುವುದು ಅವರ ಗತದ ಬಗ್ಗೆ. ಆದ್ದರಿಂದ ಯಾವ ಯಾವ ಸಮಯದಲ್ಲಿ ನೀವು ಯುವಕರನ್ನು ಆಯ್ಕೆ ಮಾಡಿದ್ದೀರೋ, ಮಂತ್ರಿಗಿರಿಯ ಜವಾಬ್ದಾರಿ ಹೊರಿಸುವ ಸೀಮಿತ ಕೆಲಸದಲ್ಲಿ, ಅಥವಾ ಇನ್ನಿತರ ಯಾವುದೇ ರಂಗದಲ್ಲಿ ತೊಡಗಿಸಿದ್ದೀರೋ ಆವಾಗೆಲ್ಲ ನೀವು ತಪ್ಪು ಮಾಡಿಲ್ಲವೆಂದು ನನ್ನ ಅನಿಸಿಕೆ. ಈ ವಿಷಯದಲ್ಲಿ

ನಾವೇಕೆ ಭಯಪಡಬೇಕು? ಆದ್ದರಿಂದಲೇ ಮಾನ್ಯರೆ, ಈ ವಿಧೇಯಕ ತಮ್ಮ ಅಂಗೀಕಾರಕ್ಕೆ ಅರ್ಹವಾಗಿದೆ ಎಂದು ನಾನು ಹೇಳಲು ಇಚ್ಛಿಸುತ್ತೇನೆ. ಚುನಾವಣೆಯಲ್ಲಿ ತರಬೇಕಾಗಿರುವ ಬದಲಾವಣೆಯ ಬಗ್ಗೆ ನಾವು ಆಮೇಲೆ ಚರ್ಚಿಸಬಹುದು. ಆದರೆ ನಾನು ಪ್ರಸ್ತಾಪಿಸುವ ಈ ಸಂಗತಿಗಳು ಮಾತ್ರ ಅತ್ಯಂತ ನಿರ್ವಿವಾದವಾಗಿವೆ. ಈ ವಿಧೇಯಕ ಪಾಸು ಮಾಡಲು ನಮಗಿರುವ ಅಡ್ಡಿ-ಅಡಚಣೆಗಳಾವವು? ಸರ್ಕಾರವು ಅನೇಕ ಸಂಗತಿಗಳನ್ನು ಸದನದಲ್ಲಿ ಮಂಡಿಸಿ, ಆ ಕುರಿತು ನಾವು ಚರ್ಚೆ ನಡೆಸಲು, ಸೂಕ್ತ ತಿದ್ದುಪಡಿ ಸೂಚಿಸಲೂ ಸಾಕಷ್ಟು ಸಮಯಾವಕಾಶ ನೀಡದೇ ತುಂಬಾ ಅವಸರ ಅವಸರವಾಗಿ ಅವುಗಳನ್ನು ಪಾಸು ಮಾಡುವದನ್ನು ನಾವು ನೋಡಿದ್ದೇವೆ. ಹಾಗಾದರೆ, ನಮ್ಮಿಂದ ಮಂಡಿಸಲಾಗುತ್ತಿರುವ ಈ ವಿಧೇಯಕಗಳ ವಿಷಯದಲ್ಲಿ ಇಷ್ಟೇಕೆ ವಿಳಂಬವಾಗಬೇಕು? ನಾವು ಮಂಡಿಸಿರುವ ಈ ವಿಧೇಯಕವು ಇಲ್ಲಿ ಚರ್ಚೆಗೆ ಬರಲು 5 ವರ್ಷಗಳಷ್ಟು ದೀರ್ಘ ಅವಧಿ ತೆಗೆದುಕೊಂಡಿದೆ. ಇಷ್ಟಾಗಿಯೂ ಅದನ್ನು ಪಾಸುಮಾಡಲು ಇನ್ನೂ ಏಕೆ ತಡಮಾಡಬೇಕು ? ನಮ್ಮ ಯುವಕರನ್ನು ಪುನಃಶ್ಚೇತನಗೊಳಿಸಿ, ಅವರಲ್ಲಿ ನವಚೈತನ್ಯ ತುಂಬುವ ಮಾತನ್ನು ಆಡುತ್ತಲೇ ಇನ್ನೊಂದೆಡೆ 18 ವರ್ಷ ವಯಸ್ಸಿನ ಯುವಕರಿಗೆ ಮತದಾನದ ಹಕ್ಕನ್ನು ನಿರಾಕರಿಸುವಂಥ ನಮ್ಮ ದ್ವಂದ್ವ ನೀತಿಯನ್ನು ಬಿಟ್ಟು ಬಿಡಬೇಕು. ಇದು ತೀರ ಅಸಂಬದ್ಧವಾದದ್ದು. ಇದರಿಂದ ಜನತೆಯ ಸಮ್ಮುಖದಲ್ಲಿ ನಮ್ಮ ವಿಶ್ವಾಸಾರ್ಹತೆಗೆ ಚ್ಯುತಿಬರುತ್ತದೆ. ಯುವಜನರಂತೂ ನಮ್ಮ ದ್ವಂದ್ವ ನಡುವಳಿಕೆಯಿಂದ ನಮ್ಮ ಮೇಲಿನ ವಿಶ್ವಾಸ ಕಳೆದುಕೊಳ್ಳುತ್ತಾರೆ. ಅಂತಿಮವಾಗಿ, ನಾನು ಕುಳಿತುಕೊಳ್ಳುವ ಮುಂಚೆ ಈ ವಿಧೇಯಕವನ್ನು ಮಂಡಿಸುವ ವಿಷಯದಲ್ಲಿ ನಾನು ಒಂದೆರಡು ಮಾತು ಸೇರಿಸ ಬಯಸುತ್ತೇನೆ. 18 ರಿಂದ 21 ವಯಸ್ಸಿನ ಯುವಜನರನ್ನು ಒಳಗೊಂಡಂತೆ ಇಡೀ ಯುವ ಜನತೆಯ ಬಗ್ಗೆ ನನಗೆ ಹೆಮ್ಮೆಯಿದೆ. ನಮ್ಮ ಯುವಕ ಯುವತಿಯರಿಗೆ ನಾವು ಅನ್ಯಾಯವಾಗಿ ಮತದಾನದ ಹಕ್ಕನ್ನು ನಿರಾಕರಿಸುತ್ತಿದ್ದೇವೆ. ಅವರಿಗೆ ದಕ್ಕಬೇಕಾಗಿದ್ದನ್ನು ಕಸಿದುಕೊಳ್ಳುವುದು ಪ್ರಜಾತಂತ್ರ ವಿರೋಧಿಯಷ್ಟೇಯಲ್ಲ, ಅನೈತಿಕವೂ ಹೌದು. ನೈತಿಕವಾಗಿ, ರಾಜಕೀಯವಾಗಿ, ಅಷ್ಟೇ ಯಾಕೆ, ಆಧ್ಯಾತ್ಮಿಕ ಅರ್ಥದಲ್ಲಿ ಕೂಡ ನಾವು ಯುವ ಜನತೆಯ ವಿಷಯದಲ್ಲಿ ತುಂಬಾ ಗಂಭೀರವಾಗಿ ನಡೆದು ಕೊಳ್ಳಬೇಕಾಗಿದೆ. ರಾಷ್ಟ್ರದ ಮುನ್ನಡೆಗಾಗಿ, ನಮ್ಮ ಪ್ರಜಾತಾಂತ್ರಿಕ ಸಂಸ್ಥೆಗಳ ಪುನಃಶ್ಚೇತನಕ್ಕಾಗಿ, ಆ ಸಂಸ್ಥೆಗಳ ಗತಿಶೀಲತೆಯನ್ನು ತ್ವರಿತಗೊಳಿಸಿ ಒಂದು ಹೊಸ ದೃಷ್ಟಿಯನ್ನು ಕೊಡುವದಕ್ಕಾಗಿ, ನಾವು ನಮ್ಮ ಪ್ರಯತ್ನವನ್ನು ತೊಡಗಿಸಬೇಕಾಗಿದೆ. ಯುವ ಜನತೆಯ ಧೈರ್ಯ ಧೀಮಂತಿಕೆಗೆ ಚಾಲನೆ ಕೊಟ್ಟು ಅವರ ಶಕ್ತಿ ಸಾಮರ್ಥ್ಯಗಳು ಸಾಕಾರಗೊಳ್ಳುವಂತೆ ಮಾಡಲು, ಪ್ರಜಾತಾಂತ್ರಿಕ ಪ್ರಕ್ರಿಯೆಯಲ್ಲಿ ಅವರು ಸಕ್ರಿಯವಾಗಿ ಪಾಲುಗೊಳ್ಳುವಂತೆ ನಾವು ವಿಶೇಷ ಕಾಳಜಿ ವಹಿಸಬೇಕಾಗಿದೆ. ಈ ಎಲ್ಲಾ ಕಾರಣಕ್ಕಾಗಿಯೇ ನಾನು ಈ ವಿಧೇಯಕವನ್ನು ಸದನದ ಮುಂದೆ ಮಂಡಿಸಿದ್ದೇನೆ. ಸರ್ಕಾರ ಇದನ್ನು ಗಂಭೀರವಾಗಿ ಪರಿಗಣಿಸಬೇಕೆಂದು ಕೋರುತ್ತೇನೆ.

ಮಾನ್ಯರೆ, ಇದು ನನ್ನ ಕೊನೆಯ ಅವಧಿ ಬಹುಶಃ ನನ್ನ ಅವಧಿ ಮುಗಿಯುವವರೆಗೆ ಇನ್ನೊಂದು ಅಧಿವೇಶನ ನಡೆಯಬಹುದು, ಏನಿದ್ದರೂ ಈ ವಿಧೇಯಕ ಈಗ ಸ್ವೀಕರಿಸದಿದ್ದರೆ, ಅದು ಕೈತಪ್ಪಿ ಹೋಗುವುದು ಖಚಿತ. ಮಾನ್ಯರೆ, ಮುಂದೆ ಎಂದಾದರೂ ಯಾರಾದರೂ ಅದನ್ನು ಮತ್ತೆ ಕೈಗೆತ್ತಿಕೊಳ್ಳಬಹುದು. ಆದರೆ ಈಗ ಅದನ್ನು ಪಾಸುಮಾಡುವುದಕ್ಕೆ ಸಕಾಲವಾಗಿದೆ ಎಂಬುದು ನನ್ನ ನಂಬುಗೆ. ಈ ಅಧಿವೇಶನದಲ್ಲಿ ಇಲ್ಲದಿದ್ದರೂ ಮುಂದಿನ ಅಧಿವೇಶನದಲ್ಲಿ ಅಂದರೆ, ಬಜೆಟ್ ಅಧಿವೇಶನದಲ್ಲಾದರೂ ಇದನ್ನು ಅಂಗೀಕರಿಸುವ ಆಶ್ವಾಸನೆಯನ್ನು ಮಾನ್ಯ ಮಂತ್ರಿಗಳು ಈ ಸದನಕ್ಕೆ ಕೊಡಲಿ. ನಾನು ಮಂಡಿಸಲಿರುವ ಇಂಥ ತಿದ್ದುಪಡಿ ವಿಧೇಯಕ, ಅದರಲ್ಲಿಯೂ ವಿಶೇಷವಾಗಿ, ಅಧಿಕಾರೇತರ ಖಾಸಗಿ ಸದಸ್ಯನಿಂದ ಮಂಡಿಸಲ್ಪಡುತ್ತಿರುವ ಸಂವಿಧಾನದ ಈ ತಿದ್ದು ಪಡಿಯ ವಿಧೇಯಕವನ್ನು ಅಂಗೀಕರಿಸುವುದು ಸರ್ಕಾರದ ಸನ್ನಡತೆಗೆ ಸಾಕ್ಷಿಯಾಗುತ್ತದೆ. ಇದನ್ನು ಅಂಗೀಕರಿಸಿ ಸಂಸತ್ತಿನ ಎರಡೂ ಸದನಗಳಲ್ಲಿ ಪಾಸಾಗುವಂತೆ ನೋಡಿಕೊಂಡರೆ ಅದರಿಂದ ಸರ್ಕಾರಕ್ಕೆ ಶೋಭೆ ಬರುತ್ತದೆ. ಮಾನ್ಯರೆ, 18 ರಿಂದ 21 ವಯೋಮಾನದ ಯುವಕರು ಮತದಾನದ ಹಕ್ಕು ಪಡೆಯಲು ಸರ್ವಥಾ ಸಮರ್ಥರಾಗಿದ್ದಾರೆ. ನಾವು ಅದನ್ನು ಅವರಿಗೆ ಕೊಡಲೇಬೇಕು. ಈ ವಿಷಯದಲ್ಲಿ ಸರಕಾರ ಗೊಣಗುಟ್ಟದೆ ತನ್ನ ಶಿಫಾರಸ್ಸಿನೊಂದಿಗೆ ಮುಂದೆ ಬಂದು, ಈ ಸದನ ಅದನ್ನು ಅಂಗೀಕರಿಸುವಂತೆ ಕ್ರಮಕೈಗೊಳ್ಳುವುದು ಸೂಕ್ತ ಇದೇನೇ ಇದ್ದರೂ, ಈ ಕುರಿತು, ಸಾಕಷ್ಟು ಚರ್ಚೆನಡೆದು ಎಲ್ಲರೂ ತಮ್ಮ ತಮ್ಮ ಅಭಿಪ್ರಾಯ ಮಂಡಿಸುವಂತಾಗಬೇಕೆಂಬುದು ನನ್ನ ಅಭಿಲಾಷೆ. ನಾನು ಮಾತನಾಡುತ್ತಿರುವುದು ಕೇವಲ ಯುವ ಪೀಳಿಗೆಯ ಪರವಾಗಿ ಅಷ್ಟೇ ಅಲ್ಲ, ಪ್ರಜಾಪ್ರಭುತ್ವ ಮತ್ತು ಪ್ರಗತಿಯನ್ನು ಪ್ರತಿನಿಧಿಸುವ ದೇಶದ ಸಮಸ್ತ ಜನಸ್ತೋಮದ ಪರವಾಗಿ ಮಾತಾಡುತ್ತಿದ್ದೇನೆ ಎಂಬುದು ನನ್ನ ಭಾವನೆ.

## 11. ಸಂಸದೀಯ ಸಮಿತಿಗಳು *

ಮಾನ್ಯರೆ,

"ಭಾರತದ ಸಂವಿಧಾನದ ತಿದ್ದುಪಡಿಗೆ ಮಂಡಿಸಲಾದ ಈ ವಿಧೇಯಕವನ್ನು ಪರಿಶೀಲನೆಗೆ ತೆಗೆದುಕೊಳ್ಳಬೇಕೆಂದು", ನಾನು ಕೋರುತ್ತೇನೆ.

ವಾಸ್ತವಿಕವಾಗಿ ನಾನು ಈ ವಿಧೇಯಕವನ್ನು ಮಂಡಿಸಿದ್ದು 1976ರಲ್ಲಿ, ಈಗ ನಾವು 78ರಲ್ಲಿದ್ದೇವೆ. ಖಾಸಗಿ ಸದಸ್ಯರ ವಿಧೇಯಕಗಳ ಹಣೆಬರಹವೇ ಹೀಗಿದೆ. ಇನ್ನಿತರ ವಿಧೇಯಕಗಳಿಗೂ ಇಂಥದ್ದೇ ಗತಿ ಕಾದಿದೆ. ನಾನು ಮಂಡಿಸಿದ ವಿಧೇಯಕ ಇಂದಿನ ಸ್ಥಿತಿಗೆ ತಲುಪಲು ಎರಡು ವರ್ಷ ತೆಗೆದುಕೊಂಡಿತು. ಈಗ ಅದನ್ನು ಪರಿಗಣಿಸಬೇಕೆಂದು ನಾನು ಕೇಳುತ್ತಿದ್ದೇನೆ. ನನ್ನ ದೃಷ್ಟಿಯಲ್ಲಿ ಈ ವಿಧೇಯಕ ತುಂಬಾ ಮಹತ್ವದ್ದಾಗಿದೆ. ನಮ್ಮ ಸಂಸದೀಯ ಸಂಸ್ಥೆ ಕಾರ್ಯ ಮಾಡುವ ದೃಷ್ಟಿಯಿಂದ ಈ ವಿಧೇಯಕಕ್ಕೆ ಬಹಳ ಮಹತ್ವವಿದೆ. ನಮ್ಮ ಸಂವಿಧಾನದಲ್ಲಿ ಎದ್ದುಕಾಣುವ ಒಂದು ಮಹತ್ವದ ತೆರವನ್ನು ಈ ವಿಧೇಯಕ ತುಂಬ ಬಯಸುತ್ತದೆ. ರಾಜ್ಯಗಳ ಶಾಸನ ಸಭೆಯ ಮಟ್ಟದಲ್ಲಾಗಲಿ, ಕೇಂದ್ರದ ಸಂಸತ್ತಿನ ಮಟ್ಟದಲ್ಲಿಯಾಗಲಿ, ನಾವು ಸ್ಥಾಯೀ ಸಮಿತಿಗಳೆಂದು ಕರೆಯುವ ಯಾವುದೇ ಸಮಿತಿಗಳು ನಮ್ಮ ದೇಶದಲ್ಲಿ ಅಸ್ತಿತ್ವದಲ್ಲಿಲ್ಲ ಎಂಬುದು ತಮಗೆ ಗೊತ್ತಿದೆ. ನಾನು ಇಂಥ ಸ್ಥಾಯಿ ಸಮಿತಿಗಳಿಗೆ ಸಂಸತ್ತಿನ ಎರಡೂ ಸದನದಲ್ಲಿ, ಮತ್ತು ರಾಜ್ಯಮಟ್ಟದ ಎರಡೂ ಶಾಸನ ಸಭೆಗಳಲ್ಲಿ ಅವಕಾಶ ಮಾಡಿಕೊಡುವ ಉದ್ದೇಶದಿಂದ ಈ ವಿಧೇಯಕವನ್ನು ಮಂಡಿಸುತ್ತಿದ್ದೇನೆ.

ಮಾನ್ಯರೆ, ನಮ್ಮ ಸಂವಿಧಾನ ಜಾರಿಗೆ ಬಂದು ಲೋಕಸಭೆ ತನ್ನ ಕಾರ್ಯಾರಂಭ ಮಾಡಿದಾಗ ಅಂದರೆ, ನಮ್ಮ ಪ್ರಜಾತಾಂತ್ರಿಕ ಸಂಸತ್ತು ಅಸ್ತಿತ್ವಕ್ಕೆ ಬಂದು ತನ್ನ ಬದುಕನ್ನು ಆರಂಭಿಸಿದಾಗ, ಇಂಥ ಸ್ಥಾಯಿ ಸಮಿತಿಯ ವಿಷಯ ಕುರಿತು ಸಂಸತ್ತಿನಲ್ಲಿ ಪ್ರಗಾಢವಾದ ಚರ್ಚೆ ಜಿಜ್ಞಾಸೆ ನಡೆಯಿತೆಂಬುವುದು ಮಾನ್ಯ ಸದಸ್ಯರಿಗೆ ಗೊತ್ತಿರುವ ಸಂಗತಿ. ಅಂದಿನ ಸಂಸತ್ತಿನ ಸದಸ್ಯರು, ವಿವಿಧ ಪಕ್ಷಗಳ ಮುಖಂಡರು ಮತ್ತು ಸರಕಾರದ ಮಧ್ಯ ಈ ಕುರಿತು ಸಾಕಷ್ಟು ವಾದ ವಿವಾದ ನಡೆಯಿತು. ನಾವು ನಮ್ಮ ವತಿಯಿಂದ ಒಂದು ಬಲವತ್ತರವಾದ ಸಲಹೆ ಮಾಡಿದ್ದೆವು. ಆ ಸಲಹೆಗೆ ನಾನೂ ಭಾಗಿಯಾಗಿದ್ದೆ. ಆಗ ಸಂಸತ್ತಿನ ಎರಡೂ ಸದನಗಳಲ್ಲಿ ನಮ್ಮ ಪಕ್ಷವೇ ಪ್ರಮುಖ ವಿರೋಧ ಪಕ್ಷವಾಗಿತ್ತು. ಉಳಿದೆಲ್ಲ ವಿರೋಧ ಪಕ್ಷಗಳು ನಮ್ಮ ಬೆಂಬಲಕ್ಕೆ ನಿಂತಿದ್ದವು. ನನ್ನ ನೆನಪು ಸರಿಯಿರುವುದಾದರೆ, ಸಂಸತ್ತಿನ ಎರಡೂ ಸದನಗಳಲ್ಲಿ ಸ್ಥಾಯಿ ಸಮಿತಿಗಳಿರಬೇಕೆಂದು ನಾವು ಸಲಹೆ ಮಾಡಿದ್ದೆವು. ಮಾನ್ಯರೇ,

---

* ಸಂವಿಧಾನ ತಿದ್ದುಪಡಿ ವಿಧೇಯಕದ ಮೇಲಿನ ಚರ್ಚೆಯಿಂದ, 1976 ರಾಜ್ಯ ಸಭೆ, 5 ಮೇ 1976 ಸಿ.ಸಿ. 177-193

ನಮ್ಮ ಸಲಹೆ ಸ್ವೀಕರಿಸಲ್ಪಡಲಿಲ್ಲ. ಅದಕ್ಕೆ ಬದಲಾಗಿ, ಹಿಂದೆ ನಾವು ಅನೌಪಚಾರಿಕ ಸಲಹಾ ಸಮಿತಿಗಳೆಂದು ಕರೆಯುತ್ತಿದ್ದ ಸಮಿತಿಗಳು ಅಸ್ತಿತ್ವಕ್ಕೆ ಬಂದವು. ಈಗ 'ಅನೌಪಚಾರಿಕ' ಶಬ್ದವೂ ಮಾಯವಾಗಿದೆ. ಅವುಗಳನ್ನು ನಾವು ಈಗ ವಿವಿಧ ಮಂತ್ರಾಲಯಗಳ ಸಲಹಾ ಸಮಿತಿಗಳೆಂದು ಕರೆಯುತ್ತಿದ್ದೇವೆ.

ಆದರೆ ವಾಸ್ತವವಾಗಿ, ಈ ಸಮಿತಿಗಳು ಅನೌಪಚಾರಿಕವಾಗಿಯೇ ಇವೆ. ಅವುಗಳಿಗೆ ಯಾವುದೇ ಸ್ಥಾನಮಾನಗಳಿಲ್ಲ. ಸಂವಿಧಾನದಲ್ಲಾಗಲಿ ಕಾಯ್ದೆಯಲ್ಲಾಗಲೀ, ಅವು ಒಂದು ವಿವಿಧ ಅನುಕೂಲಕ್ಕಾಗಿ ಸಂಬಂಧಪಟ್ಟ ಮಂತ್ರಿಗಳು ಮತ್ತು ಸಂಸತ್ ಸದಸ್ಯರ ನಡುವೆ ಮಾಡಿಕೊಂಡ ವ್ಯವಸ್ಥೆಗಳಾಗಿವೆ. ಸರಕಾರ ಇಂಥ ಸಮಿತಿಗಳ ಸಭೆ ಕರೆಯಬಹುದು, ಕರೆಯದೆಯೂ ಇರಬಹುದು. ಈ ಎಲ್ಲಾ ಸಮಿತಿಗಳಿಗೆ ಯಾವುದೇ ಕಾಯ್ದೆಬದ್ಧಸ್ಥಾನ - ಮಾನವಿಲ್ಲ. ಅವುಗಳಿಗಿರುವ ಒಂದೇ ಒಂದು ಹಕ್ಕು ಯೆಂದರೆ, ಅವು ಸಲಹೆ ನೀಡಬಹುದು, ಆದರೆ ಇಂಥ ಸಲಹಾ ಸಮಿತಿಗಳಲ್ಲದೆಯೂ ಸಂಸತ್ ಸದಸ್ಯರು ನೇರವಾಗಿ ಯಾವುದೇ ಸಲಹೆ ನೀಡಬಹುದಾಗಿದೆ. ಆದ್ದರಿಂದ ಅವುಗಳಿಗೆ ಯಾವುದೇ ಕಾಯ್ದೆಬದ್ಧ ಸ್ಥಾನಮಾನ ವಿಲ್ಲವೆಂಬುವುದು ಸುಸ್ಪಷ್ಟವಾಗಿದೆ. ಈ ಸಮಿತಿಗಳು, ನಾನು ಸದರಿ ವಿಧೇಯಕದಲ್ಲಿ ಪ್ರಸ್ತಾಪಿಸಿರುವ ಸ್ಥಾಯೀ ಸಮಿತಿಗಳಿಗೆ ಬದಲಿ ವ್ಯವಸ್ಥೆಯಲ್ಲ ಎಂಬುದನ್ನು ನಾನು ಸ್ಪಷ್ಟಪಡಿಸಬಯಸುತ್ತೇನೆ. ಕೆಲವು ಬೇರೆ ದೇಶಗಳ ಪ್ರಜಾತಾಂತ್ರಿಕ ಸಂಸದೀಯ ವ್ಯವಸ್ಥೆಯಲ್ಲಿ ಕಂಡುಬರುವಂತೆ, ಈ ಸಲಹಾ ಸಮಿತಿಗಳು ಸ್ಥಾಯೀಸಮಿತಿಗಳ ಸ್ಥಾನ ತುಂಬಲು ಸಾಧ್ಯವಿಲ್ಲ. ಈ ಸಲಹೆಯನ್ನು ನಾನೇಕೆ ಮಂಡಿಸುತ್ತೇನೆ ಎಂಬುದನ್ನು ಸ್ಪಷ್ಟಪಡಿಸುವುದು ನನ್ನ ಕರ್ತವ್ಯವಾಗಿದೆ.

ಮಾನ್ಯರೆ, ನಾನು ಈ ಸಲಹೆಯನ್ನು ನಿಮ್ಮ ಮುಂದಿಡಲು ಬಲವಾದ ಕಾರಣವೆಂದರೆ, ನಮ್ಮ ಸಂಸದೀಯ ಸಂಸ್ಥೆ ಮತ್ತು ಆಡಳಿತ ವ್ಯವಸ್ಥೆಯ ನಡುವೆ ಒಂದು ಮಹತ್ವದ ಬಿರುಕು ಇದೆ. ನೌಕರಶಾಹಿ, ಅಧಿಕಾರಶಾಹಿ, ಖಾಯಂ ಆಡಳಿತ ವ್ಯವಸ್ಥೆ, ಸಾರ್ವಜನಿಕ ಸೇವಾ ಜಾಲ, ಎಂದು ಮುಂತಾಗಿ ಕರೆಯಲ್ಪಡುವ ವ್ಯವಸ್ಥೆಯು ಪಾರ್ಲಿಮೆಂಟ್ ಮೂಲಕ ಸಂಬಂಧಪಟ್ಟ ಮಂತ್ರಿಗಳಿಗೆ ಜವಾಬ್ದಾರವಾಗಿರುತ್ತದೆ. ಇನ್ನು ನಮಗೆ ಉಳಿದಿರುವುದೆಂದರೆ, ಕೆಲವು ಪ್ರಶ್ನೆ ಕೇಳುವ ಹಕ್ಕು! ಸಂಸತ್ತಿನ ಅಧಿವೇಶನದಲ್ಲಿ ಕೆಲವು ವಿಷಯಗಳನೆತ್ತಿ ಚರ್ಚಿಸುವ ಹಕ್ಕು! ಸಂಬಂಧಪಟ್ಟ ಮಂತ್ರಿಗಳು ಆ ಚರ್ಚೆಗೆ ಸಂಬಂಧಿಸಿದ ವಿಷಯಗಳನ್ನು ಕ್ರೋಢೀಕರಿಸಿ ವಿವರಿಸುತ್ತಾರೆ. ಇದರಿಂದ ಯಾವುದೇ ಹೆಚ್ಚಿನ ಪ್ರಯೋಜನವಿಲ್ಲ. ಸಂಸತ್ತಿನ ಎರಡೂ ಸದನಗಳಲ್ಲಾಗಲಿ, ರಾಜ್ಯಗಳ ಶಾಸನ ಸಭೆಗಳಲ್ಲಾಗಲಿ, ಆಡಳಿತ ವ್ಯವಸ್ಥೆಯ ಮೇಲೆ ನೇರವಾದ ನಿಯಂತ್ರಣ ಹೊಂದುವುದು ಅಥವಾ ಮೇಲ್ವಿಚಾರಣೆ ನಡೆಸುವುದು ಸಾಧ್ಯವಿಲ್ಲ. ಹೀಗಾಗಿ ನೌಕರಶಾಹಿಯು ಉಚ್ಛೃಂಖಲತೆಯಿಂದ ನಡೆದುಕೊಳ್ಳುವ ಪ್ರಮೇಯವೆ ಹೆಚ್ಚು. ಅಧಿಕಾರ

ಶಾಹಿಯನ್ನು ನಿಯಂತ್ರಿಸುವ ಯಾವುದೇ ವಿಶೇಷ ವ್ಯವಸ್ಥೆ ಈಗ ಅಸ್ತಿತ್ವದಲ್ಲಿಲ್ಲ. ಇದರ ಪರಿಣಾಮವಾಗಿ ಆಡಳಿತದಲ್ಲಿ ಗಂಭೀರ ನ್ಯೂನತೆಗಳು ಕಂಡು ಬರುತ್ತಿವೆ. ಕೆಲವು ಸಲ ಈ ವಿಶೇಷ ವ್ಯವಸ್ಥೆಯ ಅಭಾವವು ಇಡಿ ಆಡಳಿತದ ಮೇಲೆ ವಿನಾಶಕಾರಿ ಪ್ರಭಾವ ಬೀರುತ್ತದೆ. ಸಂಸದೀಯ ಸಂಸ್ಥೆಗಳು ಮತ್ತು ಆಡಳಿತ ವ್ಯವಸ್ಥೆಯ ನಡುವೆ ಒಂದು ದೊಡ್ಡ ಕಂದರ ಬೆಳದುನಿಂತಿದೆ. ಅವರೆಡರ ನಡುವೆ ಮಂತ್ರಿಗಳ ಸಂಬಂಧವೂ ಅಷ್ಟು ಅರ್ಥಪೂರ್ಣವಾಗಿಲ್ಲ. ಹೆಚ್ಚು ಕಡಿಮೆ ಅದು ಹೆಸರಿಗೆ ಮಾತ್ರ ಕೆಲಸಮಾಡುತ್ತಿದೆ. ಇದನ್ನು ನಾವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕಾಗಿದೆ. ಮಾನ್ಯರೆ, ನೌಕರಶಾಹಿಯ ಮೇಲೆ ಸಂಸದೀಯ ಸಂಸ್ಥೆಗಳು ಪರಿಣಾಮಕಾರಿಯಾದ ನಿಯಂತ್ರಣ ಹೊಂದಬೇಕಾಗಿರುವುದು ಅತ್ಯಂತ ಅವಶ್ಯಕ. ಶಾಸಕರಾಗಿರಲಿ, ಸಂಸದರಾಗಲಿ, ಇಂಥ ಅಧಿಕಾರಶಾಹಿಯ ಮೇಲೆ ನೇರ ನಿಯಂತ್ರಣ ಹೊಂದಬೇಕಾಗಿರುವುದು ಅತ್ಯಂತ ಅವಶ್ಯಕ. ಶಾಸಕರಾಗಲಿ, ಸಂಸದರಾಗಲಿ, ಇಂಥ ಅಧಿಕಾರಿಶಾಹಿಯ ಮೇಲೆ ನೇರ ನಿಯಂತ್ರಣ ಸಾಧಿಸುವುದು ತುಂಬ ಜರೂರಿನದ್ದಾಗಿದೆ. ಆದ್ದರಿಂದಲೇ ಇಂಥ ವ್ಯವಸ್ಥೆಯನ್ನು ನಿರ್ಮಿಸಲು ಬೇಕಾಗಿರುವ ಅವಕಾಶ ಕುರಿತು ನಾನು ಕೆಲವು ಸಲಹೆಗಳನ್ನು ನೀಡಬಯಸುತ್ತೇನೆ. ಸಂವಿಧಾನದಲ್ಲಿ ಒಮ್ಮೆ ಇಂಥ ಅವಕಾಶ ಕಲ್ಪಿಸಿದರೆ ಸಾಕು, ಎಲ್ಲವೂ ತನ್ನಷ್ಟಕ್ಕೆತಾನೇ ಸುಸೂತ್ರವಾಗಿ ನಡೆಯುವುದು. ಸಂಸತ್ತು ಆ ಕುರಿತು ಸೂಕ್ತ ಕ್ರಮ ಕೈಗೊಳ್ಳುವುದು ಸಾಧ್ಯವಾಗುತ್ತದೆ. ಮೊದಲನೆಯದಾಗಿ, ಸಂವಿಧಾನಾತ್ಮಕವಾಗಿ ಸ್ಥಾಪಿಸಲ್ಪಡುವ ಸಮಿತಿಗಳಿಗೆ ಕಾಯ್ದೆಬದ್ಧ ಸ್ಥಾನಮಾನ ದೊರಕುವುದು. ಮೇಲಾಗಿ ಇಂಥ ಸಮಿತಿ, ನಿಕಾಯಗಳ ಮೂಲಕವೇ ಸಂಸತ್ತು ತನ್ನ ಕಾರ್ಯ ಜರುಗಿಸುವುದು.

ಆದರೆ, ಈಗ ಆಗುತ್ತಿರುವದೇನು? ವರ್ಷಕ್ಕೆ 5 ತಿಂಗಳು ನಾವಿಲ್ಲಿ ಸಭೆ ಸೇರುತ್ತೇವೆ. ಲೋಕಸಭೆಯ ವಿಷಯದಲ್ಲಾದರೋ, ಈ ಅವಧಿ ವರ್ಷಕ್ಕೆ 7 ತಿಂಗಳು. ಇನ್ನು, ರಾಜ್ಯಗಳ ಶಾಸನ ಸಭೆಯಲ್ಲಿ ಈ ಅವಧಿ ಇನ್ನೂ ಕಡಿಮೆ. ಒಟ್ಟಾರೆಯಾಗಿ ನಾವು ಮಾಡುವದೆಂದರೆ ಕೆಲವು ಪ್ರಶ್ನೆ ಕೇಳಿ ಅವುಗಳಿಗೆ ಉತ್ತರ ಪಡೆಯಬಹುದು ಅಷ್ಟೇ. ಕೆಲವು ಸಮಸ್ಯೆಗಳನ್ನು ಎತ್ತುತ್ತೇವೆ. ಅದರಿಂದ ಆಗುವ ಪರಿಣಾಮವೂ ಅಷ್ಟಕಷ್ಟೇ. ಆದರೆ ಆಯಿತು, ಇಲ್ಲದಿದ್ದರೆ ಇಲ್ಲ. ಅಲ್ಲಿಗೇ ಎಲ್ಲವೂ ಮುಕ್ತಾಯ! ಸಲಹಾ ಸಮಿತಿಗಳು ಹೆಚ್ಚು ಕಡಿಮೆ ನಿಯಮಿತವಾಗಿ ಸಭೆ ಸೇರುತ್ತವೆ. ಅವುಗಳಲ್ಲಿ ಕೆಲವು ಅಧಿವೇಶನದ ಸಂದರ್ಭದಲ್ಲಿ ಒಮ್ಮೆ ಮತ್ತು ಅಧಿವೇಶನದ ಮಧ್ಯಂತರದಲ್ಲಿ ಇನ್ನೊಮ್ಮೆ. ಇಷ್ಟಾದರೆ ಮುಗಿಯಿತು. ಸಂಸತ್ ಸದಸ್ಯರು ಮತ್ತು ಉನ್ನತ ಸದಸ್ಯರು ಮತ್ತು ಉನ್ನತ ಅಧಿಕಾರಿಗಳ ನಡುವೆ ಯಾವುದೇ ರೀತಿಯ ಸಂಬಂಧವಿರುವುದಿಲ್ಲ.

ಆದರೆ ಸ್ಥಾಯಿ ಸಮಿತಿಯಲ್ಲಿ ಕನಿಷ್ಟ ಸಂಬಂಧಗಳಿಗೆ ಅವಕಾಶವಿರುತ್ತದೆ. ಉನ್ನತಾಧಿಕಾರಿಗಳು ಸ್ಥಾಯಿ ಸಮಿತಿಗಳಿಗೆ ಹಾಜರಾಗುವುದರಿಂದ ಅಲ್ಲಿ ಅವರಿಗೆ ಪ್ರಶ್ನೆಗಳನ್ನು

ಕೇಳಲಾಗುತ್ತದೆ. ಅವರು ಕೈಗೊಳ್ಳುವ ಕ್ರಮಗಳ ಮೇಲೆ ನೇರವಾದ ಮೇಲ್ವಿಚಾರಣೆ ಮತ್ತು ಪರಿಶೀಲನೆ ಸಾಧ್ಯವಾಗುತ್ತದೆ. ಸಂಬಂಧಪಟ್ಟ ಸ್ಥಾಯಿ ಸಮಿತಿಯು ಆಡಳಿತದ ವ್ಯವಹಾರ ಸುಗಮವಾಗಿ ಸಾಗುವಂತೆ ನೋಡಿಕೊಳ್ಳುತ್ತದೆ. ಹೀಗಾಗಿ ಸಂಸತ್ತು ಮತ್ತು ಅಧಿಕಾರಿಯ ನಡುವೆ ದೈನಂದಿನ ಸಂಬಂಧ ಸ್ಥಾಪಿತವಾಗುತ್ತದೆ. ಅಧಿವೇಶನ ನಡೆಯದೆ ಇದ್ದಾಗ ಈ ಸ್ಥಾಯಿ ಸಮಿತಿಗಳು ಪುಟ್ಟಪುಟ್ಟ ಸಂಸತ್ತಿನಂತೆ ಕೆಲಸ ನಿರ್ವಹಿಸುತ್ತವೆ. ವ್ಯವಹಾರಿಕವಾಗಿ ಇದು ತುಂಬಾ ಅನುಕೂಲಕರವಾಗಿ ಪರಿಣಮಿಸುತ್ತದೆ. ಯಾಕೆಂದರೆ, ಆಡಳಿತದ ಮೇಲೆ ನೇರ ಹತೋಟಿ ಇರುವುದರಿಂದ ಅದನ್ನು ಸೂಕ್ತ ರೀತಿಯಲ್ಲಿ ನಿರ್ದೇಶಿಸುವ ಕಾರ್ಯ ಸುಗಮಗೊಳ್ಳುತ್ತದೆ. ಸಾರ್ವಜನಿಕರ ಅಭಿಪ್ರಾಯದ, ಅನುಭವದ ಪರಿಣಾಮ ಅಷ್ಟೇಯಲ್ಲ, ಸಂಸತ್ತಿನ ಸಾಮೂಹಿಕ ಅರಿವಿನ ಪರಿಣಾಮ ದಿನಂಪ್ರತಿಯೂ ಆಡಳಿತದ ಮೇಲೆ ಉಂಟಾಗುವುದನ್ನು ಕಾಣಬಹುದು.

ಮಾನ್ಯರೆ, ಈ ದೃಷ್ಟಿಯಿಂದಲೇ, ನಾನು ನನ್ನ ಸಲಹೆಗಳನ್ನು ಮಂಡಿಸಿದ್ದೇನೆ.

ಕಳೆದ ಹಲವಾರು ವರ್ಷಗಳ ಅವಧಿಯಲ್ಲಿ ನಾನು ಕಾಣುತ್ತಿರುವುದೇನು? ನೌಕರಶಾಹಿ ದಿನದಿಂದ ದಿನಕ್ಕೆ ಬಲಿಷ್ಠವಾಗುತ್ತಿದೆ. ನಾನು ಸಣ್ಣ ಪುಟ್ಟ ನೌಕರರ ವಿಷಯದಲ್ಲಿ ಈ ಮಾತನ್ನು ಹೇಳುತ್ತಿಲ್ಲ. ಬದಲಾಗಿ ಉನ್ನತ ಸ್ಥಾನದಲ್ಲಿರುವ ಕಾರ್ಯದರ್ಶಿಗಳು, ಹೆಚ್ಚುವರಿ ಕಾರ್ಯದರ್ಶಿಗಳು, ಜಂಟಿ ಕಾರ್ಯದರ್ಶಿಗಳು, ಮತ್ತು ಕೆಲವು ಸಲ ಉಪ ಕಾರ್ಯದರ್ಶಿಗಳು, ಮುಂತಾದವರ ವಿಷಯದಲ್ಲಿ ನನ್ನ ಮಾತಿನ ಅರ್ಥ ಪರಿಭಾವಿಸಬೇಕು. ಅಂತೆಯೇ ನಿರ್ದೇಶಕರು, ಉಪ ನಿರ್ದೇಶಕರು ಮತ್ತು ಇಂಥ ಇನ್ನಿತರ ಅಧಿಕಾರಿಗಳು ದಿನದಿಂದ ದಿನಕ್ಕೆ ತಮ್ಮ ಶಕ್ತಿ ಸಂಚಯಿಸಿಕೊಳ್ಳುತ್ತಿದ್ದಾರೆ. ಅವರ ಕೈಯಲ್ಲಿ ಹೆಚ್ಚು ಹೆಚ್ಚು ಅಧಿಕಾರ ಕೇಂದ್ರೀಕೃತವಾಗುತ್ತಿರುವುದು ಸ್ಪಷ್ಟವಾಗಿ ಕಾಣಿಸುತ್ತಿದೆ. ಅಧಿಕಾರದ ತುತ್ತ ತುದಿಯಲ್ಲಿರುವ ಇಂಥ ಜನ ವಿಭಾಗವು ಜನ ಸಾಮಾನ್ಯರಿಂದ ಪರಭಾರೆಯಾಗುತ್ತಿದೆ. ಅಷ್ಟೇ ಯಾಕೆ? ಜನಪ್ರತಿನಿಧಿಗಳಿಂದಲೂ ಇಂಥ ಅಧಿಕಾರಿಗಳು ದೂರಾಗುತ್ತಿರುವುದರಿಂದ ಅವರು ಸಂಸತ್ತು, ಶಾಸನ ಸಭೆಗಳಲ್ಲಿ ಬಂದು ಗ್ಯಾಲರಿಯಲ್ಲಿ ಕುಳಿತುಕೊಂಡು, ನಾವು ಆಡುವ ಮಾತನ್ನು ಕೇಳಿಸಿಕೊಳ್ಳುತ್ತಾರೆಯೇ ವಿನಃ ನಮ್ಮ ಮಾತಿನ ಹಿಂದಿರುವ ಕಾಳಜಿಗೆ ಅವರು ಸ್ಪಂದಿಸುವದಿಲ್ಲ. ಹೀಗಾಗಿ ಅವರು ಅನೇಕ ವಿಷಯಗಳಲ್ಲಿ ತಮ್ಮದ್ದೇ ಆದ ನಿರ್ಣಯಕ್ಕೆ ಬರುತ್ತಾರೆ. ಯಾವುದೇ ಒಂದು ಪರಿಸ್ಥಿತಿ ನಿಭಾಯಿಸುವ ಈ ವಿಧಾನ ತುಂಬಾ ಔಪಚಾರಿಕವಾಗಿ ಪರಿಣಮಿಸುತ್ತದೆ.

ಈ ಉನ್ನತ ಅಧಿಕಾರಿಗಳು ಸಣ್ಣ ಸಮಿತಿಗಳಲ್ಲಿರುವುದಿಲ್ಲವಾದ್ದರಿಂದ ಅವರೊಂದಿಗೆ ನೇರ ವಿಚಾರ ವಿನಿಮಯ ಸಾಧ್ಯವಾಗುವುದಿಲ್ಲ. ಸಂಸತ್ತಿನ ಸದಸ್ಯರು ಅವರಿಗೆ ಏನಾದರು ಹೇಳುವುದಾಗಲಿ, ಅವರಿಂದ ಏನಾದರೂ ಕೇಳುವದಾಗಲಿ ಸಾಧ್ಯವಾಗುವುದಿಲ್ಲ. ಸಾಮಾನ್ಯವಾಗಿ ಸಂವಹನದ ದಾರಿ ದ್ವಿಮುಖವಾದದ್ದು. ಆದರೆ ಇಲ್ಲಿ ಅದು ಹಾಗೇಇಲ್ಲ.

ಅಧಿಕಾರಿಗಳು ಇಲ್ಲಿ ನಿಷ್ಕ್ರಿಯ ಪ್ರೇಕ್ಷಕರಾಗಿಯೋ ಶ್ರೋತೃಗಳಾಗಿಯೋ ಗ್ಯಾಲರಿಗಳಲ್ಲಿ ಕುಳಿತುಕೊಳ್ಳುತ್ತಾರೆ. ಈ ಪರಿಸ್ಥಿತಿ ಬದಲಾಗಬೇಕೆಂಬುದು ನಮ್ಮ ಬಯಕೆ. ಅವರು - ನಾವು ನೇರವಾಗಿ ಕುಳಿತು ಒಟ್ಟಿಗೆ ಮಾತಾಡುವ ಅವಕಾಶ ದೊರೆಯಬೇಕು. ಆಡಳಿತದ ರೀತಿ-ನೀತಿಗಳ ಸ್ವರೂಪ ನಮಗೆ ತಿಳಿಯುವಂತಾಗಬೇಕು. ಅವರ ಕಾರ್ಯವೈಖರಿಯ ಮೇಲ್ವಿಚಾರಣೆ ನಡೆಸಲು ಮತ್ತು ಕಾರ್ಯಾಂಗದ ಮೇಲೆ, ಸಂಸತ್ತಿನ ಮೇಲ್ಮೆಯನ್ನು ಸ್ಥಾಪಿಸಲು ಇದು ಅತ್ಯಂತ ಅವಶ್ಯಕವಾಗಿದೆ. ನಾವು ಸಂಸತ್ತಿನ ಸರ್ವೋಚ್ಚ ಶ್ರೇಷ್ಠತೆಯ ಬಗ್ಗೆ ಮಾತಾಡುತ್ತೇವೆ. ಆದರೆ ನಾವು ಯಾವ ಕ್ಷೇತ್ರದಲ್ಲಿ ಸರ್ವೋಚ್ಚರಾಗಿದ್ದೇವೆ? ನಾವು ಕಾಯ್ದೆಯಲ್ಲಿ ಸರ್ವೋಚ್ಚರು; ಕೆಲಮಟ್ಟಿಗೆ ಸಂವಿಧಾನದಲ್ಲಿ ಸರ್ವೋಚ್ಚರು, ಆದರೆ ವಾಸ್ತವಿಕವಾಗಿ ದೈನಂದಿನ ಆಡಳಿತ ನಿರ್ವಹಣೆಗೆ ಬಂದರೆ, ಅಧಿಕಾರದ ಸರ್ವೋಚ್ಚತೆಯು ನೌಕರಶಾಹಿಯ ಕೈಯಲ್ಲಿಯೇ ಕೇಂದ್ರಿಕೃತವಾಗಿರುವುದು ಕಂಡುಬರುತ್ತದೆ. ಕಾಯ್ದೆಯ ಕಣ್ಣಲ್ಲೇನೋ ನಾವು ಸರ್ವೋಚ್ಚರು, ಆದರೆ ವಾಸ್ತವ ಬದುಕಿನಲ್ಲಿ ಅಲ್ಲ. ಸಂಸತ್ತು ರೂಪಿಸುವ ಧೋರಣೆಗಳ ಜಾರಿಯ ಸಮಯದಲ್ಲಿ ನಾವು ಸರ್ವೋಚ್ಚರಾಗಿ ಉಳಿಯುವದಿಲ್ಲ. ಯಾಕೆಂದರೆ, ನೌಕರಶಾಹಿಯ ಮೇಲೆ ನಮಗೆ ಯಾವುದೇ ನಿಯಂತ್ರಣವಿರುವದಿಲ್ಲ. ಹಾಗಾಗಿ ಇಡೀ ವ್ಯವಸ್ಥೆಯಲ್ಲಿ ಅತ್ಯಂತ ಗಂಭೀರವಾದ ಬಿರುಕು ಕಾಣಿಸುತ್ತದೆ. ತತ್ಪರಿಣಾಮವಾಗಿ ಒಂದು ವಿಧದ ನೌಕರಶಾಹಿ ಪ್ರಕ್ರಿಯೆ ಆರಂಭವಾಗುತ್ತದೆ. ಸದ್ಯದ ವ್ಯವಸ್ಥೆಯ ಅತ್ಯಂತ ಕೆಟ್ಟರೂಪವಾಗಿದ್ದ ತುರ್ತು ಪರಿಸ್ಥಿತಿಯಲ್ಲಿ ಏನಾಗಿತ್ತು ಎಂಬುದನ್ನು ನಾವು ನೋಡಿದ್ದೇವೆ.

ಸಂವಿಧಾನವನ್ನು ತಿದ್ದಿ ಸ್ಥಾಯಿ ಸಮಿತಿಗಳನ್ನು ನಿರ್ಮಿಸಲು ಅವಕಾಶ ಕಲ್ಪಿಸಿಕೊಂಡು ನೌಕರಶಾಹಿಯ ಮೇಲೆ ನೇರ ಹತೋಟಿ ಹೊಂದಲು ನಮಗಿರುವ ಅಡ್ಡಿ ಅಡಚಣೆಗಳಾವುವು? ನಾವು ನಮ್ಮ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುವಂತಿಲ್ಲ. ಎಂದೂ ಸ್ವಯಂ ಟೀಕೆ ಮಾಡಿಕೊಳ್ಳದೆ ಯಾವುಗಲೂ ಇತರರನ್ನು ಟೀಕಿಸುವುದರಲ್ಲಿ ಕಾಲ ಕಳೆಯುವವರ ಪೈಕಿ ನಾನಲ್ಲ. ನಾವು ನಮ್ಮಷ್ಟಕ್ಕೆ ಪ್ರಾಮಾಣಿಕರಾಗಿದ್ದರೆ ನಮ್ಮನ್ನು ನಾವು ಸ್ವಯಂ ಟೀಕೆಗೆ ಗುರಿಪಡಿಸುವ ಅವಶ್ಯಕತೆಯಿದೆ. ತುರ್ತು ಪರಿಸ್ಥಿತಿಯಲ್ಲಿ ಏನಾಯಿತು ಎಂಬುದನ್ನು ನಾವು ನೋಡಿದ್ದೇವೆ. ಆದರೆ ಕೇವಲ ತುರ್ತು ಪರಿಸ್ಥಿತಿಯಲ್ಲಿ ಮಾತ್ರ ಅದು ನಡೆಯುತ್ತಿತ್ತೇ? ಅದಕ್ಕಿಂತ ಮುಂಚೆ ನಡೆಯುತ್ತಿರಲಿಲ್ಲವೆ? ಉನ್ನತ ಹುದ್ದೆಯ ಕೆಲವು ಅಧಿಕಾರಿಗಳು ಕೆಲವೊಮ್ಮೆ ನಿಮ್ಮನ್ನು ಹೇಗೆ ನಡೆಸಿಕೊಳ್ಳುತ್ತಾರೆ ಎಂಬುದು ನಿಮಗೆ ಗೊತ್ತಿದೆ. ಸ್ವತಃ ನೀವೇ ಆ ಕುರಿತು ಇಲ್ಲಿ ಅನೇಕ ಸಲ ದೂರಿದ್ದಿರಿ.

ನನಗೆ ಶಿಷ್ಟಾಚಾರದ ಬಗ್ಗೆ ಅಷ್ಟು ಚಿಂತೆಯಿಲ್ಲ. ಐ.ಪಿ.ಎಸ್. ಅಥವಾ ಐ.ಎ.ಎಸ್. ಅಧಿಕಾರಿಗಳ 'ಮುಂದೆ' ಕೂಡುವುದೋ, 'ಹಿಂದೆ' ಕೂಡುವುದೋ, ನನಗೆ ಯಾವುದೇ ಸ್ಥಳ ಸಿಕ್ಕರೂ ಸಾಕು; ಸ್ಥಾನದ ಬಗ್ಗೆ ನಾನು ಅಷ್ಟಾಗಿ ತಲೆ ಕೆಡಿಸಿಕೊಳ್ಳುವದಿಲ್ಲ. ಆ ಅಧಿಕಾರಿಯ ಜೊತೆ ವೈಯಕ್ತಿಕ ಸಂಬಂಧ ಮುಖ್ಯವಲ್ಲ. ನನ್ನ ಪ್ರಧಾನ ಕಾಳಜಿಯೆಂದರೆ,

ದೈನಂದಿನ ಆಡಳಿತದಲ್ಲಿ ನೌಕರಶಾಹಿಯ ಮೇಲೆ ಸಂಸತ್ತು ತನ್ನ ಔನ್ನತ್ಯವನ್ನು ಸ್ಥಾಪಿಸಿದೆಯೆ? ಎಂಬುದು. ನನ್ನ ಗಮನ ಇಡೀ ವ್ಯವಸ್ಥೆಯ ಕಡೆಗೇ ಹೊರತು ವ್ಯಕ್ತಿಯ ಕಡೆಗಲ್ಲ. ಸಂಸತ್ತಿನ ಸರ್ವೋಚ್ಚತೆ ಕ್ರಿಯಾಶೀಲವಾಗಿರಬೇಕು, ಕಾರ್ಯಾತ್ಮಕವಾಗಿರಬೇಕು, ಕೇವಲ ಔಪಚಾರಿಕವಾಗಿರಬಾರದು, ಕಾಲ್ಪನಿಕವಾಗಿರಬಾರದು. ಅದು ವಾಸ್ತವವಾಗಿರಬೇಕು. ನನಗೆ ಬೇಕಾಗಿರುವುದು ಇದು ಮತ್ತು ಹಾಗೆಂದೇ ನಾನು ಪರಿಭಾವಿಸುತ್ತೇನೆ. ಸಂಸತ್ತಿನ ಸದಸ್ಯರು ಮತ್ತು ಉನ್ನತ ನೌಕರಶಾಹಿಯ ನಡುವೆ ತಾಳಮೇಳವಿಲ್ಲದ ಕಾರಣದಿಂದಾಗಿ ನೌಕರಶಾಹಿಯು ಜನವಿರೋಧಿ, ಪ್ರಜಾತಂತ್ರ ವಿರೋಧಿ, ಸರ್ವಾಧಿಕಾರಿ ಪ್ರವೃತ್ತಿಗಳನ್ನು ಬೆಳೆಸಿಕೊಳ್ಳುತ್ತದೆ. ಭ್ರಷ್ಟಾಚಾರ ಕುಡಿಯೊಡೆದು ಪಸರಿಸುತ್ತಿದೆ. ನೌಕರಶಾಹಿ ವರ್ಗದಲ್ಲಿ ಜನತೆಯ ಬಗ್ಗೆ ಹೇಯವಾದ, ತುಚ್ಛವಾದ ಭಾವನೆ ಬೆಳೆಯಲಾರಂಭಿಸಿ ಜನತೆಯ ಆಶೆ ಆಕಾಂಕ್ಷೆಗಳು ಮಣ್ಣುಗೂಡುತ್ತಿವೆ. ಯಾವುದೇ ಒಬ್ಬ ವ್ಯಕ್ತಿಯ ಸದ್ಗುಣ ಅಥವಾ ದುರ್ಗುಣಗಳ ಅನಿವಾರ್ಯ ಉತ್ಪತ್ತಿಗಾಗಿ ಇದೆಲ್ಲ ಕಾಣಿಸಿಕೊಳ್ಳುವದಿಲ್ಲ. ನೀವೇ ಸೃಷ್ಟಿಸಿದ ಇಡೀ ವ್ಯವಸ್ಥೆಯ ಉತ್ಪತ್ತಿಯಾಗಿ ಅದು ಹೊರಹೊಮ್ಮುತ್ತದೆ. ಜನತೆಯಿಂದ ಪ್ರತ್ಯೇಕವಾಗಿರುವ ನೌಕರಶಾಹಿ ಎಲ್ಲಿಯೋ, ಯಾರಿಂದಲೋ ತರಬೇತಿ ಪಡೆದು ಕಾರ್ಯನಿರತವಾಗುತ್ತದೆ. ಹೀಗಾಗಿ ಇಡೀ ವ್ಯವಸ್ಥೆ ಕಲುಷಿತಗೊಳ್ಳುತ್ತದೆ. ನಾವು ಅದರ ಬಲಿಪಶುಗಳಾಗುತ್ತೇವೆ. ದೇಶ, ಪ್ರಜಾಸತ್ತೆ ಎಲ್ಲವೂ ಅದರ ಬಲಿಪಶುವಾಗುತ್ತದೆ! ಸಂಸದೀಯ ಸಂಸ್ಥೆಗಳು ವಿರೂಪಗೊಳ್ಳುತ್ತವೆ, ವಿಕೃತಗೊಳ್ಳುತ್ತವೆ ಅನೇಕ ರೀತಿಯಲ್ಲಿ ಪ್ರಜಾಸತ್ತೆಯ ಸಾಧ್ಯತೆಗಳೆಲ್ಲ ದಮನಗೊಳ್ಳುತ್ತವೆ. ಇದನ್ನು ನಾವು ಈಗಾಗಲೇ ನೋಡಿದ್ದೇವೆ.

ನಾವು ಕಾರ್ಯದರ್ಶಿಗಳ ಕಛೇರಿಗೆ ಹೋಗುವುದಿಲ್ಲ, ನಾವು ಯಾಕೆ ಹೋಗಬೇಕು? ಅವರು ನಮ್ಮಲ್ಲಿಗೆ ಬರುವುದಿಲ್ಲ, ಅವರಾದರೂ ಯಾಕೆ ಬರಬೇಕು? ಅವರಿಗೆ ಅದು ಅವಶ್ಯಕವಲ್ಲ. ಆದರೆ ಸಂಸದೀಯ ಸಮಿತಿಗಳು ಅಸ್ತಿತ್ವದಲ್ಲಿದ್ದರೆ ಯಾವುದೇ ವಿಷಯ ಜಾರಿಗೊಳ್ಳುತ್ತಿರುವ ವಿಧಾನದ ಕುರಿತು ಚರ್ಚಿಸಲು ಒಂದು ವ್ಯವಸ್ಥೆ ಒದಗಿಬರುತ್ತದೆ. ಈ ಸರ್ಕಾರ, ಇದಕ್ಕಿಂತ ಹಿಂದೆ ಅಧಿಕಾರದಲ್ಲಿದ್ದ ಸರ್ಕಾರ ಎರಡೂ ತಮ್ಮ ಧೋರಣೆಗಳನ್ನು ರೂಪಿಸುವಲ್ಲಿ ಸೋತಿವೆ. ಅವರು ರೂಪಿಸುತ್ತಿರುವ ಧೋರಣೆಗಳನ್ನು ತೃಪ್ತಿಕರವಾಗಿ ಜಾರಿಗೊಳಿಸಲು ಸಾಧ್ಯವಾಗುತ್ತಿಲ್ಲ. ಯಾಕೆಂದರೆ, ಜಾರಿಗೊಳಿಸುವ ಸಾಧನ - ಸಲಕರಣೆಯಾಗಿರುವ ಅಧಿಕಾರಿಗಳು ಮತ್ತು ಜನತೆಯ ನಡುವೆ ಪರಸ್ಪರ ಹೊಂದಾಣಿಕೆ, ಸಹಕಾರವೆಂಬುದೇ ಕಂಡುಬರುತ್ತಿಲ್ಲ. ಇಂಥ ಪರಸ್ಪರ ಹೊಂದಾಣಿಕೆ ಮತ್ತು ಸಹಕಾರ ಸ್ಥಾಯಿ ಸಮಿತಿಗಳ ಮೂಲಕ ಮಾತ್ರ ಸ್ಥಾಪನೆಗೊಳ್ಳುತ್ತದೆ. ಆದರೆ ಸದ್ಯ ಇಂಥ ಯಾವುದೇ ವ್ಯವಸ್ಥೆ ಅಸ್ತಿತ್ವದಲ್ಲಿಲ್ಲ. ಪರಿಣಾಮವಾಗಿ, ಕಾರ್ಯದರ್ಶಿಗಳಲ್ಲಿ ಯಾವುದೇ ಜವಾಬ್ದಾರಿಯ ಪ್ರಜ್ಞೆ ಕಂಡುಬರುತ್ತಿಲ್ಲ. ಕಾರ್ಯದರ್ಶಿ ಮತ್ತು ಸಂಸತ್ ಸದಸ್ಯರ ನಡುವೆ ಔಪಚಾರಿಕ ಸಂಬಂಧಬಿಟ್ಟರೆ ಇನ್ನ್ಯಾವುದೇ ರೀತಿಯ ಸಂಬಂಧ ಸ್ಥಾಪನೆಯಾಗಿಲ್ಲ. ನೀವು ಯಾವುದೇ ಕಛೇರಿಗೆ ಹೋಗಿ, ಅವರು ನಮ್ಮ ಬಗ್ಗೆ ಹೇಗೆ ಮಾತಾಡಿಕೊಳ್ಳುತ್ತಾರೆ ನೋಡಿ, ಅಷ್ಟೇಯಾಕೆ,

ಕೆಲವೊಮ್ಮೆ ನೀವು ಕೂಡಾ ಅವರ ಬಗ್ಗೆ ಹಾಗೆಯೇ ಮಾತಾಡುತ್ತೀರಿ. ಎಷ್ಟೋ ಸಲ ಅವರೇನು ಮಾಡುತ್ತಿದ್ದಾರೆಂಬುದನ್ನು ತಿಳಿದುಕೊಳ್ಳದೇ ಅವರನ್ನು ದೂಷಿಸುತ್ತೇವೆ. ಕೆಲವೊಮ್ಮೆ ನಮ್ಮ ದೂಷಣೆಗಳ ತಳ-ಬುಡ ಏನು ಇರುವುದಿಲ್ಲ. ಆದ್ದರಿಂದ ನಮ್ಮ ಬಗ್ಗೆಯೂ ಅವರಲ್ಲಿ ಕೆಟ್ಟಭಾವನೆ ಹುಟ್ಟಿಕೊಳ್ಳುತ್ತದೆ. ಆದರೂ ಅವರಿಗೆ ತಮ್ಮದೇ ಆದ ದಾರಿಯಿದೆ, ಯಾಕೆಂದರೆ, ಜಾರಿಗೊಳಿಸುವ ಸಮಯದಲ್ಲಿ ಮತ್ತು ಧೋರಣೆಗಳನ್ನು ರೂಪಿಸುವ ಸಮಯದಲ್ಲಿ ತುತ್ತತುದಿಯಲ್ಲಿ ಕುಳಿತಿರುವವರು ಅವರೇ ಆಗಿರುತ್ತಾರೆ. ಅನೇಕ ಜನ ಮಂತ್ರಿಗಳ ಧೋರಣೆಗಳನ್ನು ಅವರ ಅಧಿಕಾರಿಗಳೇ ರೂಪಿಸುತ್ತಾರೆ. ಥಿಂಕ್ ಟ್ಯಾಂಕ್ ಅಥವಾ ಬ್ರೇನ್ ಟ್ರಸ್ಟ್ ಮುಂತಾದ ಪದಪುಂಜಗಳಿಂದ ಕರೆಯಲ್ಪಡುವ ಅಧಿಕಾರಿ ವರ್ಗವೇ ಎಲ್ಲವನ್ನು ನಿಯಂತ್ರಿಸುತ್ತಿರುತ್ತದೆ. ಇವರು ಎಲ್ಲೆಲ್ಲೂ ಕಾಣಸಿಗುತ್ತಾರೆ. ಕೇಂದ್ರದ ಕಾರ್ಯದರ್ಶಿ ಮಂಡಳಿಯಲ್ಲಿ, ಸೌತ್ ಬ್ಲಾಕ್‌ನಲ್ಲಿ, ನಾರ್ಥ್‌ಬ್ಲಾಕ್‌ನಲ್ಲಿ ಅಥವಾ ಇನ್ನಾವುದೇ ಬ್ಲಾಕಿನಲ್ಲಿ - ಎಲ್ಲೆಲ್ಲೂ ಅವರೇ ಅವರಾಗಿ ಮೆರೆಯುತ್ತಿರುತ್ತಾರೆ. ಧೋರಣೆಗಳನ್ನು ರೂಪಿಸುವ, ಅವುಗಳನ್ನು ಸಂಸ್ಕರಿಸುವ, ಜಾರಿಗೊಳಿಸುವ ಎಲ್ಲ 'ಕ್ರಿಯಾ ಕರ್ಮ'ಗಳನ್ನು ಅವರೆ ಕೈಗೊಳ್ಳುತ್ತಾರೆ. ನೀವು ಮಾತ್ರ ಇಲ್ಲಿ ಬಂದು ಅವುಗಳನ್ನು ಪಾಸುಮಾಡಿಕೊಳ್ಳುತ್ತೀರಿ ಅಷ್ಟೇ.

ಇದು ಯಾಕೆ ಹೀಗಿದೆ? ಇಂಥ ಸಮಸ್ಯೆಗಳನ್ನು ಸ್ಥಾಯಿಸಮಿತಿಯಲ್ಲಿ ಚರ್ಚಿಸಲು ಸಾಧ್ಯವಿಲ್ಲವೆ? ಸ್ಥಾಯಿ ಸಮಿತಿಯಲ್ಲಿ ಒಂದೆಡೆ ಸರ್ಕಾರದ ಸದಸ್ಯರು ಇನ್ನೊಂದೆಡೆ ವಿರೋಧ ಪಕ್ಷದ ಸದಸ್ಯರು ಒಟ್ಟಿಗೆ ಕುಳಿತು ಸರ್ಕಾರದ ಧೋರಣೆಯ ಚೌಕಟ್ಟಿನೊಳಗೇ ಇಂಥ ಸಮಸ್ಯೆಗಳನ್ನು ಯಾಕೆ ಚರ್ಚಿಸಬಾರದು? ಅಂತಿಮವಾಗಿ ಸರ್ಕಾರ ಸಂಸತ್ತಿಗೆ ಜವಾಬ್ದಾರಮಾಗುತ್ತದೆ. ಸಂಸತ್ತಿನಲ್ಲಿ ತನಗೆ ಬಹುಮತವಿರುವವರೆಗೆ ಅದು ಅಸ್ತಿತ್ವದಲ್ಲಿರುತ್ತದೆ. ಇದು ಅತ್ಯಂತ ಮಹತ್ವದ್ದು. ಆದರೆ ಇದಾವುದೂ ಈಗ ನಡೆಯುತ್ತಿಲ್ಲ. ಪರಿಣಾಮವಾಗಿ, ನಾವು ಕಷ್ಟಕ್ಕೀಡಾಗುತ್ತಿದ್ದೇವೆ ....ಮಂತ್ರಿಗಳೂ ಅನೇಕ ಕಷ್ಟ ನಷ್ಟ ಅನುಭವಿಸುತ್ತಾರೆ. ಇದಕ್ಕಿಂತ ಹೆಚ್ಚಾಗಿ ಸಮಸ್ತ ಜನತೆ ಮತ್ತು ದೇಶ ಹಾನಿಗೆ ಈಡಾಗುತ್ತದೆ. ಈ ಕುರಿತು ನಾನು ಅನೇಕ ನಿದರ್ಶನಗಳನ್ನು ನೀಡಬಲ್ಲೆ. ಕೆಲವು ಸಲ ಮಂತ್ರಿಮಹೋದಯರು ತಮ್ಮ ಅಧಿಕಾರಿಗಳು ಬರೆದು ಕೊಟ್ಟ ಉತ್ತರಗಳನ್ನು ಓದುವುದನ್ನು ನಾನು ಕಂಡಿದ್ದೇನೆ. ಸಂಬಂಧಪಟ್ಟ ಮಂತ್ರಿಗಳು ಈ ಉತ್ತರಗಳನ್ನು ಒಂದೆರಡು ಸಲ ಮೊದಲೇ ಸರಿಯಾಗಿ ಓದಿಕೊಂಡು ಕೂಡ ಬರುವುದಿಲ್ಲ. ಆದ್ದರಿಂದಲೇ ಅವರು ಓದುವಾಗ ಎಷ್ಟೋಸಲ ಎಡವಟ್ಟು ಆಗುವುದುಂಟು. ಕೆಲವುಸಲ ಇಂಥ ಲಿಖಿತ ಉತ್ತರಗಳನ್ನು ತಪ್ಪುತಪ್ಪಾಗಿ ಓದುವುದುಂಟು. ನಿಜಸ್ಥಿತಿ ಹೀಗೆ ಬೆಳೆದಿರುವದರಿಂದ ಅಧಿಕಾರಿಗಳು ಅದರ ದುರ್ಲಾಭ ಪಡೆಯುತ್ತಿದ್ದಾರೆ. ಆದರೆ ಇದು ಮುಂದುವರಿಯಬಾರದೆಂಬುದು ನನ್ನ ಬಯಕೆ. ಯಾಕೆಂದರೆ, ಇದು ದೇಶದ ಹಿತದೃಷ್ಟಿಯಿಂದ ಸರಿಯಾದುದ್ದಲ್ಲ. ಆದ್ದರಿಂದ ಇನ್ನೂ ಹೆಚ್ಚಿನ ಜೀವಂತಿಕೆಯಿಂದ ಕೂಡಿದ ನಿಯಂತ್ರಣ ವ್ಯವಸ್ಥೆ ಅಸ್ತಿತ್ವಕ್ಕೆ ಬರಬೇಕಾಗಿದೆ.

## ಕೆಲವು ಲಘು ಮಧ್ಯಂತರಗಳು *

ಶ್ರೀ ಭೂಪೇಶ ಗುಪ್ತ ನಿಷ್ಠುರ ನಿಲುವಿನ ಪ್ರಜ್ವಲಿಸುವ ಸಂಸದೀಯ ಪಟುವಾಗಿದ್ದರೂ ಒಬ್ಬ ಸ್ನೇಹ ಜೀವಿಯಾಗಿದ್ದರು. ಸಹೃದಯಿಯಾಗಿದ್ದ ಅವರಲ್ಲಿ ಹಾಸ್ಯ ಪ್ರಜ್ಞೆ ಎದ್ದು ಕಾಣುತಿತ್ತು. ಅವರ ಪಕ್ಷದ ಸಹೋದ್ಯೋಗಿಗಳಾಗಲಿ, ವಿರೋಧ ಪಕ್ಷದ ರಾಜಕೀಯ ಎದುರಾಳಿಗಳಾಗಲಿ, ಸದನದಲ್ಲಿ ಎಲ್ಲರೂ ಅವರ ಜಾಣ್ನುಡಿಗೆ, ವಾತ್ಸಲ್ಯಮಯ ಸ್ವಭಾವಕ್ಕೆ ಮಾರು ಹೋಗಿದ್ದರು. ಈ ವಿಭಾಗದಲ್ಲಿ ಶ್ರೀ ಭೂಪೇಶ ಗುಪ್ತಾ ಅವರ ವ್ಯಕ್ತಿತ್ವದ ಅಪರಿಚಿತ ಆಯಾಮದ ಮೇಲೆ ಒಂದಿಷ್ಟು ದೃಷ್ಟಿ ಹಾಯಿಸಲು ಪ್ರಯತ್ನಿಸಲಾಗಿದೆ. ಈ ಉದ್ದೇಶದಿಂದ, ರಾಜ್ಯ ಸಭೆಯಲ್ಲಿ ಅನೇಕ ಚರ್ಚೆಗಳ ಸಂದರ್ಭದಲ್ಲಿ ಅವರು ಹಾರಿಸಿದ ರಂಜನೀಯ ಹಾಸ್ಯ ಚಟಾಕಿಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಇವು ಅವರ ವ್ಯಕ್ತಿತ್ವಕ್ಕೆ ವಿಶೇಷ ಮೆರಗು ಕೊಡುವುವೆಂಬ ವಿಶ್ವಾಸ ನಮಗಿದೆ.

### * ಸದಾ ಮುಗುಳ್ನಗೆ

ಶ್ರೀ ಅರ್ಜುನ ಆರೋರಾ : ಚರ್ಚೆ ** ಆರಂಭವಾಗಿದೆಯೆ?

ಶ್ರೀ ಭೂಪೇಶ ಗುಪ್ತ : ಹೂಂ! ಎಲ್ಲ ಘನಗಾಂಭೀರ್ಯದ್ಧೊಂದಿಗೆ ಸದನದ ಮುಖಂಡರು ಇಗೋ ಇಲ್ಲಿಯೆ ಹಾಜರಿದ್ದಾರೆ. ಮತ್ತು ಅವರು ಮುಗುಳ್ನಗುತ್ತಿದ್ದಾರೆ. ಶ್ರೀ ಹಾಥಿಯವರು ಯಾವಾಗಲೂ ಮುಗುಳ್ನಗುತ್ತಾರೆ. ಅವರು ಮುಗುಳ್ನುಗುವುದೇನೋ ಒಳ್ಳೆಯದೆ. ಆದರೆ ಕೆಟ್ಟದ್ದೇನೆಂದರೆ, ಗಂಭೀರ ಚರ್ಚೆ ನಡೆಯುವಾಗಲೂ ಅವರು ಮುಗುಳ್ನಗುತ್ತಾರೆ.

### * ಒಂದು ಒಳ್ಳೆಯ ಸಾಹಚರ್ಯ

ಸದನವು ಅಂತರರಾಷ್ಟ್ರೀಯ ವಿಷಯ ಕುರಿತು ಚರ್ಚಿಸುತ್ತಿತ್ತು. ಅನತಿ ಕಾಲದಲ್ಲೇ ಪ್ರಧಾನಮಂತ್ರಿ ಶ್ರೀ ಜವಾಹರಲಾಲ ನೆಹರೂ ಅವರು ಬೆಲ್‌ಗ್ರೇಡ್ ಮತ್ತು ಮಾಸ್ಕೋ ನಗರಗಳಿಗೆ ಭೇಟಿ ನೀಡಲಿದ್ದರು. ಸದನದಲ್ಲಿ ವಿದೇಶ ನೀತಿಯ ಕುರಿತು ಮಾತಾಡುತ್ತಿದ್ದ ಶ್ರೀ ಗುಪ್ತಾ ತಮ್ಮ ಅನಿಸಿಕೆಯನ್ನು ಮುಂದೆ ಇಟ್ಟು ಒಂದು ಸಲಹೆ ಸೂಚಿಸಿದರು. ಪ್ರಧಾನಮಂತ್ರಿಗಳು ಇಂಥ ಮಹಾ ಮಣಿಹ ಹೊತ್ತು ವಿದೇಶಗಳಿಗೆ ಹೋಗುವಾಗಲೆಲ್ಲ ಕೇವಲ ಅಧಿಕಾರಿಗಳನ್ನು ಮಾತ್ರ ಕರೆದುಕೊಂಡು ಹೋಗದೇ ಸದನದ ಕೆಲವು ಸದಸ್ಯರನ್ನು ಕರೆದುಕೊಂಡು ಹೋಗಬೇಕು ಎಂಬುದು ಆ ಸಲಹೆಯಾಗಿತ್ತು.

---

* ಸುದರ್ಶನ್ ಅಗರವಾಲ್ (ಸಂಪಾದಕರು), ಸದನ ನಕ್ಕಾಗ: ರಾಜ್ಯಸಭೆಯಲ್ಲಿ ಹಾಸ್ಯಚಟಾಕಿ, ರಾಜ್ಯ ಸಭಾ, ಸೆಕ್ರೆಟೆರಿಯೆಟ್, 1989.

** ನಾಲ್ಕನೇಯ ಪಂಚವಾರ್ಷಿಕ ಯೋಜನೆ ದಾಖಲೆಗಳ ಮೇಲೆ ಚರ್ಚೆ.

ತಮ್ಮ ಕಮ್ಯುನಿಸ್ಟ್ ಪಕ್ಷದಿಂದ ಯಾವುದೇ ಸದಸ್ಯರು ಪ್ರಧಾನಮಂತ್ರಿಯವರೊಂದಿಗೆ ಹೋಗುವ ಸಾಧ್ಯತೆಯನ್ನು ಅಲ್ಲಗೆಳೆದ ಅವರು ವಿರೋಧ ಪಕ್ಷದ ಇನ್ನೂ ಅನೇಕ ಸದಸ್ಯರಲ್ಲಿ ಯಾರನ್ನಾದರೂ ಪ್ರಧಾನ ಮಂತ್ರಿಗಳು ಆಯ್ಕೆ ಮಾಡಿಕೊಳ್ಳಬೇಕೆಂದು ಹೇಳಿದರು. ಈ ಚರ್ಚೆಗೆ ಉತ್ತರಿಸುತ್ತಾ ಶ್ರೀ ಭೂಪೇಶ ಗುಪ್ತ ಅವರ ಸಲಹೆಗೆ ನೆಹರೂ ಹೀಗೆಂದರು:

ನೆಹರೂ : ನಮ್ಮ ಜೊತೆ ಬರಲು ಶ್ರೀ ಭೂಪೇಶ ಗುಪ್ತ ಅವರು ಯಾಕೆ ತಮ್ಮನ್ನು ಹೊರತುಪಡಿಸಿಕೊಂಡರೊ ನನಗೆ ಗೊತ್ತಿಲ್ಲ. ಬಹುಶಃ ಬೆಲ್‌ಗ್ರೇಡ್ ಎಂದರೆ ಅವರಿಗೆ ಅಷ್ಟಾಗಿ ಸೇರುವುದಿಲ್ಲವೆಂದು ಕಾಣುತ್ತದೆ.

ಭೂಪೇಶ ಗುಪ್ತ : ಬೆಲ್‌ಗ್ರೇಡ್‌ಯೆಂದರೆ ನನಗೇನೋ ಇಷ್ಟವೆ. ಆದರೆ ಕೆಲವು ಸಲ ನಾನೆಂದರೆ ನಿಮಗೆ ಇಷ್ಟವಿಲ್ಲ. ಹಾಗೆ ನೋಡಿದರೆ; ನಿಮ್ಮ ಜೊತೆಗೆ ಹೋಗುವದು ನನಗೆ ತುಂಬ ಇಷ್ಟ.

## ತಪ್ಪು ಕಲ್ಪನೆಗೆ ದಾರಿ ಮಾಡಿಕೊಡುವ ಘಂಟೆ

ಶ್ರೀ ಭೂಪೇಶ ಗುಪ್ತ : ...ಸರಿ. ಮಾನ್ಯರೆ, ನಾನು ಮಂತ್ರಿಗಳ ಕುರಿತು ಮಾತಾಡಲು ಆರಂಭಿಸಿದೊಡನೆಯೆ ತಾವು ಘಂಟೆ ಬಾರಿಸಿದರೆ ಹೊರಗಿನ ಜನ ತಪ್ಪುಭಾವಿಸುವ ಸಂಭವವಿದೆ.

ಉಪಾಧ್ಯಕ್ಷರು : ನೀವು ಈಗಾಗಲೇ ಅರ್ಧ ಘಂಟೆ ತೆಗೆದುಕೊಂಡಿದ್ದೀರಿ.

ಶ್ರೀ ಭೂಪೇಶ ಗುಪ್ತ : ನನಗೆ ಅದು ಗೊತ್ತು, ಆದರೆ ನಾನು ಮಂತ್ರಿಗಳ ಕುರಿತು ಮಾತು ಎತ್ತಿದೊಡನೆಯೆ ನಾವು ಘಂಟೆ ಬಾರಿಸಿದರೆ ಜನ ಏನೆಂದು ಕೊಂಡಾರು!

## ಅಧ್ಯಕ್ಷರ ಗಮನ

ಶ್ರೀಮತಿ ಯಶೋಧಾ ರೆಡ್ಡಿ : ಮಹನೀಯ ಉಪಾಧ್ಯಕ್ಷರೆ, ನಾನು ತಮ್ಮ ದೃಷ್ಟಿ ಸೆಳೆಯಲು ಪ್ರಯತ್ನಿಸುತ್ತಿದ್ದೇನೆ.

ಶ್ರೀ ಭೂಪೇಶ ಗುಪ್ತ : ನೀವು ಈಗಾಗಲೇ ನಮ್ಮೆಲ್ಲರ ದೃಷ್ಟಿ ಸೆಳೆದಿದ್ದೀರಿ.

ಶ್ರೀಮತಿ ಯಶೋಧಾ ರೆಡ್ಡಿ : ನಿಮ್ಮನಂತರ, ಅಧ್ಯಕ್ಷೆಯವರು ಪರವಾನಿಗೆ ಕೊಟ್ಟರೆ, ನಾನು ಮಾತಾಡಬಯಸುತ್ತಿದ್ದೇನೆ, ನಿಮ್ಮ ಪರವಾನಗಿಯಿಂದಲ್ಲ, ಅಧ್ಯಕ್ಷೆಯವರ ಪರವಾನಗಿಯಿಂದ.

ಶ್ರೀ ಭೂಪೇಶ ಗುಪ್ತ : ನೀವು ಅವರೊಬ್ಬರ ದೃಷ್ಟಿ ಸೆಳೆಯುವುದಕ್ಕೆ ಅಷ್ಟೇಕೆ ಚಿಂತಿಸುತ್ತಿದ್ದೀರಿ. ಈಗಾಗಲೇ ಅನೇಕರ ದೃಷ್ಟಿಗಳು ನಿಮ್ಮ ಮೇಲೆ ಬಿದ್ದಿವೆ.

ಶ್ರೀಮತಿ ಯಶೋಧಾ ರೆಡ್ಡಿ : ನನಗೆ ಬೇಕಾಗಿರುವುದು ಅಧ್ಯಕ್ಷೆಯವರ ದೃಷ್ಟಿ ಮತ್ತೆ ಬೇರೆ ಯಾರ ದೃಷ್ಟಿಯೂ ಅಲ್ಲ.

ಶ್ರೀ ಭೂಪೇಶ ಗುಪ್ತ : ನನಗೆ ಗೊತ್ತು, ನನ್ನ ಕಣ್ಣುಗಳೆಂದರೆ ತಮಗೆ ಸೇರುವುದಿಲ್ಲ. ಅದಕ್ಕೆ ನಾನೇನು ಮಾಡಲಿ?

## ಕೋಳಿ, ಗೂಳಿಗಳ ಸರ್ಕಾರ

ತಮ್ಮ ಭಾಷಣದ ಸಮಯದಲ್ಲಿ ಶ್ರೀ ಕೃಷ್ಣಕಾಂತ ಅವರು ಪಶ್ಚಿಮ ಬಂಗಾಳದ ಸರ್ಕಾರವನ್ನು ಕೋಳಿ, ಗೂಳಿಗಳ ಸರ್ಕಾರ ಎಂದು ಕರೆದರು. ಇದಕ್ಕೆ ಶ್ರೀ ಎ.ಪಿ.ಚಟರ್ಜಿಯವರು ತಕ್ಷಣವೇ ಆಕ್ಷೇಪಿಸಿ ಸಂವಿಧಾನ ಬದ್ಧವಾಗಿ ರಚನೆಗೊಂಡ ಒಂದು ಸರ್ಕಾರವನ್ನು 'ಕೋಳಿ ಗೂಳಿಗಳ' ಸರ್ಕಾರವೆಂದು ಕರೆಯುವದು ತರವಲ್ಲವೆಂದರು. ಆ ಮೇಲೆ ಚರ್ಚೆಯ ನಡುವೆ ಬಾಯಿ ಹಾಕಿ - - - - ,

ಶ್ರೀ ಪೀತಾಂಬರ್ ದಾಸ್ : ಮಾನ್ಯರೆ, ಶ್ರೀ ಕೃಷ್ಣಾಕಾಂತ್ ಅವರು ಹೇಳಿದ್ದರಲ್ಲಿ ಆಕ್ಷೇಪಿಸುವಂಥಾದ್ದು ಏನೂ ಇಲ್ಲ. ಬಹುಶಃ ಅವರ ಮಾತಿನ ಅರ್ಥ ಹೀಗಿರಬೇಕು: ಆ ಸರ್ಕಾರ ಇಬ್ಬರ ನೇತೃತ್ವದಲ್ಲಿ ನಡೆದಿರಬಹುದು. ಅವರಲ್ಲಿ ಒಬ್ಬರು ಕೋಳಿಯಾಗಿದ್ದರೆ, ಇನ್ನೊಬ್ಬರು ಗೂಳಿಯಾಗಿರಬಹುದು.

ಶ್ರೀ ಪೀತಾಂಬರದಾಸ್‌ರ ಈ ಅಭಿಪ್ರಾಯ ಸದನದಲ್ಲಿ ಈ ಕೆಳಗಿನ ರೋಚಕ ಸಂಭಾಷಣೆಗೆ ಅವಕಾಶ ಮಾಡಿಕೊಟ್ಟಿತ್ತು.

**ಶ್ರೀ ಗೋಡೆ ಮುರಾಹರಿ** : ಶ್ರೀ ಅಜಯ ಮುಖರ್ಜಿ ಕೋಳಿಯಾಗಿದ್ದರೆ, ಶ್ರೀ ಜ್ಯೋತಿ ಬಸು ಗೂಳಿಯಾಗಿದ್ದಾರೆ.

**ಉಪಾಧ್ಯಕ್ಷರು** : ಮಾನ್ಯ ಕೃಷ್ಣಕಾಂತರೆ; ನೀವು ನಿಮ್ಮ ಪ್ರಶ್ನೆಯನ್ನು ಮಾತ್ರ ಕೇಳಿರಿ.

**ಶ್ರೀ ಭೂಪೇಶ ಗುಪ್ತ** : ಮಾನ್ಯರೆ, ನಾವೆಲ್ಲರೂ ಸ್ಥಾಪಿತ ಹಿತಾಸಕ್ತಿಯ ವಿರುದ್ಧ ಗೂಳಿಗಳಾಗಿದ್ದೇವೆ; ಏಕಸ್ವಾಮ್ಯದ ವಿರುದ್ಧದ ಕೋಳಿಗಳಾಗಿದ್ದೇವೆ.

### ಮಂತ್ರಿಗಳಿಗೆಲ್ಲಾ ಬಣ್ಣದ ಟಾಳೀಸು

**ಪ್ರಿನ್ಸಿಪಾಲ್ ದೇವಪ್ರಸಾದ ಘೋಷ್** : ಕಲ್ಯಾಣ ರಾಜ್ಯವಾಗಿರುವ ನಮ್ಮ ದೇಶದಲ್ಲಿ ಭಾರತ ಸರ್ಕಾರವು ಅವಶ್ಯವಿದ್ದವರಿಗೆಲ್ಲಾ ಪುಕ್ಕಟೆ ಟಾಳೀಸು ಒದಗಿಸುವ ಕಾರ್ಯಕ್ರಮವೇನಾದರು ಹಾಕಿಕೊಳ್ಳುವುದೆ? ಇಂಗ್ಲೆಂಡಿನಲ್ಲಿ ಲೇಬರ್ ಪಕ್ಷದ ಸರ್ಕಾರ ಇಂಥ ಕಾರ್ಯಕ್ರಮ ಹಾಕಿಕೊಂಡಿತ್ತು. ಆದರೆ, ಆಮೇಲೆ ಚರ್ಚಿಲ್ ಸರ್ಕಾರ ಅದನ್ನು ರದ್ದುಪಡಿಸಲು ನಿರ್ಧರಿಸಿತ್ತು.

**ಶ್ರೀ ಡಿ.ಪಿ.ಕರ್‌ಮರ್ಕರ್** : ಈ ಸಲಹೆಯನ್ನು ನಾನು ಪರಿಶೀಲಿಸುತ್ತೇನೆ.

**ಶ್ರೀ ಭೂಪೇಶ ಗುಪ್ತ** : ಮಂತ್ರಿಗಳಿಗೆಲ್ಲಾ ಬಣ್ಣದ ಟಾಳೀಸು ಒದಗಿಸುವ ಯೋಜನೆಯೇನಾದರೂ ಇದೆಯೇ ತಿಳಿಸುವಂಥವರಾಗಬೇಕು.

## ಆಸ್ತಿಯ ಬಗ್ಗೆ ಕಾಳಜಿ

ದೆಹಲಿಯಲ್ಲಿ ಹದಗೆಡುತ್ತಿದ್ದ ಕಾಯ್ದೆ ಮತ್ತು ಸುವ್ಯವಸ್ಥೆಗೆ ಸಂಬಂಧಿಸಿ ಗಮನ ಸೆಳೆಯುವ ಚರ್ಚೆಯ ಸಮಯದಲ್ಲಿ ಶ್ರೀ ಕೆ.ಸಿ.ಪಂಥ್* ಅವರು ಕೆಲವು ಲಘುವಾದ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದಕ್ಕೆ ಶ್ರೀ ಭೂಪೇಶ ಗುಪ್ತ ಅವರು ತಮಗೆ ಜೋಕುಗಳೆಂದರೆ ಪ್ರೀತಿಯೇನೋ ಇದೆ. ಆದರೆ,

"ಜೀವಕೊಟ್ಟು ಜೋಕು ಕೊಳ್ಳುವ ಮನುಷ್ಯ ನಾನಲ್ಲ. ಜೋಕಿಗಿಂತಲೂ ಜೀವ ನನಗೆ ಅಮೂಲ್ಯ. ಅದೇ ನನ್ನ ಪರಮ ಆಸ್ತಿ".

ಉಪಾಧ್ಯಕ್ಷ : ಆದರೆ ನಿಮಗೆ ಯಾವುದೇ ಆಸ್ತಿಯಿಲ್ಲವಲ್ಲ?

ಶ್ರೀ ಕೆ.ಸಿ.ಪಂಥ್ : ಅವರು ಆಸ್ತಿಯ ಬಗ್ಗೆ ಕಾಳಜಿ ತೋರಿಸುವದು ನನಗೆ ತುಂಬಾ ಸಂತೋಷವುಂಟು ಮಾಡುತ್ತದೆ.

ಶ್ರೀ ಭೂಪೇಶ ಗುಪ್ತ : ನನಗೆ ಆಸ್ತಿ ಇಲ್ಲವೆಂದವರಾರು? ಹೌದು, ನನ್ನಲ್ಲಿಯೂ ಆಸ್ತಿಯಿದೆ. ಆದು ನನ್ನ ಟೈಪ್‌ರೈಟರ್. ಅದುವೇ ನನ್ನ ಅಮೂಲ್ಯ ಆಸ್ತಿ!

## ಸ್ವರ್ಗ ಸೇರುವುದು ಸರಳವಲ್ಲ

ಶ್ರೀ ದೇವವ್ರತ ಮುಖರ್ಜಿ : ನೀವು ನನಗೆ ಸ್ವರ್ಗದಲ್ಲೊಂದು ಸೀಟು ಕೊಡಿಸುವ ಆಶ್ವಾಸನೆಯಿತ್ತರೂ ನಿಮ್ಮ ಉಪದೇಶದ ಮಾತು ನನಗೆ ಬೇಕಿಲ್ಲ.

ಶ್ರೀ ಭೂಪೇಶ ಗುಪ್ತ : ನಿಮ್ಮನ್ನು ಸ್ವರ್ಗಕ್ಕೇನೋ ಕಳಿಸಬಹುದು. ಆದರೆ ಅಲ್ಲಿಯ ದೇವರೂ ನಿಮ್ಮನ್ನು ತಿರಸ್ಕರಿಸುತ್ತಾನೆ ಎಂಬುದು ಖಚಿತ.

## ನೃತ್ಯ ಸಂಸ್ಥೆಗೆ ಯೋಗ್ಯ

ಸದನದಲ್ಲಿ ಮಾಜಿ ಪ್ರಧಾನಮಂತ್ರಿಯಾಗಿದ್ದ ಮುರಾರ್ಜಿ ದೇಸಾಯಿಯವರ ಮಗ ಶ್ರೀ ಕಾಂತಿಭಾಯಿ ದೇಸಾಯಿಯವರ ಮೇಲೆ ಮಾಡಲಾದ ಆರೋಪ ಕುರಿತು ಚರ್ಚೆ ನಡೆಯುತ್ತಿತ್ತು. ಆಗ ಶ್ರೀ ಮನುಭಾಯಿ ಪಟೇಲ್ ಎದ್ದು ನಿಂತು ತುಂಬಾ ಭಾವಪರವಶರಾಗಿ ಕಾಲು, ಕೈ ಆಡಿಸುತ್ತ ಶ್ರೀ ದೇಸಾಯಿಯವರನ್ನು ಬೆಂಬಲಿಸಿ ಮಾತಾಡಿದರು. ಅವರನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಶ್ರೀ ಭೂಪೇಶ ಗುಪ್ತ ಹೀಗೆ ನುಡಿದರು. "ಮಾನ್ಯರೆ, ನಾನು

* ಗೃಹ ಮಂತ್ರಾಲಯದಲ್ಲಿ ಆಗ ಉಪಮಂತ್ರಿಯಾಗಿದ್ದವರು.

ಅವರ ಆಕ್ಷೇಪಣೆಯ ಮಾತುಗಳನ್ನು ಗಮನವಿಟ್ಟು ಕೇಳಿದ್ದೇನೆ, ಅವರ ಚಲನವಲನ, ಕೈ ಬೆರಳುಗಳ ಹಾವಭಾವ ನೋಡಿದರೆ, ಅವರು ಒಂದು ನೃತ್ಯ ಸಂಸ್ಥೆ ಸೇರಲು ಲಾಯಕ್ಕಾಗಿದ್ದಾರೆ ಎನಿಸುತ್ತದೆ.

## ಆಶ್ರಯಕ್ಕಾಗಿ ಸೂಕ್ತ ತಾಣ

ಪಂಡಿತ ಹೃದಯನಾಥ ಕುಂಜ್ರು ಅವರು ನಿರಾಶ್ರಿತರ ವಿಧೇಯಕ ಕುರಿತು ಮಾತನಾಡುತ್ತ ತಮ್ಮ ನಿಲುವನ್ನು ಸ್ಪಷ್ಟಪಡಿಸಲು ಹೇಳಿದರು:

"..... ನನ್ನ ಮಾನ್ಯ ಗೆಳೆಯರಾದ ಶ್ರೀ ಭೂಪೇಶ ಗುಪ್ತ ಅವರು ಇತ್ತೀಚಿಗೆ ಪಾರ್ಲಿಮೆಂಟನಲ್ಲಿ ಪಾಸಾದ ಕ್ರಿಮಿನಲ್ ಕಾಯ್ದೆಯಡಿ ಬಂಧನಕ್ಕೆ ಒಳಗಾಗುವ ಭಯದಿಂದ ದೇಶದಿಂದ ತಪ್ಪಿಸಿಕೊಂಡು ಓಡಿಹೋಗಿ ಪಾಕಿಸ್ತಾನದಲ್ಲಿಯೋ, ದಕ್ಷಿಣ ಆಫ್ರಿಕಾದಲ್ಲಿಯೋ ಆಶ್ರಯ ಪಡೆಯಲು ಬಯಸುತ್ತಾರೆ ಎಂದು ಊಹಿಸಿಕೊಳ್ಳಿ".

**ಶ್ರೀ ಭೂಪೇಶ ಗುಪ್ತ** : ನಿಜವೆಂದರೆ, ನಾನು ಡಾ.ಕುಂಜ್ರುರವರ ಮನೆಯಲ್ಲಿ ಆಶ್ರಯ ಪಡೆಯಲು ಪ್ರಯತ್ನಿಸುವೆನೆ ವಿನಃ ಪಾಕಿಸ್ತಾನ್ ಅಥವಾ ದಕ್ಷಿಣ ಆಫ್ರಿಕಾದಲ್ಲಿ ಅಲ್ಲ !

## ದುರ್ದೈವ

ಶ್ರೀ ಭೂಪೇಶ ಗುಪ್ತ ಅವರು 1962 ರ ಭೂ - ಸ್ವಾಧೀನ (ತಿದ್ದುಪಡಿ) ವಿಧೇಯಕದ ಮೇಲೆ ಮಾತಾನಾಡುತ್ತ, ಆ ತಿದ್ದುಪಡಿಯ ಬಗ್ಗೆ ತಮ್ಮ ನಿಲುವನ್ನು ಆಗಲೇ ಸಾಕಷ್ಟು ಸ್ಪಷ್ಟಪಡಿಸಿದ್ದರಿಂದ ಅವರು ತಮ್ಮ ಭಾಷಣ ಮುಕ್ತಾಯಗೊಳಿಸಬೇಕೆಂದು ಉಪಾಧ್ಯಕ್ಷರು ಸೂಚಿಸಿದರು. ಅದು ಸದನದಲ್ಲಿ ಈ ಕೆಳಗಿನ ಹಾಸ್ಯಮಯ ಸಂಭಾಷಣೆಗೆ ಎಡೆಮಾಡಿಕೊಟ್ಟಿತು.

ಉಪಾಧ್ಯಕ್ಷೆ : ನೀವು ನಿಮ್ಮ ನಿಲುವನ್ನು ಸಾಕಷ್ಟು ಸ್ಪಷ್ಟ ಪಡಿಸಿದ್ದೀರಿ.

ಶ್ರೀ ಭೂಪೇಶ **ಗುಪ್ತ** : ಮೇಡಂ, ಅದು ನಿಮಗೆ ಸ್ಪಷ್ಟವಾಗಿರಬಹುದು, ನೀವು ನಿಮ್ಮ ಮತವನ್ನು ನನ್ನ ಪರವಾಗಿ ಹಾಕುತ್ತಿರುವುದು ಸ್ವಾಗತಾರ್ಹ. ಆದರೆ ನಾನು ಮನಗಾಣಿಸ ಬಯಸುತ್ತಿರುವದು, ಇನ್ನುಳಿದ ಸದಸ್ಯರನ್ನು.

ಒಬ್ಬ ಮಾನ್ಯ ಸದಸ್ಯರು : ನೀವು ನಮ್ಮನ್ನು ಮನಗಾಣಿಸುವ ಸಾಮರ್ಥ್ಯ ತಮಗಿದೆಯೆಂಬ ಭರವಸೆ ಇದೆಯೇ?

ಶ್ರೀ ಭೂಪೇಶ **ಗುಪ್ತ** : ನಾನು ಆಶಾವಾದಿಯಾಗಿ ಬದುಕುತ್ತಿದ್ದೇನೆ, ನಿಮ್ಮಂತೆಯೇ..

ಉಪಾಧ್ಯಕ್ಷೆ : ಹಾಗಾದರೆ, ಈಗ ನಾವು ಮಂತ್ರಿಗಳ ಮಾತು ಕೇಳೋಣ.

ಶ್ರೀ ಭೂಪೇಶ ಗುಪ್ತ : ಮಂತ್ರಿವರ್ಯರ ಮಾತೆಂದರೆ ತಮಗೆ ಎಲ್ಲಿಲ್ಲದ ಪ್ರೀತಿಯೆಂದು ಕಾಣುತ್ತದೆ !

ಉಪಾಧ್ಯಕ್ಷೆ : ಈಗೂ ಹೇಳಿದಿರಿ ತಾವು ಆಶಾವಾದಿಯೆಂದು ಮತ್ತು ...

ಶ್ರೀ ಭೂಪೇಶ ಗುಪ್ತ : ಮಂತ್ರಿಗಳು ತುಂಬಾ ಮನಮೋಹಕವಾಗಿದ್ದಾರೆ, ಮತ್ತು ಅವರ ಮಾತು ಕೇಳಲು ತುಂಬಾ ಇಂಪು ಎಂದು ನನಗೆ ಗೊತ್ತಿದೆ. ಆದರೆ ನಾವು ಕೂಡಾ ಅಷ್ಟೇನೂ ಕುರೂಪಿಗಳಾಗಿಲ್ಲವಲ್ಲ ? ಅಲ್ಲದೆ, ನಮ್ಮ ಧ್ವನಿಯೂ ಸುಶ್ರಾವ್ಯವಾಗಿಯೇ ಇದೆ.

ಉಪಾಧ್ಯಕ್ಷೆ : ನಿಮ್ಮ ಸೌಂದರ್ಯ ಸುತ್ತಲಿನ ಎಲ್ಲರಿಗೂ ಗೊತ್ತಿರುವಂಥದ್ದೆ. ಆದರ ಆಕರ್ಷಕ ಶಕ್ತಿಯೇನೂ ಕಡಿಮೆಯಿಲ್ಲ.

ಶ್ರೀ ಭೂಪೇಶ ಗುಪ್ತ : ಇಲ್ಲ ಮೇಡಂ, ನನ್ನ ದುರ್ದೈವವೆಂದರೆ ನಾನೆಂದೂ ಅಧ್ಯಕ್ಷಣೀಯು ಕುರ್ಚಿಯುನ್ನು ಆಕರ್ಷಿಸಲು ಸಮರ್ಥನಾಗಿಲ್ಲವಲ್ಲ!

## ಮಹಾಭಾರತದ ಪುನರ್ ಅಭಿನಯ

ಒಮ್ಮೆ ಸದನದಲ್ಲಿ ಮಾತಾಡುತ್ತ ಶ್ರೀ ಅರ್ಜುನ ಅರೋರಾ ಅವರು ಶ್ರೀಮತಿ ಯಶೋಧಾ ರೆಡ್ಡಿಯವರನ್ನು ಶ್ರೀಮತಿ ಸುಭದ್ರಾ ಎಂದು ಸಂಭೋಧಿಸಿದರು. ಆದರೆ ಕೂಡಲೇ ತಮ್ಮ ತಪ್ಪನ್ನು ತಿದ್ದಿಕೊಂಡರು. ಮತ್ತು ತಮ್ಮಿಂದ ಆದ ತಪ್ಪಿಗೆ ಈ ಕೆಳಗಿನಂತೆ ವಿವರಣೆ ಕೊಟ್ಟರು.

"ನಾನು ಅರ್ಜುನನಾಗಿದ್ದರಿಂದ ಯಾವಾಗಲೂ *ಸುಭದ್ರಾ ಬಗ್ಗೆಯೇ ಚಿಂತಿಸುತ್ತೇನೆ."

ಇದನ್ನು ಕೇಳಿದೊಡನೆಯೆ ಶ್ರೀ ಭೂಪೇಶ ಗುಪ್ತ :

"ಆದರೆ ನೀವು ಈಗ ಶ್ರೀಕೃಷ್ಣನಂತೆ ಭಾಷಣ ಮಾಡುತ್ತಿದ್ದೀರಿ, ಆದ್ದರಿಂದ ಯಶೋದೆಯ** ಬಗ್ಗೆ ಚಿಂತಿಸಬೇಕು".

---

* ಸುಭದ್ರಾ ಮಹಾಭಾರತದಲ್ಲಿ ಅರ್ಜುನನ ಹೆಂಡತಿ.

** ಯಶೋದೆ ಶ್ರೀಕೃಷ್ಣನ ಸಾಕು ತಾಯಿ.

* * * * *

## 1999-2000 ನೇ ಸಾಲಿನ ಗ್ರಂಥಾಲಯ ಉಪ ಸಮಿತಿಯ ಸದಸ್ಯರುಗಳು

*ಶ್ರೀಯುತರುಗಳಾದ*

| | | |
|---|---|---|
| 1. ಬಿ.ಬಿ. ಶಿವಪ್ಪ | ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. ಪಾಟೀಲ್ ಕಾಕಾಸಾಹೇಬ ಪಾಂಡುರಂಗ | ” | ಸದಸ್ಯರು |
| 3. ಸಿರಾಜ್ ಶೇಖ್ | ” | ” |
| 4. ಪಿ.ಎಂ.ರಂಗನಾಥ್ | ” | ” |
| 5. ಎನ್.ಸಂಪಗಿ | ” | ” |
| 6. ಡಾ॥ ಹೆಚ್.ಎಲ್.ನಾಗೇಗೌಡ | ವಿಧಾನ ಪರಿಷತ್ತಿನ ಸದಸ್ಯರು | ” |
| 7. ಡಾ॥ ವಿ.ಎಸ್.ಆಚಾರ್ಯ | ” | ” |
| 8. ಕೆ.ಸಿ.ಪುಟ್ಟಸಿದ್ದಶೆಟ್ಟಿ | ” | ” |

## 2002-2003 ನೇ ಸಾಲಿನ ಗ್ರಂಥಾಲಯ ಉಪ ಸಮಿತಿಯ ಸದಸ್ಯರುಗಳು

*ಶ್ರೀಯುತರುಗಳಾದ*

| | | |
|---|---|---|
| 1. ಬಿ.ಬಿ. ಶಿವಪ್ಪ | ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. ಪಿ.ರಮೇಶ್ | ” | ಸದಸ್ಯರು |
| 3. ಡಾ॥ ಭಾರತೀಶಂಕರ್ | ” | ” |
| 4. ಕೆ.ಬಿ.ಚಂದ್ರಶೇಖರ್ | ” | ” |
| 5. ಡಿ.ಆರ್.ಪಾಟೀಲ್ | ” | ” |
| 6. ರಾಮಚಂದ್ರಗೌಡ | ವಿಧಾನ ಪರಿಷತ್ತಿನ ಸದಸ್ಯರು | ” |
| 7. ಡಾ॥ ಎಂ.ಪಿ.ನಾಡಗೌಡ | ” | ” |
| 8. ಎಂ.ಎಸ್.ಸಿದ್ದರಾಜು | ” | ” |

## ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹಮಾಲಿಕೆ
## ಸಂಪಾದಕ ವರ್ಗ

ಶ್ರೀಯುತರುಗಳಾದ :

1. ಯಾಕೂಬ್ ಶರೀಫ್
   ಕಾರ್ಯದರ್ಶಿ

2. ಟಿ. ರಾಜಣ್ಣ
   ವಿಶೇಷ ಕಾರ್ಯದರ್ಶಿ

3. ಎಸ್.ಬಿ. ಪಾಟೀಲ್
   ಜಂಟಿ ಕಾರ್ಯದರ್ಶಿ

4. ಟಿ.ಎನ್. ಧ್ರುವಕುಮಾರ್
   ಉಪ ಕಾರ್ಯದರ್ಶಿ

5. ಕೆ. ಚೆನ್ನಸ್ವಾಮಿ
   ಅಧೀನ ಕಾರ್ಯದರ್ಶಿ

6. ಮಿರ್ಜಾ ಮೆಹ್ದಿ
   ಶಾಖಾಧಿಕಾರಿ

## ಈ ಸಚಿವಾಲಯದ ಪ್ರಕಟಣೆಗಳು

| ಕ್ರ ಸಂ. | ರಚಿತ ಪುಸ್ತಕಗಳು | ದರ ರೂ. |
|---|---|---|
| 1. | ಕೆ. ಹನುಮಂತಯ್ಯ | 20-00 |
| 2. | ಎಸ್. ನಿಜಲಿಂಗಪ್ಪ | 15-00 |
| 3. | ಶಾಂತವೇರಿ ಗೋಪಾಲಗೌಡ | 15-00 |
| 4. | ವೈಕುಂಠ ಬಾಳಿಗಾ | 20-00 |
| 5. | ವೀರೇಂದ್ರ ಪಾಟೀಲ್ | 20-00 |
| 6. | ಕಡಿದಾಳ್ ಮಂಜಪ್ಪ | 15-00 |
| 7. | ಜಿ.ವಿ. ಹಳ್ಳಿಕೇರಿ | 15-00 |
| 8. | ಶ್ರೀಮತಿ ಕೆ.ಎಸ್. ನಾಗರತ್ನಮ್ಮ | 15-00 |
| 9. | ಡಿ. ದೇವರಾಜ ಅರಸು | 15-00 |
| 10. | ಕೆ.ಟಿ.ಭಾಷ್ಯಂ | 15-00 |
| 11. | ಟಿ. ಸಿದ್ದಲಿಂಗಯ್ಯ | 20-00 |
| 12. | ಕೆ. ಪುಟ್ಟಸ್ವಾಮಿ | 15-00 |
| 13. | ಜಗಳೂರು ಇಮಾಂ | 15-00 |
| 14. | ಕೆ.ಸಿ. ರೆಡ್ಡಿ | 20-00 |
| 15. | ಬಿ.ವಿ. ಕಕ್ಕಿಲಾಯ | 20-00 |
| 16. | ಹೆಚ್.ಎಂ. ಚನ್ನಬಸಪ್ಪ | 20-00 |
| 17. | ಬಿ. ರಾಚಯ್ಯ | 20-00 |
| 18. | ಜೆ.ಬಿ. ಮಲ್ಲಾರಾಧ್ಯ | 15-00 |
| 19. | ಎಂ. ನಾಗಪ್ಪ | 15-00 |
| 20. | ಗಂಗಾಧರ ನಮೋಶಿ | 15-00 |

| | ಭಾಷಾಂತರ ಪುಸ್ತಕಗಳು | |
|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | 20-00 |
| 2. | ಡಾ॥ ರಾಮಮನೋಹರ ಲೋಹಿಯಾ | 15-00 |
| 3. | ವಿ.ಕೆ. ಕೃಷ್ಣಮೆನನ್ | 20-00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | 20-00 |
| 5. | ಶೇಖ್ ಮಹಮದ್ ಅಬ್ದುಲ್ಲಾ | 15-00 |
| 6. | ಡಾ॥ ರಾಜೇಂದ್ರ ಪ್ರಸಾದ್ | 20-00 |
| 7. | ಭೂಪೇಶ್ ಗುಪ್ತ | 20-00 |
| 8. | ಅನಂತಶಯನಂ ಅಯ್ಯಂಗಾರ್ | 20-00 |
| 9. | ಶ್ರೀಮತಿ ರಾಜಕುಮಾರಿ ಅಮೃತ್‌ಕೌರ್ | 20-00 |
| 10. | ಡಾ॥ ಚಿಂತಾಮಣಿ ಡಿ. ದೇಶ್‌ಮುಖ್ | 20-00 |
| 11. | ಪನಂಪಲ್ಲಿ ಗೋವಿಂದ ಮೆನನ್ | 15-00 |
| 12. | ಜೈಸುಖಲಾಲ್ ಹಾಥಿ | 15-00 |
| 13. | ಎಸ್.ಎಂ. ಜೋಷಿ | 15-00 |

ಮುದ್ರಕರು: ನಿರ್ದೇಶಕರು, ಸರ್ಕಾರಿ ಮುದ್ರಣಾಲಯ; ಪೀಣ್ಯ, ಬೆಂಗಳೂರು. ಎಲ್.ಎ ಪಿ-3.